# ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ
ಮಹಿಳಾ ಅಧ್ಯಯನ ವಿಭಾಗಕ್ಕೆ ಸಾದರಪಡಿಸಲಾದ ಮಹಾಪ್ರಬಂಧ

ಸಂಶೋಧಕರು
ಶಶಿಕಲಾ ಎಂ. ಮೊರಬದ

ಮಾರ್ಗದರ್ಶಕರು
ಡಾ. ಎಚ್.ಎಸ್. ಶ್ರೀಮತಿ
ಪ್ರಾಧ್ಯಾಪಕರು



328

ಮಹಿಳಾ ಅಧ್ಯಯನ ವಿಭಾಗ
(ಭಾಷಾ ನಿಕಾಯ)
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ-೫೮೩ ೨೭೬
೨೦೦೯

# ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು

**ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ**
**ಮಹಿಳಾ ಅಧ್ಯಯನ ವಿಭಾಗಕ್ಕೆ ಸಾದರಪಡಿಸಲಾದ ಮಹಾಪ್ರಬಂಧ**


ಸಂಶೋಧಕರು
**ಶಶಿಕಲಾ ಎಂ. ಮೊರಬದ**

ಮಾರ್ಗದರ್ಶಕರು
**ಡಾ.ಎಚ್.ಎಸ್. ಶ್ರೀಮತಿ**
ಪ್ರಾಧ್ಯಾಪಕರು







ಮಹಿಳಾ ಅಧ್ಯಯನ ವಿಭಾಗ
(ಭಾಷಾ ನಿಕಾಯ)
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ-೫೮೩೨೭೬
೨೦೦೬

## ಮಾರ್ಗದರ್ಶಕರ ದೃಢೀಕರಣ ಪತ್ರ

ಶಶಿಕಲಾ ಎಂ. ಮೊರಬದ ಅವರು "ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು" ಎಂಬ ಈ ಸಂಶೋಧನ ಮಹಾಪ್ರಬಂಧವನ್ನು ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದು, ಈ ಪ್ರಬಂಧವು ಮೂಲವಾಗಿದ್ದು ಈ ಮೊದಲು ಇನ್ನಾವುದೇ ಪದವಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಸುತ್ತೇನೆ.

**ಡಾ. ಎಚ್.ಎಸ್. ಶ್ರೀಮತಿ**
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ ೫೮೩೨೭೬

ದಿನಾಂಕ 2/9/09

ಸ್ಥಳ : ಬೆಂಗಳೂರು

## ಸಂಶೋಧಕರ ದೃಢೀಕರಣ ಪತ್ರ

ಶಶಿಕಲಾ ಎಂ. ಮೊರಬದ ಆದ ನಾನು "ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು" ಎಂಬ ಈ ಸಂಶೋಧನ ಮಹಾಪ್ರಬಂಧವನ್ನು ಡಾ. ಎಚ್.ಎಸ್. ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಸುತ್ತೇನೆ.

ದಿನಾಂಕ : 03-09-2009
ಸ್ಥಳ : ಬಾಗಲಕೋಟ

[signature]
**ಶಶಿಕಲಾ ಎಂ. ಮೊರಬದ**
ಸಂಶೋಧನಾ ವಿದ್ಯಾರ್ಥಿನಿ

## ಪರಿವಿಡಿ

**ಅಧ್ಯಾಯ – ಒಂದು**



**ಅಧ್ಯಾಯ – ಎರಡು**

**ಭಾಗ–೧**

## ಅಧ್ಯಾಯ – ಒಂದು

# ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು

## ಅಧ್ಯಾಯ-ಒಂದು

# ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡದ ಜನಪ್ರಿಯ ಕಾದಂಬರಿಗಳು

## ೧.೧ ಪ್ರಸ್ತಾವನೆ

ಭಾರತೀಯ ಕಾವ್ಯಮೀಮಾಂಸೆಯಲ್ಲಿ "ಪ್ರತಿಭೆ ಎಂಬ ಶಬ್ದದ ಅಕ್ಷರಾರ್ಥ 'ಹೊಳಹು'.......... ಸಮಾಹಿತವಾದ ಮನಸ್ಸಿನಲ್ಲಿ ಅನೇಕ ಪ್ರಕಾರವಾಗಿ ಅರ್ಥವೂ, ಅದನ್ನು ತಿಳಿಸಲು ಕ್ಲಿಷ್ಟವಲ್ಲದ ಪದಗಳು ಯಾವುದರಿಂದ ಹೊಳೆಯುವುವೋ ಅದೇ ಶಕ್ತಿ, ಇದನ್ನೇ ಪ್ರತಿಭೆ ಎಂದು ಇತರರು ಕರೆಯುವರು"[೧] ಎಂದು ಪ್ರತಿಭೆಯನ್ನು ವ್ಯಾಖ್ಯಾನಿಸುತ್ತಾರೆ. ನಿಶ್ಚಲವಾದ ಮನಸ್ಥಿತಿಯಲ್ಲಿ ಅನೇಕ ಅರ್ಥಗಳು ಹುಟ್ಟಿ, ಅವು ಭಾಷೆಯ ಮೂಲಕ ಮೈದಳೆಯುವ ಪ್ರಕ್ರಿಯೆಯೇ ಅಭಿವ್ಯಕ್ತಿ. ಅನೇಕ ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸಕರು ಇದೇ ಅಭಿಪ್ರಾಯವನ್ನು ಮಂಡಿಸಿ, ಚರ್ಚಿಸಿ, ಬೆಳೆಸಿದ್ದಾರೆ. ಪ್ರತಿಭೆ ಎನ್ನುವುದು ಪ್ರಜ್ಞಾ ವಿಶೇಷ ಎಂದೂ ಪರಿಗಣಿತವಾಗಿದೆ. ಪ್ರಜ್ಞೆ ಎಂಬುದು 'ಸ್ಮೃತಿ', 'ಬುದ್ಧಿ' ಮತ್ತು 'ಮತಿ' ಈ ಮೂರನ್ನು ಒಳಗೊಳ್ಳುತ್ತದೆ. ಎಂಬುದು ವಿದ್ವಾಂಸರ ಅಭಿಮತ. ಈ ಚರ್ಚೆಯನ್ನು ಮುಂದುವರೆಸುತ್ತ 'ರಾಜಶೇಖರ' ತನ್ನ ಕೃತಿ 'ಕಾವ್ಯಮೀಮಾಂಸೆ'ಯಲ್ಲಿ "ಪ್ರತಿಭೆಯ ತಾರತಮ್ಯದಿಂದಲೇ ಕವಿಗಳ ಪ್ರತಿಷ್ಠೆ ಅಥವಾ ಸ್ಥಾನ-ಮಾನ ಈ ಲೋಕದಲ್ಲಿ ಬೇರೆ-ಬೇರೆಯಾಗುತ್ತದೆ"[೨] ಎನ್ನುತ್ತಾನೆ.

ಮೇಲಿನ ಚಿಂತನೆಗಳಿಂದ ವಿದಿತವಾಗುವುದು ಏನೆಂದರೆ, ಸೃಜನಶೀಲತೆ ಧ್ಯಾನಸ್ಥ ಸ್ಥಿತಿಯಲ್ಲಿ ಹುಟ್ಟಿ, ಅನೇಕ ಹೊಸ ರೂಪಗಳೊಂದಿಗೆ ಭಾಷೆಯಲ್ಲಿ ವ್ಯಕ್ತವಾಗುವ ಒಂದು ಸಂಗತಿ. ಪ್ರತಿಭೆಯಿರುವ ಯಾರಾದರೂ ತಮ್ಮ ವಿಶೇಷ ಪ್ರಜ್ಞೆಯಿಂದ ಲೋಕಸತ್ಯವನ್ನು ಹೊಸ ಹೊಸದಾಗಿ ಕಾಣುವ ಹಾಗೂ ಹೊಸ ಹೊಸದಾಗಿ ಕಟ್ಟುವ ಪ್ರಕ್ರಿಯೆಯಲ್ಲಿ ತೊಡಗಬಹುದು. ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಪ್ರತಿಭೆಗೆ ಅನುಗುಣವಾಗಿ ಸಾಹಿತ್ಯ ರಚನೆಯಾಗುತ್ತದೆ. ಲೋಕದ ಗಂಡು-ಹೆಣ್ಣುಗಳು ತಮ್ಮ ಲೋಕ ಸತ್ಯಗಳನ್ನು ಕಾವ್ಯ, ಸಾಹಿತ್ಯದಲ್ಲಿ ಅಭಿವ್ಯಕ್ತಿಸುತ್ತಾರೆ, ಆದರೆ 'ಜೆ. ಝುಡ್ ಯಾಂಗ್' "ನಮ್ಮ ಒಬ್ಬೊಬ್ಬರ ಮೆದುಳೂ ಅವನ ಅಥವಾ ಅವಳ ಲೋಕವೊಂದನ್ನು ಅಕ್ಷರಶಃ ಸೃಜಿಸುತ್ತದೆ"[೩] ಎನ್ನುವ ಮಾತು ಪುರುಷ ಮತ್ತು ಮಹಿಳಾ ಅಭಿವ್ಯಕ್ತಿಯ ವ್ಯತ್ಯಾಸವನ್ನು ಹೇಳುತ್ತದೆ.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ನಿರ್ಮಾಣಗೊಂಡ ಎಲ್ಲ ಸಂಸ್ಥೆಗಳಲ್ಲೂ ಪುರುಷ ಪ್ರಧಾನ ಧೋರಣೆಗಳು ಇದ್ದೇ ಇರುತ್ತವೆ. ತನ್ನ ಅನುಕೂಲಕ್ಕೆ ತಕ್ಕಂತೆ ಎಲ್ಲವನ್ನು ಸರಿಹೊಂದಿಸಿಕೊಳ್ಳುತ್ತ ಅದನ್ನೇ ಸತ್ಯವೆಂದು ಅಧಿಕಾರದ ನೆಲೆಯಿಂದ ಪುರುಷ ಲೋಕ ನಿರ್ದೇಶಿಸುತ್ತಿರುತ್ತದೆ. 'ರೂಸೋ'ನ "ಮನುಷ್ಯ ಹುಟ್ಟಿನಿಂದ ಸ್ವತಂತ್ರನಾಗಿದ್ದರೂ ಬೆಳೆಯುತ್ತ ಅನೇಕ ರೀತಿಯ ಬಂಧನಗಳಿಗೆ ಒಳಗಾಗಿದ್ದಾನೆ" ಎಂಬ ಮಾತು ಪುರುಷನಿಗಿಂತ ಮಹಿಳೆಗೆ ಹೆಚ್ಚು ಅನ್ವಯಿಸುತ್ತದೆ. ಮನುಷ್ಯಳಾದ ಅವಳಿಗೆ ಜೈವಿಕ ಅಸ್ತಿತ್ವ ಒಂದಿದ್ದರೆ ಸಾಮಾಜಿಕ ಅಸ್ತಿತ್ವ ಇನ್ನೊಂದಿರುತ್ತದೆ ಮತ್ತು ಸಾಮಾಜಿಕ ಅಸ್ತಿತ್ವವೇ ಹೆಚ್ಚು ಗಾಢವಾಗಿ ಅವಳನ್ನಾವರಿಸಿಕೊಂಡ ವಾಸ್ತವವಾಗಿರುತ್ತದೆ. ಈ ವಾಸ್ತವ ಅವಳ ಬುದ್ಧಿ ಭಾವ, ಬದುಕನ್ನು ಆವರಿಸಿಕೊಂಡ ಸಂಗತಿಯನ್ನು ಅರಿಯದಂಥ ವಿಸ್ಮೃತಿಯೊಂದು ಶತಮಾನಗಳಿಂದ ಅವಳನ್ನು ಸುತ್ತುವರೆದಿದೆ. ಪುರುಷಾಧಿಕಾರದ ನೆಲೆಯ ಚಿಂತನೆಯಿಂದ ಸಾಹಿತ್ಯ ಕ್ಷೇತ್ರವೂ ಹೊರತಲ್ಲ. ಆದ್ದರಿಂದ, ಸಾಹಿತ್ಯದ ಚಿಂತನೆಗಳು ಮಹಿಳೆಯ ಅಭಿವ್ಯಕ್ತಿಯನ್ನು ಸರಿಯಾದ ನೆಲೆಯಲ್ಲಿ ಗ್ರಹಿಸದೆ ಇರುವುದನ್ನು ಸ್ತ್ರೀವಾದಿ ಚಿಂತನೆಯ ಓದಿನ ಕ್ರಮದಿಂದ ಗ್ರಹಿಸಬಹುದು. ಈ ಅಧ್ಯಯನದಲ್ಲಿ ಮಹಿಳೆಯ ಅಭಿವ್ಯಕ್ತಿಯ ನೆಲೆ-ಬೆಲೆಗಳನ್ನು ಸ್ತ್ರೀವಾದಿ ಚಿಂತನೆಯ ಹಿನ್ನೆಲೆಯಲ್ಲಿ ಕಂಡುಕೊಳ್ಳುವ, ಆ ಮೂಲಕ ಮಹಿಳೆಯ ಮುಂದಣ ಹೆಜ್ಜೆಗಳನ್ನು ಗಟ್ಟಿಮಾಡುವ ನಮ್ರ ಪ್ರಯತ್ನವನ್ನು ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ, ತಾತ್ವಿಕತೆ

ಪಾರಂಪರಿಕ ಸಾಹಿತ್ಯ ಸಿದ್ಧಾಂತಗಳಲ್ಲಿ ಇರುವ ಚಿಂತನಾಕ್ರಮ ಸೃಜನತೆಯನ್ನು, ಬೌದ್ಧಿಕತೆಯನ್ನು ಮಾಪನ ಮಾಡಲು ಬಳಸುವ ಮಾನದಂಡಗಳು ಪುರುಷಪ್ರಧಾನ ವ್ಯವಸ್ಥೆಯನ್ನು ಒಪ್ಪಿಡುವಂತಿರುವುದರಿಂದ ಮಹಿಳೆಯ ಸೃಜನತೆಯ ಬಗ್ಗೆ, ಬೌದ್ಧಿಕತೆಯ ಬಗ್ಗೆ ಪಾರ್ಶ್ವಿಕವಾಗಿ ಚಿಂತನೆಯನ್ನು ಮಾಡುತ್ತವೆ. ತನ್ನ ಮೂಗಿನ ನೇರಕ್ಕೆ ಸಿದ್ಧಾಂತಗಳನ್ನು ರೂಪಿಸಿ ಅಧೀನ ನೆಲೆಯಲ್ಲಿರುವವರ ಮೇಲೆ ಅದನ್ನು ಹೇರಿ ಅದೇ ಸತ್ಯ ಎಂದು ಸಾರುತ್ತವೆ. ಶತಶತಮಾನಗಳಿಂದ ಅಧೀನ ಬದುಕನ್ನು ಅನಿವಾರ್ಯವಾಗಿ ಒಪ್ಪಿ ನಡೆಯಬೇಕಾದ ಸಂದರ್ಭದಲ್ಲಿ, ಮಹಿಳೆ ಅಧಿಕಾರ ವ್ಯವಸ್ಥೆಗೆ ಅನುಗುಣವಾಗಿ ಬದುಕುತ್ತಿರುವುದು ಚಾರಿತ್ರಿಕ ವಾಸ್ತವ. ಆದ್ದರಿಂದಲೇ ಮಹಿಳೆಯ ಅಭಿವ್ಯಕ್ತಿಯನ್ನು ಸ್ತ್ರೀವಾದಿ ನೆಲೆಯಲ್ಲಿ ಗ್ರಹಿಸಲು ಈ ಅಧ್ಯಯನ ಬಯಸುತ್ತದೆ. ಸ್ತ್ರೀವಾದಿ ಅಧ್ಯಯನಕ್ಕೆ ಮಹಿಳಾ ಬದುಕಿಗೆ ಸಂಬಂಧಿಸಿದ ಎಲ್ಲ ಸಣ್ಣ-ಪುಟ್ಟ, ದೊಡ್ಡ ಸಂಗತಿಗಳು ಮುಖ್ಯ ಮತ್ತು

ಆಸಕ್ತಿದಾಯಕವಾಗಿರುವುದರಿಂದ ಅವಳ ಸೃಜನತೆ, (ಬೌದ್ಧಿಕತೆ) ಪ್ರಜ್ಞೆ, ಅಭಿವ್ಯಕ್ತಿ – ಈ ಎಲ್ಲ ಸಂಗತಿಗಳು ಬಹಳ ಮುಖ್ಯವಾಗುತ್ತವೆ. ಸ್ತ್ರೀವಾದಿ ಅಧ್ಯಯನ ತನ್ನ ಸಿದ್ಧಾಂತಗಳ ಮೂಲಕ ಪಾರಂಪರಿಕ ಚಿಂತನೆಗಳಿಗಿಂತ ವಿಭಿನ್ನವಾದ ನೆಲೆಯಲ್ಲಿ ಮಹಿಳಾ ಬದುಕನ್ನು ನೋಡಲು, ಗ್ರಹಿಸಲು ಪ್ರಯತ್ನಿಸುತ್ತದೆ. ಹಳೆಯ ಓದಿನ ಕ್ರಮಕ್ಕೆ ಬದಲಾಗಿ ಹೊಸ ಓದಿನ ಕ್ರಮವನ್ನು ಅಳವಡಿಸಿಕೊಂಡಾಗ ಗೋಚರಿಸುವ ಸತ್ಯಗಳು ಬೇರೆಯೇ ಆಗಿರುವುದರಿಂದ, ಸಾಹಿತ್ಯಾಭಿವ್ಯಕ್ತಿಗೆ ಮೂಲವಾದ ಸೃಜನತೆಗೆ ಸಂಬಂಧಿಸಿದ ಚರ್ಚೆಗಳು, ಸೃಜನತೆ ವಸ್ತು, ತಂತ್ರ, ಭಾಷೆಗಳ ಮೂಲಕ ಹಾಯ್ದು ಬರುವಾಗಿನ ತೊಡಕುಗಳು, ಹೇಗೋ ಏನೋ ಹಾಯ್ದು ಬಂದಾಗ ಅದು ಎದುರಿಸುವ ವಿಮರ್ಶೆ–ಇವುಗಳನ್ನು ರೂಢಿಗತ ಸಂಪ್ರದಾಯ ಸಾಹಿತ್ಯ ಸಿದ್ಧಾಂತಗಳಿಗಿಂತ ಭಿನ್ನವಾಗಿ ಸ್ತ್ರೀವಾದಿ ಸಿದ್ಧಾಂತ ಚರ್ಚಿಸುತ್ತದೆ. ಈ ಕಾರಣದಿಂದಲೇ ಸಾಹಿತ್ಯದ ವಿದ್ಯಾರ್ಥಿನಿಯಾಗಿ, ಮಹಿಳಾ ಬದುಕಿನಲ್ಲಿ ಆಸಕ್ತಿ ಇರುವುದರ ಕಾರಣ ಮಹಿಳಾ ಸಾಹಿತ್ಯದ ಅಭಿವ್ಯಕ್ತಿಯ ಸಂದರ್ಭವನ್ನು ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

ಪ್ರಸ್ತಾವನೆಯ ಮಾತುಗಳನ್ನು ಮತ್ತೆ ಚರ್ಚೆಯಲ್ಲಿ ತರುವುದಾದರೆ ಸಾಹಿತ್ಯ ಚಿಂತನೆಗಳಲ್ಲಿ ಪ್ರತಿಭೆಯನ್ನು ಕುರಿತು ಮಾತನಾಡುವಾಗ ಸೃಜನಶೀಲತೆ ಧ್ಯಾನಸ್ಥ ಸ್ಥಿತಿಯಲ್ಲಿ ಗೂಡುಕಟ್ಟಿದರೆ ಸೃಷ್ಟಿ ಸಾಧ್ಯ ಎನ್ನುತ್ತದೆ. ಸಾಹಿತ್ಯ ಚಿಂತನೆಗಳ ಪ್ರಕಾರ ಗಂಡು–ಹೆಣ್ಣು ತಾರತಮ್ಯವಿಲ್ಲದೆ ಈ ಪ್ರಕ್ರಿಯೆಯಲ್ಲಿ ಯಾರಿಗೆ ತೊಡಗಿಕೊಳ್ಳಲು ಸಾಧ್ಯವೋ ಅವರಿಗೆ ಅಭಿವ್ಯಕ್ತಿ ಸಾಧ್ಯ ಎನ್ನುತ್ತದೆ. ಆದರೆ ಸ್ತ್ರೀವಾದಿ ಚಿಂತನೆ ಮಹಿಳೆಯ ಸೃಜನತೆ, ಅದು ಸರಿಯಾಗಿ ಅಭಿವ್ಯಕ್ತಗೊಳ್ಳಲು ಆಗದಿರುವ ಸಂದರ್ಭಕ್ಕೆ ಕಾರಣಗಳನ್ನು ಶೋಧಿಸುತ್ತದೆ. ಈಗಾಗಲೇ ವಿದಿತವಾಗಿರುವಂತೆ ನಮ್ಮ ಲೋಕಸತ್ಯ ನಾನಾ ರೀತಿಯ ಅಸಮಾನತೆ ಮತ್ತು ಭೇದಗಳಿಂದ ಕೂಡಿರುವಂಥದು. 'ಲೇವಿಸ್ಟ್ರಾಸ್' ಗುರುತಿಸಿರುವಂತೆ "ಸಾಮಾಜಿಕ ಅಧಿಕಾರ ಯಾವಾಗಲೂ ಪುರುಷನದೇ." ಅದು ಅವನ ಚರಿತ್ರೆ. ಪುರುಷನಿಗಿಂತ ಭಿನ್ನವಾದ ಜೈವಿಕ ಲಕ್ಷಣಗಳನ್ನು ಹೊಂದಿದ ಮಹಿಳೆ ತನಗೆ ಒದಗಿದ ಸಾಮಾಜೀಕರಣದ ಕಾರಣದಿಂದ, ಆರೋಪಿತ 'ಸ್ತ್ರೀತ್ವ'ದಲ್ಲಿ ರೂಪುಗೊಳ್ಳಬೇಕಾಗುತ್ತದೆ. ಈ ಕಾರಣದಿಂದ ಮಹಿಳೆ ಪುರುಷನಿಗೆ 'ಅನ್ಯ'ಳಾಗಿ ಇರುವುದರ ಜೊತೆಗೆನೇ ದ್ವಿತೀಯ ದರ್ಜೆಯ ಪ್ರಜೆಯೂ ಆಗುತ್ತಾಳೆ. ಇದನ್ನು ಕುರಿತು ಸ್ತ್ರೀವಾದದ ಮಾತೃಚಿಂತಕಿ 'ಸಿಮೋನ್ ದ ಬೋವಾ' ತನ್ನ ಕೃತಿ 'ದ ಸೆಕೆಂಡ್ ಸೆಕ್ಸ್'ನಲ್ಲಿ ದೀರ್ಘವಾದ ಚರ್ಚೆಯನ್ನು

ಮಾಡುತ್ತಾಳೆ. ಗಂಡು-ಹೆಣ್ಣುಗಳ ಭಿನ್ನತೆ ಒಂದು ಜೈವಿಕ ವಾಸ್ತವ ಎನ್ನುವ ಬೋವಾ ಅದನ್ನು ತೊಡೆದು ಹಾಕುವುದು ಸಾಧ್ಯವಿಲ್ಲ ಎನ್ನುತ್ತಾಳೆ. ಮತ್ತು ಮಹಿಳೆಯ ಶೋಷಣೆಯ ಪ್ರಾರಂಭ ಚಾರಿತ್ರಿಕ ಮೂಲಭೂತವಾದ ಮತ್ತು ಜೀವಶಾಸ್ತ್ರದ ನೆಲೆಯಿಂದಲೇ ಎನ್ನುವದನ್ನು ಗುರುತಿಸುತ್ತಾಳೆ. ಹೆಣ್ಣು ಅಪರಿಪೂರ್ಣ ಎನ್ನುವ ಧೋರಣೆ ಅರಿಸ್ಟಾಟಲ್‌ನ ಮಾತುಗಳಲ್ಲಿ ಕಂಡು ಬರುವುದನ್ನು ಗುರುತಿಸುತ್ತಾಳೆ. ಅವನ ಪ್ರಕಾರ "ಹೆಣ್ಣು ಏಕೆ ಹೆಣ್ಣು ಎಂದರೆ ಆಕೆಗೆ ಕೆಲವು ಗುಣಗಳ ಕೊರತೆ ಇದೆ" ಹಾಗೂ "ಹೆಣ್ಣು ಸಹಜವಾದ ದೋಷಗಳಿಂದ ಕೂಡಿದ್ದಾಳೆ ಎಂದು ನಾವು ಪರಿಗಣಿಸಬೇಕು" ಎಂದು ಹೇಳುತ್ತಾನೆ. ಸೆಂಟ್ ಥಾಮಸ್ "ಹೆಂಗಸು ಎಂದರೆ ಅಪರಿಪೂರ್ಣ ಗಂಡಸು" ಎಂದು ಹೇಳುತ್ತಾನೆ ಎನ್ನುವುದನ್ನು ವಿವರಿಸುತ್ತಾಳೆ. ಬೈಬಲ್ಲಿನಲ್ಲಿನ 'ಜನೆಸಿಸ್'ನ ವಿವರಣೆಯ ಪ್ರಕಾರ ಒಂದು ಭಾಗ ಈವ್ ಆಡಮ್‌ನ ಹೆಚ್ಚುವರಿ ಎಲುಬಿನಿಂದ ಸೃಷ್ಟಿಯಾದವಳಂತೆ. ಈ ಎಲ್ಲ ವಿಚಾರಗಳನ್ನು ಕುರಿತು ಬೋವಾ ಹೀಗೆ ಹೇಳುತ್ತಾಳೆ "ಹೀಗೆ ಮಾನವಕುಲವೇ ಗಂಡು. ಗಂಡಸು ಹೆಣ್ಣನ್ನು ಆಕೆಯ ಸ್ವಂತಿಕೆಯಲ್ಲಿ ವ್ಯಾಖ್ಯಾನಿಸದೇ ತನಗೆ ಸಂಬಂಧಿಸಿದಂತೆ ವ್ಯಾಖ್ಯಾನಿಸುತ್ತಾನೆ. ಆಕೆ ಸ್ವತಂತ್ರ ವ್ಯಕ್ತಿಯಲ್ಲ.......... ಗಂಡು ತಾನು ಹೆಂಗಸಿರದೇ ಇರುವ ಸ್ಥಿತಿಯನ್ನು ಕಲ್ಪಿಸಿಕೊಳ್ಳಬಲ್ಲ........... ಹೆಣ್ಣಿನ ಅಸ್ತಿತ್ವ ಗಂಡಸಿನ ಅಪ್ಪಣೆಯಲ್ಲಿದೆ. ಆದ್ದರಿಂದಲೇ, ಆಕೆಯನ್ನು 'ಲೈಂಗಿಕತೆ' ಎನ್ನಲಾಗಿದೆ. ಅಂದರೆ ಆಕೆ ಗಂಡಿಗೆ ಕಾಮದ ಜೀವವಾಗಿ ಮಾತ್ರ ಕಾಣಿಸಿಕೊಳ್ಳುತ್ತಾಳೆ. ಆತನಿಗೆ ಆಕೆ ಕಾಮದ ಮುದ್ದೆ ಮಾತ್ರ. ಶುದ್ಧಾಂಗವಾಗಿ ಕಾಮ. ಇಲ್ಲಿ ಆಕೆಯನ್ನು ವ್ಯಾಖ್ಯಾನಿಸಿರುವುದು ಗಂಡಿಗೆ ಸಂಬಂಧಿಸಿದಂತೆ ಮಾತ್ರ; ಆಕೆಯ ಸ್ವಂತಕ್ಕೆ ಸಂಬಂಧಿಸಿದಂತೆ ಅಲ್ಲ. ಆಕೆ ಒಂದು ಆಕಸ್ಮಿಕ ಅಷ್ಟೆ. ಅತ್ಯಗತ್ಯಕ್ಕೆ ಸಂಬಂಧಿಸಿದಂತೆ ಅಸ್ತಿತ್ವದಲ್ಲಿರುವ ಒಂದು ಅನಗತ್ಯ ಆಕೆ. ಆತನೇ ಕರ್ತೃ, ಆತನೇ ಆತ್ಯಂತಿಕ ಶಕ್ತಿ. ಆಕೆ ಏನಿದ್ದರೂ 'ಅನ್ಯ'". [೮]

ದ್ವಿತೀಯ ದರ್ಜೆಯ ಪ್ರಜೆಯಾಗಿ ಬದುಕುತ್ತಿರುವ ಸಂದರ್ಭದಲ್ಲಿ ಅವಳ ಬುದ್ಧಿ, ಭಾವ, ಬದುಕು ಎಲ್ಲವೂ ಹತ್ತಿಕ್ಕಲ್ಪಟ್ಟಿರುತ್ತದೆ. ಮಾರ್ಕ್ಸವಾದವು ಮಹಿಳೆಯನ್ನು 'ಹತ್ತಿಕ್ಕಲ್ಪಟ್ಟ ಸಾಮಾಜಿಕ ವರ್ಗ' ಎಂದು ಸ್ಪಷ್ಟವಾಗಿ ಗ್ರಹಿಸುತ್ತದೆ. ಮಹಿಳೆಯ ಒಟ್ಟು ಬದುಕು ಗೃಹಿಣಿತ್ವ ಎನ್ನುವ ದೊಡ್ಡ ಜಾಲದೊಳಗೆ ಬಂಧಿತವಾಗಿರುತ್ತದೆ. ಅಲ್ಲಿನ ಪುನರಾವರ್ತಿತ, ನಿಗದಿತ, ಕೆಲಸಗಳು ಅವಳನ್ನು ಪೂರ್ತಿಯಾಗಿ ಆವರಿಸಿಕೊಂಡು, ಅವಳ ಬದುಕು ಗಾಣದೆತ್ತಿನ ಹಾಗೆ ಯಾಂತ್ರಿಕವಾಗಿರುತ್ತದೆ. ಗೃಹಿಣಿತ್ವದಲ್ಲಿ ಅವಳ ಚಲನಶೀಲತೆ ನಿಷ್ಕ್ರಿಯವಾಗುತ್ತದೆ.

ಸ್ತ್ರೀವಾದಿಯಾದ 'ಬೆಟ್ಟಿ ಫ್ರೀಡನ್' ಗೃಹಿಣಿತ್ವ ಮಹಿಳೆಯ ದೈಹಿಕ, ಮಾನಸಿಕ ಆರೋಗ್ಯದ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎನ್ನುವುದನ್ನು ಸಾದ್ಯಂತವಾಗಿ ವಿವರಿಸುತ್ತಾಳೆ. ಬೆಟ್ಟಿ ವಿವರಿಸುವಂತೆ ಮಹಿಳೆಯರು ಖಾಲಿತನದ, ನಿರರ್ಥಕತೆಯ ಶೂನ್ಯದ ಭಾವವನ್ನು ಅನುಭವಿಸುತ್ತಿರುತ್ತಾರೆ. ಈ ಸ್ಥಿತಿಯಲ್ಲಿ ಅವರು ಹೇಳುವ ಮಾತುಗಳಿವು : "I feel empty somehow............ incomplete" or She would say I feel as if I don't exist".......... sometimes, she went to a doctor with symtons she could hardly describe ; 'A tired feeling……... I get so angry with the children it scares me............ I feel like crying without any reason".[೪] ಈ ಸಂದರ್ಭವನ್ನು ಅವಳ ಮನಸ್ಥಿತಿಯನ್ನು ಸರಿಯಾಗಿ ಗ್ರಹಿಸದ ವೈದ್ಯರು ಇದಕ್ಕೆ ಪರಿಹಾರವನ್ನು ಕಂಡುಹಿಡಿಯಲು ಸಾಧ್ಯವಾಗದೆ "the housewife's syndrome" ಎಂದು ಹೆಸರಿಸಿದರು.

ಹೀಗೆ ದೈಹಿಕವಾಗಿ ಸದಾ ಕೆಲಸಗಳಲ್ಲಿ ನಿರತಳಾಗಿರುವ, ಮಾನಸಿಕವಾಗಿ ಶೂನ್ಯದ ಭಾವವನ್ನು ಹೊಂದಿರುವ ಮಹಿಳೆಗೆ ಧ್ಯಾನಸ್ಥಳಾಗುವ ಸಾಧ್ಯತೆ ಹೇಗೆ ಸುಲಭ ಸಾಧ್ಯ, ಅಡುಗೆಮನೆ, ಹಿತ್ತಲೇ ಅವಳ ಸಾಮ್ರಾಜ್ಯವಾಗಿರುವಾಗ ದೇಶ ಸುತ್ತಲೂ ಕೋಶ ಓದಲು ಹೇಗೆ ಸಾಧ್ಯ, ಅವಳ ಮನಸ್ಸು ಸಮಾಹಿತವಾಗುವುದಕ್ಕೆ ಅವಕಾಶಗಳೇ ಇಲ್ಲದ ಸಂದರ್ಭದಲ್ಲಿ ಅವಳ ಸೃಜನತೆ ಅರಳಲು, ಸಾಧ್ಯವೇ, 'ಇಮಾನುಯಲ್ ಕ್ಯಾಂಟ್' ಎಂಬ ಪಾಶ್ಚಾತ್ಯ ತತ್ವಶಾಸ್ತ್ರಜ್ಞನು "ಈ ಮನಸ್ಸು ತನಗೆ ಅರಿವಿಲ್ಲದಯೇ ಸೃಜಿಸುವ ಸಾಮರ್ಥ್ಯವನ್ನು ಪಡೆದಿದೆ" ಎನ್ನುತ್ತಾ ಸೃಜನ ಸಾಮರ್ಥ್ಯವನ್ನು ಕುರಿತು ಹೀಗೆ ವಿವರಿಸುತ್ತಾನೆ. "ಮನಸ್ಸಿನ ಈ ಕ್ರಿಯೆ ತನಗೆ ಬಂದೊದಗುವ ಅನುಭವಗಳನ್ನು ಸಂಯೋಜಿಸುವ ಸಾಮರ್ಥ್ಯ ಉಳ್ಳದ್ದು, ಮನಸ್ಸು ಸೃಜನಾತ್ಮಕವಾದದ್ದು ಎಂದರೆ ಅದರ ಅರ್ಥ ಇಷ್ಟೆ: ಲೋಕಾನುಭವಗಳು ನಮ್ಮ ಮನಸ್ಸಿಗೆ ಯಾವುದೋ ಒಂದು ಕ್ರಮಬದ್ಧವಾದ ವ್ಯವಸ್ಥೆಯಲ್ಲಿ ಬಂದೊದಗುವುದಿಲ್ಲ; ಅಲ್ಲದೆ ಮನಸ್ಸು ತನ್ನ ಸುತ್ತಣ ಅನುಭವಗಳನ್ನು ಕನ್ನಡಿಯಂತೆ ಪ್ರತಿಫಲಿಸುವುದಿಲ್ಲ. ಅಥವಾ ಒಂದು ಬಿಳಿ ಹಾಳೆಯಂತೆ ಅನುಭವದ ಒತ್ತುಗಳನ್ನು ಪಡೆಯುತ್ತದೆ ಎಂದಲ್ಲ. ಅದರ ಬದಲು, ಅದು ತನಗೆ ಸಂವೇದನೆಯ ರೂಪದಲ್ಲಿ ಪ್ರಾಪ್ತವಾದ ಈ ಅವ್ಯವಸ್ಥಿತ ಅನುಭವಗಳನ್ನು ಗ್ರಹಿಸಿ, ಅವುಗಳನ್ನು ಒಂದು ವ್ಯವಸ್ಥೆಯಲ್ಲಿ ಸಂಘಟಿಸುತ್ತದೆ".[೫] ಇಂಥ ಶಕ್ತಿಯನ್ನು ಮಹಿಳೆಯ ಮನಸ್ಸು, ಪ್ರಜ್ಞೆ ಹೊಂದಿದ್ದರೂ ಅದಕ್ಕೆ ಪೂರಕವಾದ ವಾತಾವರಣ ಇಲ್ಲ. ಅವಳ ಸಾಮಾಜಿಕತೆ ಅವಳಿಗೆ

ಆರ್ಥಿಕವಾಗಿ, ಬೌದ್ಧಿಕವಾಗಿ, ಲೈಂಗಿಕವಾಗಿ ಅನೇಕ ದಿಗ್ಬಂಧನಗಳನ್ನು ಹಾಕಿ, ಅವಳ ಚೈತನ್ಯವನ್ನು ಮುರುಟಿಸಿದೆ. ಎಚ್.ಎಸ್. ಶ್ರೀಮತಿಯವರು ಹೇಳುವಂತೆ ಗೃಹಿಣಿ ಎಂಬುದಷ್ಟೇ ಅವಳ ಚಹರೆ.

ಇಂಥ ಉಸಿರುಕಟ್ಟಿಸುವ ಸಂದರ್ಭದಲ್ಲಿ ಹೇಗೋ ಏನೋ ಅವಳ ಚೈತನ್ಯ ಕೆಲವು ಬಾರಿ ಸುತ್ತಲಿನ ವಾತಾವರಣದ ಪ್ರಭಾವದಿಂದ, ಉದಾರವಾದಿ ನೆಲೆಯ ಪ್ರೋತ್ಸಾಹದಿಂದ ಓದು, ಬರಹಗಳು ದೊರೆತು ಅವಳ ಸೃಜನತೆ ಅಭಿವ್ಯಕ್ತಿಗೊಳ್ಳುತ್ತದೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅಕ್ಕಮಹಾದೇವಿ, ವಚನಕಾರ್ತಿಯರು, ದಾಸ ಸಾಹಿತ್ಯದ ಸಂದರ್ಭದಲ್ಲಿನ ಬರಹಗಾರ್ತಿಯರು, ಒಡೆಯರ ಕಾಲದ ಸಂಚಿಯ ಹೊನ್ನಮ್ಮ, ಶೃಂಗಾರಮ್ಮ ನವೋದಯದ ಸಂದರ್ಭದಲ್ಲಿನ ಲೇಖಕಿಯರು............ ತಮಗೆ ದೊರೆತ ಅವಕಾಶಗಳನ್ನು ಉಪಯೋಗಿಸಿಕೊಂಡು ಬರಹದ ಮೂಲಕ ತಮ್ಮನ್ನು ಪ್ರಕಟಗೊಳಿಸಿಕೊಂಡಿದ್ದಾರೆ.

ಅಕ್ಕನಂಥ ಕೆಲವು ಸ್ವಯಂಭೂ ಚೇತನಗಳನ್ನು ಬಿಟ್ಟರೆ, ಉಳಿದವರಲ್ಲಿ ಆಗ ತಾನೇ ತಮ್ಮದಲ್ಲದ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಸಂದರ್ಭದಲ್ಲಿ ಶ್ರೇಷ್ಟವಾದ ಅಭಿವ್ಯಕ್ತಿಯೇ ಮೂಡಿಬರುತ್ತದೆ ಎಂಬುದು, ಉತ್ಪ್ರೇಕ್ಷೆಯ ಮಾತಾಗುತ್ತದೆ. ತನ್ನ ಲೋಕದ ಅನುಭವಗಳನ್ನು ಮುಖ್ಯ ಮಾಡಿಕೊಂಡು ಅಭಿವ್ಯಕ್ತಿಸಲು ಹೊರಟಾಗ ಅವಳಿಗೆ ಅನೇಕ ಸಮಸ್ಯೆಗಳು ಎದುರಾಗುತ್ತವೆ.

ಪಿತೃಪ್ರಧಾನ ಸಮಾಜ ಮಹಿಳಾ ಅಭಿವ್ಯಕ್ತಿಯನ್ನು ಎರಡು ನೆಲೆಗಳಲ್ಲಿ ನಿರಾಕರಿಸುತ್ತದೆ. ಒಂದು ಚರಿತ್ರೆಯಲ್ಲಿ 'ಕಾಣೆ' ಆಗಿಸುವುದರ ಮೂಲಕ, ಎರಡು ಅವಳು ಸೃಷ್ಟಿಸಿದ್ದನ್ನು ಅಪಮೌಲ್ಯ ಮಾಡುವುದರ ಮೂಲಕ ಅಂಚಿಗೆ ಸರಿಸುತ್ತದೆ. ಮಹಿಳೆಯ ಅಭಿವ್ಯಕ್ತಿಯ ದಾಖಲೆ ಸಾಹಿತ್ಯ ಚರಿತ್ರೆಗಳಲ್ಲಿ ಕಾಣುವುದು ಅಲ್ಲೊಂದು, ಇಲ್ಲೊಂದು ಮಾತ್ರವೇ. ಸಾಹಿತ್ಯ ಚರಿತ್ರೆಯೇನೂ ಲಿಂಗಬೇಧದಿಂದ ಹೊರತಾಗುಳಿದಿಲ್ಲ. ಅಲ್ಲೂ ವರ್ಗ, ಲಿಂಗ, ಜಾತಿ–ರಾಜಕೀಯಗಳ ಪ್ರೇರಣೆಯಿಂದಲೇ ಸಾಹಿತ್ಯ ಚರಿತ್ರೆಗಳು ನಿರ್ಮಾಣಗೊಂಡಿವೆ. ಮಹಿಳಾ ಸೃಜನ ಶಕ್ತಿಯ ಬಗ್ಗೆ ಸದಾ ಭಯವಿರುವ ಪಿತೃಪ್ರಧಾನ ಸಮಾಜ, ಚರಿತ್ರೆಯಿಂದಲೇ ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನು 'ಕಾಣೆ' ಮಾಡಿಬಿಟ್ಟರೆ, ಮುಂದೆ ಅವುಗಳ ಬಗ್ಗೆ ವಿಮರ್ಶೆ, ಮೌಲ್ಯಮಾಪನ, ಶ್ರೇಣೀಕರಣ ಪ್ರಕ್ರಿಯೆಗಳನ್ನು ಮಾಡುವ ಅಗತ್ಯವೇ ಇರುವುದಿಲ್ಲವೆಂಬ ಕಾರಣಕ್ಕೆ ಅವನದೇ ಚರಿತ್ರೆಯನ್ನು ನಿರ್ಮಿಸಿಕೊಂಡಿತು. ಸಾಹಿತ್ಯ ಚರಿತ್ರೆಕಾರರು ಪುರುಷ ಸಾಹಿತಿಗಳ ಬಗ್ಗೆ

ಕೂದಲೆಳೆಯಷ್ಟು ಮಾಹಿತಿ ಸಿಕ್ಕರೂ, ಅದೆಷ್ಟೇ ಕಷ್ಟವಾದರೂ ಸರಿ ಅದನ್ನು ಶೋಧಿಸಿ, ಸಾಹಿತ್ಯ ಚರಿತ್ರೆಯಲ್ಲಿ ದಾಖಲಿಸಿದರು. ಇದೇ ಶ್ರಮವನ್ನು ಮಹಿಳಾ ಸಾಹಿತ್ಯವನ್ನು ಸಂಕಲಿಸುವ ಸಂದರ್ಭದಲ್ಲಿ ತೋರಲಿಲ್ಲ. 'ಯಾವ ಮಾಹಿತಿಗಳು ಸಿಕ್ಕಿಲ್ಲ' ಎಂಬ ದಿವ್ಯ ನಿರ್ಲಕ್ಷ್ಯವನ್ನು ತೋರಿದರು. ಕಂತಿಯಂಥ ಪ್ರತಿಭೆಗಳ ಬಗ್ಗೆ ಕತೆಗಳನ್ನು ಹುಟ್ಟುಹಾಕಿ, ಹೆಂಗಸರಿಗೆ ಸ್ವಯಂ ಬುದ್ಧಿ ಸಾಧ್ಯವೇ ಇಲ್ಲ ಎಂದು ಮಹಿಳಾ ಬೌದ್ಧಿಕತೆಯನ್ನು ಅಪಮೌಲ್ಯಕ್ಕೊಳಪಡಿಸಿದರು. 'ಬುದ್ಧಿ' ಎಂದರೆ ತರ್ಕ, ಕಾರ್ಯಕಾರಣ ಸಂಬಂಧ ಎಂದು ಕೆಲವು ಅಂಶಗಳನ್ನು ಎತ್ತಿ ಹಿಡಿಯುತ್ತಾ 'ಹೆಂಗಸಿನ ಬುದ್ಧಿ ಮೊಣಕಾಲ ಕೆಳಗೆ' ಎಂದರು. ಮುಂದುವರೆದು ಮಹಿಳೆಯ ಅಭಿವ್ಯಕ್ತಿಯನ್ನು ತಮ್ಮ ಮತ್ತೊಂದು ತಂತ್ರವನ್ನು ಬಳಸಿ ಶ್ರೇಷ್ಠತೆಯ ರಾಜಕಾರಣವನ್ನು ಮಾಡಲು ಶುರುಮಾಡಿದರು.

ಸಾಹಿತ್ಯ ವಿಮರ್ಶೆ ತನ್ನದೇ ಆದ ಕೆಲವು ಮಾನದಂಡಗಳ ಮೂಲಕ ವಸ್ತು, ತಂತ್ರ, ಭಾಷೆಗಳ ಸವಾಲನ್ನು ಒಡ್ಡಲು ತೊಡಗಿತು. ಮಹಿಳೆಯು ಆಯ್ದು ಕೊಳ್ಳುವ ವಸ್ತುವಿನ ಬಗ್ಗೆ ತನ್ನ ತಕರಾರನ್ನು ಎತ್ತಿ, ಅವಳ ಲೋಕಗ್ರಹಿಕೆಯನ್ನು ನಿರಾಕರಿಸಿ ಅದನ್ನು 'ಅಡುಗೆಮನೆ ಸಾಹಿತ್ಯ' ಎಂದು ಹೀಗಳೆಯಿತು. ಅವಳ ಪಾಡು-ಹಾಡಾದಾಗಲೂ ಅದರ ಬಗ್ಗೆ ಕಾಳಜಿಯನ್ನು ತೋರದೆ 'ಇಷ್ಟೇನೇ ಇವರ ಯೋಗ್ಯತೆ' ಎಂದು ಆತ್ಮವಿಶ್ವಾಸವನ್ನು ಕುಗ್ಗಿಸುವ ಮಾತುಗಳನ್ನಾಡಿತು. 'ವಿಮೆನ್ ರೈಟಿಂಗ್ ಇನ್ ಇಂಡಿಯಾ, ೬೦೦ ಬಿ ಸಿ - ಟು ದ ಪ್ರೆಜೆಂಟ್' ಕೃತಿಯ ಸಂಪಾದಕಿಯರಾದ ಸೂಸಿ ಥಾರು ಮತ್ತು ಕೆ. ಲಲಿತಾರವರು ಕೃತಿಯ ಮುನ್ನುಡಿಯಲ್ಲಿ ಹದಿನೆಂಟನೆಯ ಶತಮಾನದಲ್ಲಿ 'ಮುದ್ದು ಪಳನಿ' ಎಂಬಾಕೆ 'ರಾಧಿಕಾ ಸಾಂತ್ವನಂ' ಎಂಬ ಕೃತಿಯಲ್ಲಿ ತನ್ನ ಲೈಂಗಿಕ ಅನುಭವಗಳನ್ನು ಬರೆದಾಗ ಆ ವಸ್ತುವನ್ನು ಕುರಿತು ನಡೆದ ಚರ್ಚೆಯನ್ನು ವಿವರಿಸುತ್ತಾರೆ. ಹೆಂಗಸು ಲೈಂಗಿಕ ಅನುಭವಗಳನ್ನು ವಸ್ತುವನ್ನಾಗಿ ಮಾಡಿಕೊಳ್ಳುವುದು ಅಪರಾಧ ಎಂದು ಭಾವಿಸಿ, ಆ ಕೃತಿಯನ್ನು ಬಹಿಷ್ಕರಿಸಿದ್ದನ್ನು ಉಲ್ಲೇಖಿಸುತ್ತಾರೆ. ಅದೇ ವಸ್ತುವನ್ನು ಗಂಡಸು ತನ್ನ ಕೃತಿಯಲ್ಲಿ ಎತ್ತಿಕೊಂಡಾಗ ಅದು ಸ್ವಾಗತಾರ್ಹವಾಗುತ್ತದೆ. ಇಂಥ ಸಂಗತಿಗಳು ಪುರುಷ ಚಿಂತನೆಯ ಲಿಂಗ ತಾರತಮ್ಯವನ್ನು ಹೇಳುತ್ತದೆ.

ಸ್ತ್ರೀವಾದ ಇಂಥ ತಾರತಮ್ಯಗಳ ಬಗ್ಗೆ ಪ್ರಶ್ನೆಯನ್ನು ಎತ್ತುತ್ತದೆ. ಮೊದಲನೆಯದಾಗಿ ಸೃಜನಶೀಲತೆಯ ಸಂದರ್ಭದಲ್ಲಿ ಮಹಿಳಾ ಸಾಹಿತ್ಯ ಎದುರಿಸುತ್ತಿರುವ ಸಮಸ್ಯೆಗಳನ್ನು, ಸವಾಲುಗಳನ್ನು ಚರ್ಚಿಸುತ್ತದೆ. ಪುರುಷ ಚಿಂತನೆ ಪುರುಷನನ್ನು ಬುದ್ಧಿಪ್ರಧಾನ ನೆಲೆಯಲ್ಲಿ,

ಮಹಿಳೆಯನ್ನು ಭಾವಪ್ರಧಾನ ನೆಲೆಯಲ್ಲಿ ಗ್ರಹಿಸಿರುವುದನ್ನು ಭಿನ್ನ ನೆಲೆಗಳಲ್ಲಿ ಚರ್ಚಿಸುತ್ತದೆ. ಬುದ್ಧಿ, ಬೌದ್ಧಿಕತೆ, ಕಾರ್ಯಕಾರಣ, ಸಂಬಂಧ, ತರ್ಕ ಎಂದು ಯಾವುದನ್ನು ಪುರುಷ ಚಿಂತನೆ ಹೇಳುತ್ತದೋ ಅದನ್ನೇ ಪ್ರಶ್ನಿಸಿ ಮಹಿಳಾ 'ಭಾವುಕತೆ', 'ಚಂಚಲತೆ'ಯನ್ನು ಅವಳ ನೇತ್ಯಾತ್ಮಕ ಅಂಶಗಳಾಗಿ ಗುರುತಿಸದೆ ಇತ್ಯಾತ್ಮಕ ಅಂಶಗಳಾಗಿ ಗುರುತಿಸಬೇಕೆಂಬ ಚರ್ಚೆಯನ್ನು 'ಜೂಲಿಯಾ ಕ್ರಿಸ್ಟೇವಾ' ಮತ್ತು 'ಹೆಲೆನ್ ಸಿಕ್ಸೂ' ಪ್ರತಿಪಾದಿಸುತ್ತಾರೆ. 'ಹೆಲೆನ್ ಸಿಕ್ಸೂ', 'ದಿ ಲಾಫ್ ಆಫ್ ದಿ ಮೆಡೂಸ' ದಲ್ಲಿ "ಮಹಿಳೆಯ ಪ್ರತಿಭೆ ಎಂದೂ ಬತ್ತದ್ದು, ಅದು ಸಂಗೀತದ ಹಾಗೆ ಶಿಲ್ಪ, ಸಾಹಿತ್ಯಗಳ ಹಾಗೆ ಅದರ ಕಲ್ಪಕತೆ ಊಹಾತೀತ"[೭] ಎಂದು ಮಹಿಳೆಯ ವಿಶಿಷ್ಠ ಪ್ರತಿಭೆಯನ್ನು ಎತ್ತಿ ಹಿಡಿಯುತ್ತಾಳೆ. ಇನ್ನೊಬ್ಬ ಚಿಂತಕಿ 'ಮೇರಿ ಎಲ್ಮನ್' 'ಥಿಂಕಿಂಗ್ ಅಬೌಟ್ ವಿಮೆನ್' ಎಂಬ ಕೃತಿಯಲ್ಲಿ ಹೆಂಗಸರ ಅನುಭವ ಮತ್ತು ಸಾಹಿತ್ಯ ಶೈಲಿಗಳ ನಡುವೆ ಸಂಬಂಧಗಳನ್ನು ಕಟ್ಟುತ್ತಾಳೆ. ಪುರುಷನ ಸಿದ್ಧಮಾದರಿಗಳಿಗಿಂತ ಭಿನ್ನವಾಗಿ ವಿದ್ರೋಹದ ನೆಲೆಗಳಲ್ಲಿ ರೂಪುಗೊಳ್ಳುವ ಮಹಿಳೆಯ ಪ್ರತಿಭೆಯನ್ನು ಕುರಿತು ಚರ್ಚಿಸುತ್ತಾಳೆ.

ಇನ್ನು ತಂತ್ರ, ಭಾಷೆಗಳನ್ನು ತನ್ನ ಪ್ರಬಲ ಅಸ್ತ್ರಗಳನ್ನಾಗಿ ಪುರುಷ ಚಿಂತನೆ ಒಡ್ಡುತ್ತದೆ. ತಂತ್ರ, ವಿನ್ಯಾಸಗಳು ಕಲಿಕೆಯಿಂದ ಮಾತ್ರ ಪರಿಣಿತಿಯನ್ನು ಸಾಧ್ಯವಾಗಿಸುವ ಕ್ರಿಯೆಗಳಾದ್ದರಿಂದ, ಕಲಿಕೆಯ ಹಾದಿಗಳೇ ಮುಚ್ಚಿ ಹೋಗಿರುವ ಮಹಿಳೆಯ ಸಂದರ್ಭದಲ್ಲಿ ಈ ಪ್ರಕ್ರಿಯೆಗಳು ಸುಲಭವೇನಲ್ಲ. ಆದರೆ ಇದಕ್ಕೆ ಕಾರಣವನ್ನು ನಾವು ಮಹಿಳೆಯ ವೈಯಕ್ತಿಕ ನೆಲೆಯಲ್ಲಿ ಶೋಧಿಸದೆ, ಸಾಮಾಜಿಕ ನೆಲೆಯಲ್ಲಿ ಶೋಧಿಸಬೇಕಾಗುತ್ತದೆ. ಆತ್ಮ ವಿಶ್ವಾಸ, ಕಲಿಕೆಯ ಅವಕಾಶಗಳು ಮಾತ್ರ; ಸಧ್ಯದಲ್ಲಿ ಮಹಿಳೆಯ ಸಾಹಿತ್ಯವು ಅತಿ ಭಾವುಕತೆಯಿಂದ ಕೂಡಿರುವ, ತರ್ಕಹೀನವಾಗಿರುವ, ಕಾರ್ಯಕಾರಣ ಸಂಬಂಧಗಳನ್ನು ಬೌದ್ಧಿಕ ಹಂತದಲ್ಲಿ ಪ್ರಕಟಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ ಎಂಬ ಟೀಕೆಗೆ ಉತ್ತರವಾಗುತ್ತದೆ. ಅತಂತ್ರದ ವಾಸ್ತವದಿಂದ ಬಿಡುಗಡೆ, ತನ್ನ ಅಸ್ಮಿತೆಯ ಅರಿವು, ಸ್ವಪ್ರಯತ್ನದಿಂದ ಮಾತ್ರ, ತಂತ್ರ, ವಿನ್ಯಾಸಗಳಂಥ ತಾಂತ್ರಿಕ ಅಂಶಗಳನ್ನು ಮಹಿಳಾ ಅಭಿವ್ಯಕ್ತಿ ರೂಢಿಸಿಕೊಳ್ಳಲು ಸಾಧ್ಯ.

ಇನ್ನು ಭಾಷೆಯ ಸಂದರ್ಭಕ್ಕೆ ಬಂದರೆ, ಅದು ಪುರುಷನ ಭಾಷೆ. ಹೆಣ್ಣಿಗೆ ತನ್ನದಲ್ಲದ ಭಾಷೆಯಲ್ಲಿ ತನ್ನ ಭಾವಗಳನ್ನು ಅಭಿವ್ಯಕ್ತಿಸಬೇಕಾದ ಅನಿವಾರ್ಯ ಅಸಹಾಯಕತೆಯ ಸಂದರ್ಭವಿದೆ. ಈ ಕುರಿತೇ ಸ್ತ್ರೀವಾದಿ ಭಾಷಾಶಾಸ್ತ್ರ ಬಹಳ ವಿವರವಾದ ಚರ್ಚೆಯನ್ನು

ಮಾಡುತ್ತದೆ. ಭಾಷಾಶಾಸ್ತ್ರದಲ್ಲಿ ಈಗಾಗಲೇ ಹೇಳಿರುವಂತೆ ಭಾಷೆ ಒಂದು ರಚನೆ. ಹಾಗಾಗಿ ಭಾಷೆ ವೈಯಕ್ತಿಕವಾದುದು ಹೌದು, ಸಾಮಾಜಿಕವಾದುದು ಹೌದು. "ಮಾನವರ ಅಂತಸ್ಥ ಸಾಮರ್ಥ್ಯಗಳಲ್ಲಿ ಭಾಷೆಯೂ ಒಂದು ಎಂದು ಪರಿಗಣಿಸುವಾಗ, ಅದಕ್ಕಿರುವ ಸಾಮಾಜಿಕ ನೆಲೆಗಟ್ಟನ್ನು ಅಲ್ಲಗಳೆಯಲು ಬರುವುದಿಲ್ಲ. ಅಂದರೆ ಭಾಷೆಯು ವ್ಯಕ್ತಿಯ ನೆಲೆಯಲ್ಲಿ ಜೀವಂತವಾಗಿರುವಂತೆ ತೋರಿದರೂ, ವ್ಯಕ್ತಿಯ ಭಾಷಾ ಸಾಮರ್ಥ್ಯ ಮತ್ತು ಬಳಕೆಗಳು, ಸಾಮಾಜಿಕವಾಗಿಯೇ ನಿಯಂತ್ರಿತವಾಗುತ್ತವೆ. ಇದಕ್ಕೆ ಹಲವು ಕಾರಣಗಳಿವೆ. ಮುಖ್ಯವಾಗಿ ಭಾಷೆಯೆಂಬುದು ವ್ಯಕ್ತಿಗಳ ನಡುವಣ ಸಂಪರ್ಕಜಾಲವನ್ನು ನಿರ್ಮಿಸುವ ಉಪಕರಣವಾಗಿದೆ. ಹಾಗಾಗಿರುವುದರಿಂದ, ಭಾಷೆಯ ಸ್ವರೂಪವನ್ನು ವ್ಯಕ್ತಿಯು ನಿರ್ಧರಿಸುವುದು ಅಸಾಧ್ಯ. ಸಮಾಜವೇ ಅಂಥ ಆಯ್ಕೆಗಳನ್ನು ವ್ಯಕ್ತಿಗೆ ಸಿದ್ಧಪಡಿಸಿಕೊಟ್ಟಿರುತ್ತದೆ. ಈ ಆಯ್ಕೆಗಳಲ್ಲಿ ಯಾವ ಬದಲಾವಣೆಯಾದರೂ, ಸಾಮಾಜಿಕ ನೆಲೆಯ ಸಮ್ಮತಿಯನ್ನು ಪಡೆದುಕೊಂಡೇ ಇರುತ್ತದೆ". ಎಂದು ಚರ್ಚಿಸುವ ಎಚ್.ಎಸ್. ಶ್ರೀಮತಿಯವರು ಮುಂದುವರೆದು ಹೀಗೆ ಹೇಳುತ್ತಾರೆ: "ಭಾಷೆಯ ಈ ಲಕ್ಷಣದಿಂದಾಗಿ ಸಾಮಾಜಿಕ ಆಚರಣೆಗಳು, ನಂಬಿಕೆಗಳು, ಭಾಷೆಯಲ್ಲಿ ಬಿಂಬಿತವಾಗುವ, ಸೂಚಿತವಾಗುವ ಸಾಧ್ಯತೆಗಳು ಇದ್ದೇ ಇರುತ್ತವೆ. ಅಲ್ಲದೆ, ಸಾಮಾಜಿಕ ಆಚರಣೆಗಳನ್ನು ನಿರಂತರಗೊಳಿಸುವ ಮತ್ತು ತಲೆಮಾರಿನಿಂದ ತಲೆಮಾರಿಗೆ ದಾಟಿಸುವ ಸಾಧನವಾಗಿಯೂ ಭಾಷೆ ಕೆಲಸ ಮಾಡುತ್ತಿರುತ್ತದೆ. ಹೀಗಾಗಿ, ಭಾಷೆ ಎಲ್ಲರಿಗೂ ಸಮಾನವಾಗಿ ದೊರೆತಿರುವ ಸೌಲಭ್ಯ ಎಂದು ತಿಳಿದರೂ, ಅದು ಎಲ್ಲರನ್ನೂ ಸಮಾನವಾಗಿ ಪರಿಗಣಿಸುವ ಸಾಧನವಾಗಿ ಉಳಿದಿಲ್ಲ ಎಂಬುದು ಸ್ತ್ರೀವಾದಿಗಳ ತರ್ಕ"[೮] ಎಂದು ವಿವರಿಸಿರುವ ಎಚ್.ಎಸ್. ಶ್ರೀಮತಿಯವರ ಮೇಲಿನ ಮಾತುಗಳು ಭಾಷೆಯನ್ನು ಕುರಿತು ಇದ್ದ ಹಳೆಯ ಆಲೋಚನೆಗಳಿಗಿಂತ ಭಿನ್ನವಾಗಿ ನಡೆದ ಚರ್ಚೆಯನ್ನು ಹೇಳುತ್ತವೆ. ಇದನ್ನೇ, ಡೇಲ್ ಸ್ಪೆಂಡರ್ (Dale Spender) ತನ್ನ ಕೃತಿ 'ಮ್ಯಾನ್ ಮೇಡ್ ಲಾಂಗ್ವೇಜ್'ನಲ್ಲಿ (Man made Language) 'ಗಂಡು ಭಾಷೆ'ಯನ್ನು ಕುರಿತಂತೆ ಹೀಗೆ ವ್ಯಾಖ್ಯಾನಿಸುತ್ತಾಳೆ. "Language is a paradox for human beings; it is both a creative and an inhibiting vehicle. On the one hand, it offers immense freedom for it allows us to 'create' the world we live in; that so many different cultures have created so many different 'worlds' is testimony to this enormous and varied capacity (Berger and Luckmann 1972, have categorized this aspect of language as 'world openness', P.69). But, on the other hand, we are

restricted by that creation, limited to its confines and, it appears, we resist, fear and dread any modifications to the structures we have initially created, even through they are 'arbitrary', approximate ones. It is this which constitutes a language trap".[೯] ಹೀಗೆ ಭಾಷೆಯೊಳಗೆ ಹೆಣ್ಣು ಬಂಧಿತಳಾಗುವ ಸ್ಥಿತಿಯನ್ನು ವಿವರಿಸುವ ಡೇಲ್ ಸ್ಪೆಂಡರ್ ಭಾಷೆ ಹೇಗೆ ಗಂಡಿನಿಂದ, ಗಂಡಿಗಾಗಿ, ಗಂಡಿಗೋಸ್ಕರ ನಿರ್ಮಿತವಾಗಿದೆ ಎಂಬುದನ್ನು ವಿವರಿಸುತ್ತಾಳೆ. ಆ ಕಾರಣದಿಂದಲೇ ಅವಳು ಭಾಷೆಯೆಂಬುದು 'ಗಂಡು ಭಾಷೆ' ಎಂದು ಗುರುತಿಸುತ್ತಾಳೆ. ಮುಂದುವರೆದು ಈ ಅಸಮಾನತೆಗಳನ್ನು ಇನ್ನಷ್ಟು ಹೀಗೆ ವಿವರಿಸುತ್ತಾಳೆ.

"It could be said that out of nowhere we invented sexism, we created the arbitrary and approximate categories of male-as-norm and female as deviant. A most original, imaginative creation. But, having constructed these categories in our language and thought patterns, we have now been trapped for other-less oribtary or imperfect – way. Indeed it could even be argued that the trap which we have made is so pervasive that we cannot envisage a world constructed on any other lines"[೧೦] ಹೀಗಾಗಿಯೇ ಮೇಲ್ನೋಟಕ್ಕೆ ಭಾಷೆ ಬಳಕೆದಾರರಿಗೆ ಸ್ವಾತಂತ್ರವನ್ನು ನೀಡುವಂತೆ ಕಾಣಿಸಿದರೂ ವಾಸ್ತವ ಹಾಗಿಲ್ಲ. ಎಲ್ಲ ಜ್ಞಾನವಲಯಗಳಂತೆ ಭಾಷಾಶಾಸ್ತ್ರವೂ, ಹೆಣ್ಣು ಮತ್ತು ಆಕೆಯ ಜಗತ್ತನ್ನು ಅಂತಸ್ಥ ಮಾಡಿಕೊಂಡಿಲ್ಲ ಎಂಬ ವಾಸ್ತವವನ್ನು ಸ್ತ್ರೀವಾದಿಗಳು ಇಂದು ಅನೇಕ ನಿದರ್ಶನಗಳ ಮೂಲಕ ಮುಂದಿಡುತ್ತಾರೆ. ಹಾಗಾಗಿಯೇ ಮಹಿಳೆ ಮತ್ತು ಭಾಷಾ ಬಳಕೆ ಎಂಬುದು ಬಹಳ ಸಂಕೀರ್ಣವಾದ ಒಂದು ಸಂಗತಿಯಾಗಿ ಪರಿಣಮಿಸಿದೆ. ಮಹಿಳೆಯ ಭಾವ ಭಾಷೆಯಲ್ಲಿ ವ್ಯಕ್ತಗೊಳ್ಳುವ ಸಂದರ್ಭವೇ ಸಮಸ್ಯಾತ್ಮಕವಾದದ್ದು ಆದ್ದರಿಂದಲೇ, ಅಧೀನ ನೆಲೆಯಲ್ಲಿರುವ ಹೆಣ್ಣು ತನಗೆ ಅನುಕೂಲಕರ ಅಲ್ಲದ ಸಂದರ್ಭದಲ್ಲಿ ಭಾಷೆಯನ್ನು ಬಳಸಲು ಹೋಗಿ ಅಸಮರ್ಥಳು ಎನಿಸಿಕೊಳ್ಳುತ್ತಾಳೆ, ಅಪಹಾಸ್ಯಕ್ಕೆ ಗುರಿಯಾಗುತ್ತಾಳೆ. ಭಾಷೆಯ ಕೌಶಲ್ಯಗಳೇ ಮುಖ್ಯವಾಗಿರುವ ಸೃಜನಶೀಲ ಸಾಹಿತ್ಯ ಕ್ಷೇತ್ರದಲ್ಲೂ ಹೆಣ್ಣು ತನ್ನನ್ನು ತಾನು ಸರಿಯಾದ ನೆಲೆಯಲ್ಲಿ ಪ್ರಕಟಗೊಳಿಸಿಕೊಳ್ಳಲು ಸಾಧ್ಯವಾಗಿಲ್ಲ. ವಿಪರ್ಯಾಸವೆಂದರೆ, ಈ ರೀತಿಯ ಭಾಷಿಕ ಕೊರತೆಗಳು ವೈಯಕ್ತಿಕ ನೆಲೆಯ ಅಸಾಮರ್ಥ್ಯದಿಂದ ಉಂಟಾದವು ಎಂದು ನಂಬಿರುವುದು. ಸ್ತ್ರೀವಾದಿ ಭಾಷಾಚಿಂತಕರು ಇದನ್ನೇ ಚರ್ಚಿಸಿ ಗಂಡು ಭಾಷೆಯ ಮೂಲಕ ಹಾಯ್ದು ಬರುವಾಗಿನ

ಬಿಕ್ಕಟ್ಟುಗಳು ಇವೆಂದು ತಿಳಿಸಿದ್ದಾರೆ. ಇವುಗಳಿಗೆ ಪರಿಹಾರಗಳನ್ನು, ಪರ್ಯಾಯ ಮಾರ್ಗಗಳ ಶೋಧವನ್ನು ಸ್ತ್ರೀವಾದಿಗಳು ನಡೆಸಿದ್ದಾರೆ. ಪ್ರಸ್ತುತ ಅಧ್ಯಯನದ ಮಿತಿಯಲ್ಲಿ ಎಲ್ಲ ಚರ್ಚೆಗಳನ್ನು ತರುವುದು ಸಾಧ್ಯವಿಲ್ಲದ ಕಾರಣ ಚರ್ಚೆಗಳನ್ನು ವಿಸ್ತರಿಸುತ್ತಿಲ್ಲ. ಹೀಗೆ ಮಹಿಳಾ ಸೃಜನತೆ ಆಕಾರ ಪಡೆದು ಬರುವಾಗ ಅದಕ್ಕೆ ಪುರುಷನ ಹಾಗೆ ಮುಕ್ತ ಅವಕಾಶವಿಲ್ಲ. ವಸ್ತು ಎಷ್ಟೇ ಸಮರ್ಥವಾಗಿದ್ದರೂ, ತನ್ನದಲ್ಲದ ಪರಿಕರದಲ್ಲಿ ಅದನ್ನು ಪ್ರಕಟಿಸುವಾಗ ಮತ್ತೆ ಮಹಿಳಾ ಅಭಿವ್ಯಕ್ತಿ ಸವಾಲುಗಳನ್ನು ಎದುರಿಸಬೇಕಾಗುತ್ತದೆ.

ಹೀಗೆ ಈ ರೀತಿಯ ಸವಾಲುಗಳನ್ನು ಮಹಿಳಾ ಅಭಿವ್ಯಕ್ತಿ ಎದುರಿಸುತ್ತಿದೆ. ಪುರುಷ ಚಿಂತನೆ ಮಹಿಳಾ ಅಭಿವ್ಯಕ್ತಿಯನ್ನು ಅಪಮೌಲ್ಯೀಕರಣ ಮಾಡುವ ಸಂದರ್ಭವನ್ನು ಈ ಅಧ್ಯಯನ ಕೇಂದ್ರವಾಗಿಟ್ಟುಕೊಂಡಿದೆ.

ಹಿಂದಿನ ಚರ್ಚೆಗಳಲ್ಲಿ ಮಹಿಳೆಯ ನಿಷ್ಕ್ರಿಯ ಬದುಕಿಗೆ ಹೊರದಾರಿಗಳ ಹುಡುಕಾಟ ಮಹಿಳೆಯಿಂದ ಬೇರೆ, ಬೇರೆ ನೆಲೆಗಳಲ್ಲಿ ಪ್ರಕಟಗೊಳ್ಳುವುದನ್ನು ಗಮನಿಸಬಹುದು. ಮಹಿಳೆಯ ಅಭಿವ್ಯಕ್ತಿಯ ನೆಲೆಗಳು ಹಾಡು, ನೃತ್ಯ, ಹಸೆ, ಅಡುಗೆ, ಅಲಂಕಾರ, ಹರಟೆ, ಕತೆ........... ಗಳಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಅವುಗಳಲ್ಲಿ ಮುಖ್ಯ ನೆಲೆಯಾದ ಸಾಹಿತ್ಯಾಭಿವ್ಯಕ್ತಿಯನ್ನು ಅಧ್ಯಯನಕ್ಕೆ ಮುಖ್ಯ ಪರಿಕರವನ್ನಾಗಿ ಬಳಸಿಕೊಳ್ಳಲಾಗಿದೆ.

ಉಸಿರುಕಟ್ಟಿಸುವ ತನ್ನ ಬದುಕಿಗೆ ಹೊರದಾರಿಯಾಗಿ ಮಹಿಳಾ ಲೋಕ ಸಾಹಿತ್ಯದಲ್ಲಿ ಒಂದಿಷ್ಟು ಭ್ರಮಾಲೋಕಗಳನ್ನು ನಿರ್ಮಿಸಿಕೊಳ್ಳುತ್ತದೆ. ಅದನ್ನು ಸಾಹಿತ್ಯ ವಿಮರ್ಶೆ 'ಜನಪ್ರಿಯ ಸಾಹಿತ್ಯ' ಎಂದು ಗುರುತಿಸುತ್ತದೆ. ಮಹಿಳೆಯ ಬಹುಪಾಲು ಸಾಹಿತ್ಯವನ್ನು ಈ ನೆಲೆಯಲ್ಲಿ ಗುರುತಿಸಿ ಅದನ್ನು 'ದ್ವಿತೀಯ ದರ್ಜೆ'ಯ ಸಾಹಿತ್ಯವೆಂದು ಗುರುತಿಸಿ, 'ಗಂಭೀರ ಸಾಹಿತ್ಯ'ಕ್ಕೆ ನೀಡುವ ಮಾನ್ಯತೆಯನ್ನು ಅದಕ್ಕೆ ನೀಡದೆ, ಅಪಮೌಲ್ಯೀಕರಣಗೊಳಿಸುತ್ತದೆ. ಮಹಿಳಾ ಬದುಕಿನ ಸಾಮಾಜಿಕ ವಾಸ್ತವಗಳು ಕಟುವಾಗಿರುವುದರಿಂದ ಅವಳಿಗೆ ಅಲ್ಲಿಂದ ತಾತ್ಕಾಲಿಕವಾಗಿ ಆದರೂ ಸರಿ, ತನ್ನದೇ ಆದ ಪ್ರತ್ಯೇಕ ತಂಗುದಾಣಗಳು ಬೇಕೇ ಬೇಕು. ಅವು ಭ್ರಮೆಯ ಲೋಕದ್ದಾದರೂ ಸರಿ, ಹಗಲುಗನಸುಗಳದ್ದಾದರೂ ಸರಿ. ತನಗೆ ಅವಕಾಶ ದೊರತಾಗಲೆಲ್ಲ ಆ ಲೋಕವನ್ನು ಪ್ರವೇಶಿಸಿ, ವಿಹರಿಸಿ ಬರುವುದು ಅವಳಿಗೆ ಅತ್ಯಂತ ಪ್ರಿಯವಾದ ಕೆಲಸ. ಬರವಣಿಗೆಯ ಮೂಲಕ ತನಗೊದಗಿದ ಅನುಕೂಲತೆಯನ್ನು ಮಹಿಳೆ ಇಂಥದ್ದೊಂದು ಲೋಕದ ಕಟ್ಟುವಿಕೆಯಲ್ಲಿ ಬಳಸಿಕೊಳ್ಳುತ್ತಾಳೆ. ಬರಹಗಾರ್ತಿಯ ಸಾಮಾಜಿಕತೆಯಲ್ಲಿ ಇರುವ ಇತರ ಸಮಾನಮನಸ್ಕ ಮಹಿಳಾ ಓದುಗರು ಇಂಥದ್ದೊಂದು

ಲೋಕವನ್ನು ಕಟ್ಟುವ ಸಾಧ್ಯತೆ ಇರದವರು, ಕಟ್ಟಿದಂಥ ಲೋಕದಲ್ಲಿ ವಿಹರಿಸಿ ಬರುತ್ತಾರೆ. ಪುರುಷರು ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದರೂ ಮಹಿಳೆಯರು ಆ ಕೆಳಸ್ತರದಲ್ಲೂ ಎರಡನೆಯವರಾಗಿರುತ್ತಾರೆ. ಇಂಥ ಅಧೀನ ಬದುಕನ್ನು ಬದುಕುತ್ತಿರುವ ಮಹಿಳಾ ಲೋಕ ಸಾಹಿತ್ಯ ವಿಮರ್ಶೆ ಗಂಭೀರ ಸಾಹಿತ್ಯ-ಜನಪ್ರಿಯ ಸಾಹಿತ್ಯ ಎಂದು ಬೇಧ ಮಾಡಿದ್ದನ್ನು ಲಕ್ಷಿಸಿಯೇ ಇಲ್ಲ. ಇಂಥದ್ದೊಂದು ಪ್ರಕ್ರಿಯೆಯಲ್ಲಿ ಗಂಭೀರವಾಗಿ ತಮ್ಮನ್ನು ತೊಡಗಿಸಿಕೊಂಡ ಮತ್ತು ಕವಿ-ಕೃತಿ-ಓದುಗ ನೆಲೆಯಲ್ಲಿರುವ ಬಹುಸಮುದಾಯ ಜನಪ್ರಿಯ ಸಂಸ್ಕೃತಿ ಮತ್ತು ಸಾಹಿತ್ಯವನ್ನು ಎಂದೂ ತಿರಸ್ಕರಿಸಿಲ್ಲ. ಗಂಭೀರ ಸಾಹಿತ್ಯ-ಜನಪ್ರಿಯ ಸಾಹಿತ್ಯ ಎಂದು ಬೇಧಮಾಡಿದ ವಿಮರ್ಶಾ ಲೋಕವನ್ನು ಈ ಬಹು ಸಮುದಾಯ ಲಕ್ಷಿಸಿಯೇ ಇಲ್ಲ.

ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿ ಗ್ರಹಿಸಿದಾಗ ಮಾತ್ರ ಹೊರಡುವ ಈ ಉತ್ತರಗಳು ಸಾಂಪ್ರದಾಯಿಕ ಸಾಹಿತ್ಯ ಚಿಂತನೆಯಲ್ಲಿ ದೊರಕುವುದಿಲ್ಲ. ಹಾಗಾಗಿಯೇ ಜನಪ್ರಿಯ ಸಾಹಿತ್ಯವನ್ನು ಪಿತೃಪ್ರಧಾನ ವಿಮರ್ಶೆಯ ತರಬೇತಿಯ ನೆಲೆಗಳಲ್ಲಿ ಗ್ರಹಿಸಿದಾಗ ಆ ಓದು ಇಷ್ಟವಾಗದೇ ಹೋಗಬಹುದು. ಅವುಗಳಲ್ಲಿರುವ ಕೊರತೆಗಳನ್ನು ಗುರುತಿಸಬಹುದು. ಅವೇ ಪಠ್ಯಗಳನ್ನು ಸ್ತ್ರೀವಾದಿ ತಾತ್ವಿಕ ನೆಲೆಗಟ್ಟಿನಿಂದ ಗಮನಿಸಿದಾಗ ಪಾರಂಪರಿಕ ಓದಿನ ಕ್ರಮದ ಹಿಂದಿನ ಲಿಂಗ ರಾಜಕಾರಣ ಅರ್ಥವಾಗುತ್ತದೆ. 'ಜನಪ್ರಿಯ ಕಾದಂಬರಿ'ಗಳು ಎಂದು ಗುರುತಿಸಲ್ಪಟ್ಟಿರುವ ಕಾದಂಬರಿಗಳನ್ನು ಸ್ತ್ರೀವಾದಿ ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವುದರ ಮೂಲಕ ಮಹಿಳಾ ಸೃಜನತೆ – ಸವಾಲುಗಳು – ಅಭಿವ್ಯಕ್ತಿಯ ಮಾದರಿಗಳು – ಇವುಗಳನ್ನು ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

ಮಹಿಳಾ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡು ಪಾರಂಪರಿಕ ಸಾಹಿತ್ಯ ಚಿಂತನೆಗಳು ಹಾಗೂ ಸ್ತ್ರೀವಾದಿ ಚಿಂತನೆಗಳನ್ನು ಮುಖಾಮುಖಿಯಾಗಿಸುವುದರ ಜೊತೆಗೆ ಜನಪ್ರಿಯ ಸಂಸ್ಕೃತಿ, ಕಲೆಗಳು, ಕಾದಂಬರಿಗಳು ಇವುಗಳು ಬಹುಸಮುದಾಯದ ವಿಶೇಷವಾಗಿ ಮಹಿಳಾ ಸಮುದಾಯದ, ಬದುಕಿನ ಒಳನೋಟಗಳನ್ನು ಹೇಗೆ ಕಟ್ಟಿಕೊಡುತ್ತದೆ ಎಂಬುದನ್ನು ಈ ಅಧ್ಯಯನ ಮುಖ್ಯವೆಂದು ಭಾವಿಸುತ್ತದೆ. ಈ ಅಧ್ಯಯನದಲ್ಲಿ, ಸ್ತ್ರೀವಾದಿ ಚಿಂತನೆಯೊಂದಿಗೆ ಸಮಾಜಶಾಸ್ತ್ರ, ಮನಃಶಾಸ್ತ್ರದ ಆಯಾಮಗಳನ್ನು ಬಳಸಿಕೊಳ್ಳುವುದರ ಮೂಲಕ ಮಹಿಳೆಯ ಅಭಿವ್ಯಕ್ತಿಯ ನೆಲೆಗಳನ್ನು ವಿಭಿನ್ನ ಆಯಾಮಗಳಲ್ಲಿ ಗಮನಿಸುವ ಉದ್ದೇಶವನ್ನು ಹೊಂದಿದೆ.

## ೧.೩ ಸ್ವರೂಪ

ಮಹಿಳೆ ಅಭಿವ್ಯಕ್ತಿಗೆ ಸೃಜನತೆಯ ಹಂತದಲ್ಲೇ ಇರುವ ಸವಾಲುಗಳು ಮತ್ತು ಸಮಸ್ಯೆಗಳನ್ನು ಪಾರಂಪರಿಕ ಸಾಹಿತ್ಯ ಚಿಂತನೆ ಅರ್ಥೈಸಲಾರದ ಕಾರಣ, ಸ್ತ್ರೀವಾದಿ ಚಿಂತನೆಗಳ ಮೂಲಕ ಮಹಿಳಾ ಸಾಹಿತ್ಯವನ್ನು ಗ್ರಹಿಸಲು, ಹೊಸ ಓದಿಗೆ ತೊಡಗಿಸಿಕೊಂಡ ಅಧ್ಯಯನವಿದು. "ಸಾಹಿತ್ಯ ಕೃತಿಯನ್ನು ನೋಡುವ ಸ್ತ್ರೀವಾದಿ ದೃಷ್ಟಿಕೋನ ಹಾಗೂ ಸಮಾಜದಲ್ಲಿ ಬೇರೂರಿರುವ ಪಿತೃಸತ್ತೆಯ ಪದ್ಧತಿಗೆ ವಿಮರ್ಶೆ ಮಾಧ್ಯಮದ ಮೂಲಕ ನೀಡಿರುವ ಧಕ್ಕೆ"[೧೧] ಎಂದು ಸ್ತ್ರೀವಾದಿ ವಿಮರ್ಶೆಯನ್ನು ವ್ಯಾಖ್ಯಾನಿಸಬಹುದು. ಸ್ತ್ರೀವಾದಿ ಚಿಂತನೆ ಮಹಿಳೆಗೆ ಸಂಬಂಧಿಸಿದ ಎಲ್ಲ ಆಯಾಮಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವುದರಿಂದ ಮಹಿಳಾ ಬದುಕು, ಅವಳ ಬದುಕಿನ ಕ್ರಮ, ಅವಳನ್ನು ಆವರಿಸಿರುವ ಸಾಮಾಜಿಕತೆ, ಅದರಿಂದ ಅವಳೆದುರಿಸುವ ಸಮಸ್ಯೆಗಳು, ಅಭಿವ್ಯಕ್ತಗೊಂಡ ಸಾಹಿತ್ಯ; ಸಾಹಿತ್ಯ ಚಿಂತನೆಗಳ ದೃಷ್ಟಿಯಿಂದ 'ಕಳಪೆ ಸಾಹಿತ್ಯ' 'ತೆಳುರಚನೆ' ಎನ್ನಿಸಿಕೊಳ್ಳುವುದರ ಹಿಂದಿರುವ ಶ್ರೇಷ್ಠತೆಯ ರಾಜಕಾರಣ ಎಲ್ಲವನ್ನು ಅಧ್ಯಯನದಲ್ಲಿ ಚರ್ಚೆಗೊಳಪಡಿಸಲಾಗಿದೆ. ಐದು ಜನ ಬರಹಗಾರ್ತಿಯರ (ತ್ರಿವೇಣಿ, ಉಷಾ ನವರತ್ನರಾಮ್, ಸಾಯಿಸುತೆ, ಹೆಚ್.ಜಿ. ರಾಧಾದೇವಿ ಮತ್ತು ಆರತಿ ವೆಂಕಟೇಶ್) ಕೆಲವು ಕೃತಿಗಳನ್ನು ಪ್ರಾಯೋಗಿಕ ವಿಮರ್ಶೆಗೆ ಬಳಸಿಕೊಂಡು ಅವುಗಳನ್ನು 'ಜನಪ್ರಿಯ' ಎಂದು ಗುರುತಿಸಿರುವುದರ ಹಿನ್ನಲೆ, ಯಾರು ಗುರುತಿಸಿದರು, ಯಾಕೆ ಗುರುತಿಸಿದರು ಎನ್ನುವ ಚರ್ಚೆಯನ್ನು ಮಾಡಲಾಗುತ್ತದೆ. 'ಜನಪ್ರಿಯ' ಎಂಬ ಪರಿಭಾಷೆ ಸಾಹಿತ್ಯ ಚಿಂತನೆಯಲ್ಲಿ ಗ್ರಹಿಸಲ್ಪಟ್ಟ ರೀತಿ ಮತ್ತು ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿ ಗ್ರಹಿಸುವ ರೀತಿಯನ್ನು ಚರ್ಚಿಸಲಾಗಿದೆ. ಸ್ತ್ರೀವಾದದ ಜೊತೆಗೆನೇ ಸಮಾಜಶಾಸ್ತ್ರ, ಮನಃಶಾಸ್ತ್ರದ ತಿಳುವಳಿಕೆಯನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಮಹಿಳೆಯ ಅಭಿವ್ಯಕ್ತಿಯ ಸ್ವರೂಪವನ್ನು ಮೂರು ಹಂತಗಳಲ್ಲಿ ಗುರುತಿಸಿಕೊಳ್ಳಲಾಗಿದೆ.

೧. ಸ್ವಂತಿಕೆಯ ಪ್ರಜ್ಞೆ ಇಲ್ಲದ ಸಂದರ್ಭದಲ್ಲಿನ ಮಹಿಳಾ ಅಭಿವ್ಯಕ್ತಿ.

೨. ಒಂದಿಷ್ಟು ಪ್ರಜ್ಞೆಯ ಸಂಚಲನೆಯೊಂದಿಗೆ, ದ್ವಂದ್ವದೊಂದಿಗೆ ಅರಿವಿದ್ದರೂ, ಬಲವಾದ ಪಿತೃಪ್ರಧಾನತೆಯೊಂದಿಗೆ ರಾಜಿ ಮಾಡಿಕೊಂಡು, ಸಿಕ್ಕ ಅವಕಾಶಗಳೇ ಸ್ವತಂತ್ರದ ಹಾದಿಯೆಂದು ತಿಳಿದುಕೊಂಡ ಸಂದರ್ಭದಲ್ಲಿನ ಮಹಿಳೆಯ ಅಭಿವ್ಯಕ್ತಿ.

೩. ಮಹಿಳೆಯ ಪ್ರಜ್ಞಾ ಚೇತನದ ಹಂತ. ಅದು ಅವಕಾಶಗಳನ್ನು ಸೃಷ್ಟಿಸಿಕೊಳ್ಳುವ ಹಂತ. ಇಲ್ಲಿ ಹೊಸ ಸಾಧ್ಯತೆಗಳು ಸಾಧ್ಯವಾಗುತ್ತವೆ.

ಮಹಿಳೆಯ ಚೇತನ ಮೂರನೇ ಹಂತಕ್ಕೆ ಬರಬೇಕಾದರೆ ಒಂದು, ಎರಡನೆಯ ಹಂತವನ್ನು ದಾಟೇ ಬರಬೇಕು. ಆದ್ದರಿಂದಲೇ ಜನಪ್ರಿಯ ಸಂಸ್ಕೃತಿ ಮತ್ತು ಸಾಹಿತ್ಯವನ್ನು ಗಮನಿಸುವ ಸಂದರ್ಭದಲ್ಲಿ ಈ ಮಾದರಿಯ ಸಾಹಿತ್ಯ ರಚನೆಗೆ ಕಾರಣಗಳನ್ನು ಗಮನಿಸಬೇಕು. ಮಹಿಳಾ ಬದುಕನ್ನು ಆವರಿಸಿರುವ, ಆ ಮೂಲಕ ಅವಳ ಬದುಕಿನ 'ಹರಿ-ಹರ-ಬ್ರಹ್ಮ' ಆಗಿರುವ ಪಿತೃಪ್ರಧಾನತೆಯು ಸೃಷ್ಟಿಮಾಡಿರುವ ಸಾಮಾಜಿಕ ಸತ್ಯಗಳ ಸ್ವರೂಪವನ್ನು ಗಮನಿಸಲಾಗಿದೆ. ಮಹಿಳೆಯ ವ್ಯಕ್ತಿತ್ವದ ಶೋಧಕ್ಕೆ ಅವಕಾಶವೇ ಇಲ್ಲದ ಸಂದರ್ಭದಲ್ಲಿ ಮೊದಲನೆರಡು ಹಂತಗಳು ಅವಳು ಸಾಗಿ ಬರುವ ಹಾದಿಯ ಪ್ರಮುಖ ಹೆಜ್ಜೆಗಳು. ಬುದ್ಧಿ-ಭಾವಗಳ ಬಂಧನಕ್ಕೆ ಒಳಗಾಗಿರುವ ಮಹಿಳೆ ದೊರೆತ ಅವಕಾಶದಲ್ಲಿಯೇ ತನ್ನನ್ನು ಅಭಿವ್ಯಕ್ತಿಸಿಕೊಂಡಾಗ ಅವಳ ಪ್ರಯತ್ನಕ್ಕೆ ಹಲವು ತರಹದ ಪ್ರತಿರೋಧಗಳಿದ್ದವು. ಲೋಕಸತ್ಯವೇ ಸಾಹಿತ್ಯದಲ್ಲಿ ಬಿಂಬಿತವಾಗುತ್ತದೆ ಎನ್ನುವ ಸಾಹಿತ್ಯ ಚಿಂತನೆ, ಮಹಿಳೆ ತನ್ನ ಲೋಕಸತ್ಯವನ್ನು ಬಿಂಬಿಸಿದಾಗ ಅದನ್ನು ಕಳಪೆ ಎಂದು ಗುರುತಿಸಿತು ಯಾಕೆ, ಮಹಿಳೆಯ ಜಗತ್ತು ಯಾಕೆ ಕೀಳಾಗಬೇಕು, ಅದೇಕೆ ನಗಣ್ಯವಾಯ್ತು, ಅವಳ ಅಭಿವ್ಯಕ್ತಿ 'ಜನಪ್ರಿಯ' ಎಂದೇಕೆ ಕರೆಸಿಕೊಳ್ಳಬೇಕಾಯ್ತು, ಹಾಗೆ ಗುರುತಿಸಿದವರು ಯಾರು, ಕಾರಣಗಳೇನು – ಈ ಎಲ್ಲ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳುವ ಪ್ರಯತ್ನ ಈ ಅಧ್ಯಯನದ್ದು. ಪ್ರಾಯೋಗಿಕ ಪರೀಕ್ಷೆಯಲ್ಲಿ ಆಯ್ದ ಕೃತಿಗಳಲ್ಲಿ ಬಿಂಬಿತವಾಗಿರುವ ಜಗತ್ತು ಏನನ್ನು ಹೇಳುತ್ತದೆ ಎನ್ನುವದು ಕೂಡಾ ಅಧ್ಯಯನಕ್ಕೆ ಆಸಕ್ತಿಯ ವಿಷಯ.

ಈ ಅಧ್ಯಯನದಲ್ಲಿ ಸಾಹಿತ್ಯ ವಿಮರ್ಶೆ 'ಜನಪ್ರಿಯ' ಎಂದು ಗುರುತಿಸಿರುವ ಐದು ಜನ ಬರಹಗಾರ್ತಿಯರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. 'ತ್ರಿವೇಣಿ', 'ಉಷಾ ನವರತ್ನರಾಮ್' 'ಸಾಯಿಸಂತೆ' 'ಹೆಚ್.ಜಿ. ರಾಧಾದೇವಿ', 'ಆರತಿ ವೆಂಕಟೇಶ್'ರವರು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಬರಹಗಾರ್ತಿಯರು. ಇವರಲ್ಲಿ

‘ತ್ರಿವೇಣಿ’ಯವರನ್ನು ಒಂದನೆಯ ತಲೆಮಾರಿನ ಬರಹಗಾರ್ತಿಯೆಂದೂ, ‘ಉಷಾ’, ‘ಸಾಯಿಸುತೆ’, ‘ರಾಧಾದೇವಿ’ಯರನ್ನು ಎರಡನೆಯ ತಲೆಮಾರಿನ ಬರಹಗಾರ್ತಿಯರೆಂದೂ, ‘ಆರತಿ’ಯವರನ್ನು ಮೂರನೆಯ ತಲೆಮಾರಿನ ಬರಹಗಾರ್ತಿಯೆಂದು ಆಯ್ಕೆ ಮಾಡಿಕೊಳ್ಳಲಾಗಿದೆ. ತ್ರಿವೇಣಿಯವರು, ಹೆಚ್.ವಿ. ಸಾವಿತ್ರಮ್ಮ, ಎಂ.ಕೆ. ಇಂದಿರಾ, ಅನುಪಮಾ ನಿರಂಜನ – ಇವರುಗಳ ಸಮಕಾಲೀನರು. ಮಹಿಳೆಯ ಸಮಸ್ಯೆಗಳು, ವಿಶೇಷವಾಗಿ ವಿವಾಹ, ಮರುವಿವಾಹ, ಉದ್ಯೋಗ, ಇವುಗಳಿಗೆ ತೆರೆದುಕೊಂಡ ಹೆಣ್ಣಿನ ಸಮಸ್ಯೆಗಳನ್ನು ಮನಃಶಾಸ್ತ್ರದ ಆಯಾಮದೊಂದಿಗೆ ಬೆರೆಸಿ ತ್ರಿವೇಣಿಯವರು ಹೇಳಿದ್ದಾರೆ. ಮಂಡ್ಯದವರಾದ ಅನುಸೂಯಾರವರು, ಅಂಕಿತನಾಮ ‘ತ್ರಿವೇಣಿ’ಯಿಂದ ಸಾಹಿತ್ಯ ಲೋಕಕ್ಕೆ ಪರಿಚಿತವಾದವರು. ಮನಃಶಾಸ್ತ್ರದ ವಿದ್ಯಾರ್ಥಿನಿಯಾದ ಇವರು ತಮ್ಮ ಕೃತಿಗಳಲ್ಲಿ ಮಹಿಳೆಯ ಬದುಕು-ಬವಣೆಗಳನ್ನು, ಅವಳ ಮಾನಸಿಕ ಪಾತಳಿಗಳನ್ನು ಸೂಕ್ಷ್ಮವಾಗಿ ತೆರೆದಿಡುವ ಸಮರ್ಥ ಪ್ರಯತ್ನ ಮಾಡಿದವರು. ಅವರ ಅನೇಕ ಕಾದಂಬರಿಗಳು ಮಹಿಳಾ ಲೋಕದ ತಲ್ಲಣಗಳನ್ನು ಹೇಳುತ್ತವೆ. ಮೂವತ್ತೈದು ವರ್ಷ ಮಾತ್ರ ಬದುಕಿದ್ದ ತ್ರಿವೇಣಿಯವರು ಸುಮಾರು ಇಪ್ಪತ್ತು ಕಾದಂಬರಿಗಳನ್ನು ನಲ್ವತ್ತೆರಡು ಸಣ್ಣ ಕತೆಗಳನ್ನು ಬರೆದಿದ್ದರು. ಇವರ ಕೃತಿಗಳಲ್ಲಿ ಮಹಿಳಾ ಸಾಮಾಜಿಕತೆ ಬದುಕನ್ನು ಆವರಿಸಿರುವ ರೀತಿಯನ್ನು ಕಟ್ಟಿಕೊಟ್ಟಿದ್ದಾರೆ. ಅವಳ ಸಾಮಾಜಿಕತೆಯೇ ಕಾರಣವಾಗಿ ಕತೆ, ಕಾದಂಬರಿಗಳಲ್ಲಿನ ನಾಯಕಿಯರು ನರಳುತ್ತಲೇ ಇರುತ್ತಾರೆ. ಈ ಎಲ್ಲ ಅಂಶಗಳ ಮೂಲಕ ಕಾದಂಬರಿಗಳು ಮಹಿಳಾ ಸಾಮಾಜಿಕತೆಯನ್ನು ತೋರುವ ಕೈಮರಗಳಾಗಿ ಮುಖ್ಯವಾಗಿರುವುದರಿಂದ ಅಧ್ಯಯನಕ್ಕೆ ‘ತ್ರಿವೇಣಿ’ಯವರನ್ನು, ಅವರ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಎರಡನೆಯ ಹಂತದಲ್ಲಿ ‘ಉಷಾ’, ‘ಸಾಯಿಸುತೆ’ ‘ರಾಧಾದೇವಿ’ಯರ ಕೃತಿಗಳನ್ನು ಗಮನಿಸಲಾಗಿದೆ. ‘ಉಷಾ ನವರತ್ನರಾಮ್’ ಮೈಸೂರಿನವರು. (೧೯೪೧–೨೦೦೦) ಸುಮಾರು ನೂರಾ ಎಂಟು (೧೦೮) ಕಾದಂಬರಿಗಳನ್ನು ಬರೆದಿದ್ದ ಇವರ ಅನೇಕ ಕೃತಿಗಳು ಇನ್ನೂ ಪ್ರಕಟವಾಗಿಲ್ಲ. ಎಪ್ಪತ್ತರ ದಶಕಗಳಲ್ಲಿ ತುಂಬಾ ಬೇಡಿಕೆಯಿದ್ದ ಬರಹಗಾರ್ತಿ. ಅನೇಕ ಪ್ರಕಾಶಕರ ಪ್ರಕಾರ ಉಷಾ, ತಮ್ಮ ಕಾಲದ ಬರಹಗಾರ್ತಿಯರಲ್ಲೇ ತುಂಬಾ ಬೋಲ್ಡ್. ವಿಭಿನ್ನ ಮತ್ತು ಸಮಕಾಲೀನ ಸಂಗತಿಗಳನ್ನು ತಮ್ಮ ಕಾದಂಬರಿಗಳಲ್ಲಿ ವಸ್ತುವನ್ನಾಗಿ ಆಯ್ಕೆ

ಮಾಡಿಕೊಂಡವರು. ಓದುಗರ ಬೇಡಿಕೆಯ ಪಟ್ಟಿಯಲ್ಲಿ ಇವರದು ಯಾವಾಗಲೂ ಒಂದು, ಎರಡು, ಮೂರನೆಯ ಹೆಸರೇ!

'ಸಾಯಿಸುತೆ'ಯವರು ೧೨೫ಕ್ಕೂ ಮಿಕ್ಕಿ ಕಾದಂಬರಿಗಳನ್ನು ರಚಿಸಿದವರು. ಒಂದು ಮಾಹಿತಿ ಪ್ರಕಾರ ಅವರ ನೂರ ಇಪ್ಪತ್ತೈದನೆಯ ಕಾದಂಬರಿಯವರೆಗೆ ಮುದ್ರಿತವಾದ ಪುಟಗಳ ಸಂಖ್ಯೆ ೨೬,೩೬೧. ಓದುಗರ ಬೇಡಿಕೆಯ ಪಟ್ಟಿಯಲ್ಲಿ ಯಾವಾಗಲೂ ಮೊದಲನೆಯ ಸ್ಥಾನವನ್ನು ಗಳಿಸಿ ಜನಪ್ರಿಯತೆಯನ್ನು ಗಳಿಸಿಕೊಂಡವರು.

'ಹೆಚ್.ಜಿ. ರಾಧಾದೇವಿ'ಯವರ ಪ್ರಕಟಿತ, ಅಪ್ರಕಟಿತ ಕೃತಿಗಳು ಸಂಖ್ಯೆಯಲ್ಲಿ ೧೫೬. ಕೋಲಾರ ಜಿಲ್ಲೆಯ ಶಿಡ್ಲಘಟ್ಟ ಇವರೂರು. 'ಸುವರ್ಣ ಸೇತುವೆ' ಕಾದಂಬರಿಯಿಂದ ಪ್ರಾರಂಭಗೊಂಡ ಇವರ ಕಾದಂಬರಿಗಳ ರಚನೆಗೆ ಪ್ರಕಾಶಕರಲ್ಲಿ ಮತ್ತು ಓದುಗರಲ್ಲಿ ಬಹು ಬೇಡಿಕೆಯಿತ್ತು.

ಈ ಮೂರು ಜನ ಕಾದಂಬರಿಕಾರ್ತಿಯರು ನೂರಕ್ಕೂ ಮಿಕ್ಕಿ ಕೃತಿಗಳನ್ನು ರಚನೆಮಾಡಿ ಜನಪ್ರಿಯತೆಯ ಪಟ್ಟಿಯಲ್ಲಿ ಒಂದು, ಎರಡು, ಮೂರನೆಯ ಸ್ಥಾನದಲ್ಲಿದ್ದವರು. 'ಆರತಿ ವೆಂಕಟೇಶ್' ಈ ತಲೆಮಾರಿನ 'ಜನಪ್ರಿಯ' ಬರಹಗಾರ್ತಿ. ಕಾದಂಬರಿಕಾರ್ತಿ ಉಷಾ ನವರತ್ನರಾಮ್‌ರವರ ಮಗಳು. ತಾಯಿಯ ಆಸಕ್ತಿ, ಡಾಕ್ಟರ್‌ಗಳ ಬದುಕು-ಬವಣೆಯನ್ನು ಕುರಿತಂತೆ ಇದ್ದ ಹಾಗೇಯೆ ಮಗಳ ಆಸಕ್ತಿಯೂ ಇದೆ. ವೃತ್ತಿಯಿಂದ ಡಾಕ್ಟರ್ ಆದ ಆರತಿ ಪ್ರವೃತಿಯಿಂದ ಕಾದಂಬರಿಕಾರ್ತಿ. ಇಂದಿನ ಯುವಪೀಳಿಗೆಯಲ್ಲಿ ಬೇಡಿಕೆಯಲ್ಲಿರುವ ಮಹಿಳಾ ಬರಹಗಾರ್ತಿಯರಲ್ಲಿ ಇವರೂ ಒಬ್ಬರು.

ತ್ರಿವೇಣಿಯಿಂದ ಪ್ರಾರಂಭಗೊಂಡು ಈ ಅಧ್ಯಯನದಲ್ಲಿ ಗಮನಿಸಲಾಗುವ ಕಾದಂಬರಿಕಾರ್ತಿಯರಲ್ಲಿ, ಆರತಿ ಇಂದಿನ ಪೀಳಿಗೆಯವರು. ಮಹಿಳಾ ಚಿಂತನೆಗಳು, ವಿದ್ಯಾಭ್ಯಾಸದ ಸೌಲಭ್ಯ, ಆರ್ಥಿಕ ಸೌಲಭ್ಯ, ತೊಡಗಿಸಿಕೊಳ್ಳಲು ಉದ್ಯೋಗ – ಎಲ್ಲವೂ ಸಶಕ್ತ ಮಹಿಳೆಗೆ ಒದಗಬೇಕಾಗಿರುವ ಸಾಧನಗಳು. ಈ ಎಲ್ಲವೂ ಆರತಿಯವರಂಥ ಮಹಿಳಾ ಸಮುದಾಯಕ್ಕೆ ದತ್ತವಾದರೂ, ಅವರುಗಳು ಮತ್ತೆ 'ಜನಪ್ರಿಯ' ಸಾಹಿತ್ಯ, ಕಾದಂಬರಿಗಳ ರಚನೆ, ಓದುಗಳಲ್ಲಿ ತೊಡಗುವುದು ಏಕೆ ಎಂಬ ಪ್ರಶ್ನೆಗೆ ಉತ್ತರವನ್ನು ಸ್ತ್ರೀವಾದಿ ಚಿಂತನೆ ಒದಗಿಸುತ್ತದೆ. ಮೇಲ್ನೋಟದ ಬದಲಾವಣೆಗಳು ವೈಯಕ್ತಿಕವಾಗಿ ಕೆಲವು ಮಹಿಳೆಯರ ಬದುಕಿನಲ್ಲಿ ಬದಲಾವಣೆಗಳನ್ನು ತರಬಹುದೇ ಹೊರತು, ಅವುಗಳಾವುವೂ

ತಲುಪದೇ ಇರುವ ಅಸಂಖ್ಯಾತ ಮಹಿಳಾ ಸಮುದಾಯದ ಬದುಕಿನಲ್ಲಿ ಅಂಥ ಬದಲಾವಣೆಗಳು ಕಷ್ಟ ಸಾಧ್ಯ. ಈ ಕಾರಣದಿಂದಲೇ ಇಂದೂ ಮಹಿಳಾ ಸಮುದಾಯದ ಅಧೀನ ಅವಸ್ಥೆಯನ್ನು ಸೂಚಿಸುವ ತಲೆಮಾರಿನ ಪ್ರತಿನಿಧಿಯಾಗಿ 'ಆರತಿ ವೆಂಕಟೇಶ್' ಅವರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಐದು ಜನ ಕಾದಂಬರಿಕಾರ್ತಿಯರ ಕಾದಂಬರಿಗಳಲ್ಲಿ ಬಳಕೆಯಾಗುವ ವಸ್ತು, ತಂತ್ರ, ವಿನ್ಯಾಸ, ಭಾಷೆಗಳು ಒಂದು ಕೃತಿಗಿಂತ ಇನ್ನೊಂದು ಕೃತಿಗೆ ಬಹಳ ಭಿನ್ನವಾಗಿರುವುದಿಲ್ಲ. ಕೌಟುಂಬಿಕ ಹಿನ್ನೆಲೆಯಲ್ಲಿ ಮೇಲ್ವರ್ಗ, ಮಧ್ಯಮವರ್ಗ, ಕೆಲಬಾರಿ ಕೆಳವರ್ಗಗಳ ಚಿತ್ರಣ, ಅವರ ದಿನನಿತ್ಯದ ಸಮಸ್ಯೆಗಳು, ಅದಕ್ಕೆ ಸಿಕ್ಕ ಪರಿಹಾರಗಳು, ನಿಗದಿತ ಪಾತ್ರ ನಿರ್ವಹಣೆ ಮಾಡುವ ಗಂಡು ಹೆಣ್ಣುಗಳು; ಆದರ್ಶ ಗಂಡ, ಕುಟುಂಬ, ಹೆಂಡತಿ ಇವುಗಳ ಚಿತ್ರಣ. ಎಲ್ಲ ಸಮಸ್ಯೆಗಳಿಗೂ ದೊರೆಯುವ ಪರಿಹಾರ – ಹೀಗೆ ಕಾದಂಬರಿಗಳು ಪುನರಾವರ್ತಿತ ನೆಲೆಯಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುತ್ತವೆ. ಇಲ್ಲಿ ಒಂದು ಭ್ರಮಾಲೋಕ ಸೃಷ್ಟಿಯಾಗಿರುತ್ತದೆ. ಓದುವ ವರ್ಗ ಇದರಲ್ಲಿ ಮೈಮರೆತು, ತನ್ನ ತಲ್ಲಣಗಳನ್ನು ತಾತ್ಕಾಲಿಕವಾಗಿ ಮರೆಯುತ್ತದೆ. ಇಂಥ ರಚನೆಗಳನ್ನು ಸಾಂಪ್ರದಾಯಿಕ ಸಾಹಿತ್ಯ ಚಿಂತನೆ; ಪ್ರಚಾರಕ್ಕಾಗಿ, ಹೊಟ್ಟೆಪಾಡಿಗಾಗಿ, ಅವಸರದ ಕಾರಣಕ್ಕಾಗಿ ಬರೆದ ಕೃತಿಗಳೆಂದು ಹೇಳಿ ಅವುಗಳನ್ನು ತಿರಸ್ಕರಿಸುತ್ತದೆ. ಇಂಥ ಸಾಹಿತ್ಯ ಚಿಂತನೆ, ಸಾಹಿತ್ಯ ವಿಮರ್ಶೆಯ ನೆಲೆಗಳಿಂದ ನೋಡಿದಾಗ ಖಂಡಿತವಾಗಿಯೂ ಈ ಕಾದಂಬರಿಗಳಲ್ಲಿ ಈ ಲೋಪದೋಷಗಳು ಗಾಢವಾಗಿ ಕಾಣವುದೇನೋ ನಿಜ.

ಆದ್ದರಿಂದಲೇ ಒಟ್ಟಾರೆ ಮಹಿಳಾ ಸಾಹಿತ್ಯ, ಜನಪ್ರಿಯ ಸಾಹಿತ್ಯ, ಜನಪ್ರಿಯ ಕಾದಂಬರಿಗಳು ಈ ಮೂರು ನೆಲೆಗಳನ್ನು ಸ್ತ್ರೀವಾದಿ ಸಾಹಿತ್ಯದ ಮರು ಓದಿಗೆ ಒಡ್ಡಿದಾಗ ಮಹಿಳಾ ಸಾಹಿತ್ಯದ ರಚನೆಗೆ ಸೃಜನತೆಯ ಮೂಲದಲ್ಲಿ ಇರುವ ಸಮಸ್ಯೆ, ತೊಡಕುಗಳು ಅರ್ಥವಾಗುತ್ತದೆ. ಪ್ರಾರಂಭದಲ್ಲೇ ಚರ್ಚಿಸಿದಂತೆ ಮಹಿಳೆಯ ಅಭಿವ್ಯಕ್ತಿಯ ತೊಡಕುಗಳಿಗೆ ಕಾರಣಗಳನ್ನು ವೈಯಕ್ತಿಕ ನೆಲೆಯಲ್ಲಿ ಗುರುತಿಸದೆ, ಸಾಮಾಜಿಕ ನೆಲೆಯಲ್ಲಿ ಗುರುತಿಸುವ ಅಗತ್ಯ ಅತ್ಯಂತ ಸೂಕ್ತವಾದದ್ದು ಮತ್ತು ಈ ಸಂಗತಿಗಳು ಮಹಿಳಾ ಬದುಕನ್ನು, ಸಾಹಿತ್ಯವನ್ನು ಗಟ್ಟಿಮಾಡುವಲ್ಲಿ ಸಹಾಯಕವಾಗುವುದರಿಂದ ಪ್ರಸ್ತಾಪಿಸಿದ ಐದು ಜನ ಕಾದಂಬರಿಕಾರ್ತಿಯರ ಕೃತಿಗಳನ್ನು ಪಾರಂಪರಿಕ ಸಾಹಿತ್ಯ ಚಿಂತನೆಗಳಿಗಿಂತ. ಭಿನ್ನವಾದ ಸ್ತ್ರೀವಾದಿ ಚಿಂತನೆಗಳಲ್ಲಿ ಅಧ್ಯಯನ ಮಾಡಲು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಐದು ಜನ

ಆಯಾ ತಲೆಮಾರಿನ ಪ್ರಾತಿನಿಧಿಕ ಬರಹಗಾರ್ತಿಯರು. 'ಜನಪ್ರಿಯ' ಎಂದು ಗುರುತಿಸಿಕೊಂಡಿರುವ ಈ ಮಾದರಿಯ ರಚನೆಯಲ್ಲಿ, ಓದಿನಲ್ಲಿ ಸಾಮಾಜಿಕವಾಗಿ ಅಧೀನ ಬದುಕನ್ನು ಬದುಕುತ್ತಿರುವ ಬಹು ಮಹಿಳಾ ಸಮುದಾಯ ತೊಡಗಿಸಿಕೊಂಡಿದೆ. ಇವರ ಕೃತಿಗಳನ್ನು ಪ್ರಾಯೋಗಿಕ ವಿಶ್ಲೇಷಣೆಗೆ ಒಳಪಡಿಸಿ, ಅಲ್ಲಿನ ವಸ್ತು, ತಂತ್ರ, ಭಾಷಾ ಬಳಕೆಯನ್ನು ಗಮನಿಸಿ, ನಿರಂತರವಾಗಿ ಇಂಥದ್ದೊಂದು ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುವುದರ ಮುಖಾಂತರ, ಹೆಣ್ಣು ತಾನು ತನ್ನ ಸೀಮಿತ ಬದುಕಿನ ಸ್ತರದಲ್ಲೇ ಇರಬಯಸುವ ರೀತಿ, ಅದಕ್ಕೆ ತನ್ನ ಕುಟುಂಬದವರು ಸ್ಪಂದಿಸಬೇಕಾದ ರೀತಿಯನ್ನು ಪದೇ ಪದೇ ಹೇಳುವುದರ ಮುಖಾಂತರ ತನ್ನನ್ನು ವ್ಯಕ್ತಗೊಳಿಸಿಕೊಳ್ಳುವುದನ್ನು ಗಮನಿಸಲಾಗಿದೆ. ಇದರ ಜೊತೆಗೇನೆ ಕಾದಂಬರಿಗಳು ಮಹಿಳೆಯ ವಾಸ್ತವವನ್ನು, ಅವಳು ತನ್ನದಲ್ಲದ ಭಾಷೆಯಲ್ಲಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವಾಗಿನ ತೊಡಕುಗಳನ್ನು ಹೇಳುತ್ತವೆ ಎನ್ನುವುದನ್ನು ಚರ್ಚೆಗೆ ಒಳಪಡಿಸಲಾಗಿದೆ.

ಕಾದಂಬರಿಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವದರ ಜೊತೆಜೊತೆಗೆ ಓದುಗರಿಗೆ, ಲೇಖಕಿಯರಿಗೆ, ಪ್ರಕಾಶಕರಿಗೆ ಪ್ರಶ್ನಾವಳಿಗಳನ್ನು ರಚಿಸಿ ಅವರನ್ನು ಸಂದರ್ಶನ ಮಾಡಲಾಗಿದೆ. ಇದರ ಫಲಿತಗಳು ಕಾದಂಬರಿಗಳ ಪ್ರಾಯೋಗಿಕ ವಿಮರ್ಶೆಯಿಂದ ದೊರೆತ ಫಲಿತಗಳನ್ನು ಮತಷ್ಟು ಖಚಿತಗೊಳಿಸಲು ಪೂರಕವಾಗಿರುತ್ತವೆ ಎಂಬ ನಂಬಿಕೆ ಈ ಅಧ್ಯಯನದ್ದು. ಜನಪ್ರಿಯ ಮಾಧ್ಯಮಗಳಲ್ಲಿ ನಿರತರಾಗಿರುವ ಅನೇಕ ವಿದ್ವಾಂಸರನ್ನು ಸಂದರ್ಶಿಸುವ ಮೂಲಕ ಅಧ್ಯಯನಕ್ಕೆ ಹೆಚ್ಚು ಖಚಿತತೆಯನ್ನು ಒದಗಿಸಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಅಧ್ಯಯನಕ್ಕೆ ಅಗತ್ಯವೆನಿಸುವಷ್ಟು ಮಾಹಿತಿಗಾಗಿ ಮಾತ್ರ ಕ್ಷೇತ್ರ ಅಧ್ಯಯನವನ್ನು ಮಾಡಲಾಗಿದೆ. ಕ್ಷೇತ್ರ ಅಧ್ಯಯನದಲ್ಲಿ ಪ್ರಶ್ನಾವಳಿಗಳ ಮೂಲಕ ಮಹಿಳೆಯ ದುಡಿಮೆ ಮತ್ತು ವಿರಾಮವನ್ನು ಕುರಿತಂತೆ, ಮೌಖಿಕವಾಗಿ ಪ್ರಶ್ನಿಸಿ ದತ್ತಾಂಶಗಳನ್ನು ಪಡೆದುಕೊಳ್ಳಲಾಗಿದೆ.

ಬೇರೆ ಚಿಂತಕರ, ವಿದ್ವಾಂಸರ ವಿಚಾರಗಳನ್ನು ಉಲ್ಲೇಖಿಸಿದಾಗ ಸಂಬಂಧಿಸಿದ ವಿವರಗಳನ್ನು ಆಯಾ ಉಪ ಅಧ್ಯಾಯದ ಕೊನೆಯಲ್ಲಿ ಅಡಿ ಟಿಪ್ಪಣಿಗಳ ರೂಪದಲ್ಲಿ ಕೊಡಲಾಗಿದೆ. ಅಡಿ ಟಿಪ್ಪಣಿ ಕೊಡುವ ವಿಧಾನ ಕೆಳಗಿನಂತಿದೆ.

ಕೃತಿ/ಕೃತಿಕಾರರು/ಪುಟ ಸಂಖ್ಯೆ

## ೧.೪ ವ್ಯಾಪ್ತಿ

ಭಾರತೀಯ ಮತ್ತು ಪಾಶ್ಚಾತ್ಯ ಸಂದರ್ಭಗಳಲ್ಲಿ ಸೃಜನಶೀಲತೆ, ಪ್ರತಿಭೆ, ಪ್ರಜ್ಞೆ, ವಿಮರ್ಶೆಯ ಪರಿಕರಗಳು ಇವುಗಳನ್ನು ಕುರಿತಾದ ದೊಡ್ಡ ಸಾಂಪ್ರದಾಯಿಕ ಚರ್ಚೆಗಳಿವೆ. ಮಹಿಳೆಯ ಸೃಜನತೆ ಆಕಾರವನ್ನು ತಳೆದು ಹೊರಬರುವಾಗ ಎದುರಿಸುವ ಸಮಸ್ಯೆಗಳನ್ನು ಸ್ತ್ರೀವಾದಿ ಚಿಂತನೆಗಳು ಬಹಳ ವ್ಯಾಪಕ ನೆಲೆಯಲ್ಲಿ ಚರ್ಚಿಸಿವೆ. ಮಹಿಳಾ ಅಸ್ತಿತ್ವವನ್ನು ಶೋಧಿಸುವ ಸ್ತ್ರೀವಾದಿ ಸಿದ್ಧಾಂತಗಳು ಚಾರಿತ್ರಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಆಯಾಮಗಳಲ್ಲಿ ಮಹಿಳಾ ಬದುಕು ವ್ಯಕ್ತವಾಗಿರುವ ರೀತಿಯನ್ನು ಚರ್ಚಿಸುತ್ತದೆ.

ಈ ಅಧ್ಯಯನ ಮಹಿಳೆಯ ಅಭಿವ್ಯಕ್ತಿಯ ಒಂದು ನೆಲೆಯಾದ ಜನಪ್ರಿಯ ಕಾದಂಬರಿಗಳನ್ನು ಕೇಂದ್ರವಾಗಿಟ್ಟುಕೊಂಡು, ಪಾರಂಪರಿಕ ಸಾಹಿತ್ಯ ಚಿಂತನೆಗಳು ಮತ್ತು ಸ್ತ್ರೀವಾದವು ಮಂಡಿಸಿರುವ ಸಾಹಿತ್ಯ ಚಿಂತನೆಯನ್ನು ಮುಖಾಮುಖಿಯಾಗಿಸ ಹೊರಟಿದೆ. ಅಧ್ಯಯನಕ್ಕೆ ಪೂರಕವಾಗುವ ಸಾಹಿತ್ಯ ಸಿದ್ಧಾಂತಗಳನ್ನು ಮತ್ತು ಸೃಜನತೆ, ಪ್ರಜ್ಞೆ ಇವುಗಳನ್ನು ಕುರಿತು ಸೂಕ್ಷ್ಮ ಅಧ್ಯಯನ ಮಾಡಿರುವ ಸ್ತ್ರೀವಾದಿ ಚಿಂತನೆಗಳನ್ನು ಬಳಸಿಕೊಂಡಿದೆ. ಚಾರಿತ್ರಿಕವಾಗಿ ಸ್ತ್ರೀವಾದವು ಪಾಶ್ಚಾತ್ಯ ಮೂಲದ್ದೇ. ಅಲ್ಲಿನ ಸ್ತ್ರೀವಾದವನ್ನು ನೇರವಾಗಿ ಭಾರತದಂಥ ಸಮಾಜಗಳಿಗೆ ನೇರವಾಗಿ ಅನ್ವಯಿಸಲು ಸಾಧ್ಯ ವಾಗುವುದಿಲ್ಲ. ಭಾರತದ ಸಂದರ್ಭದಲ್ಲಿ ವರ್ಗ ಸಮಸ್ಯೆಯ ಜೊತೆಗೆ ಜಾತಿ ಸಮಸ್ಯೆ ಮಹಿಳೆಯ ಕಷ್ಟಗಳನ್ನು ದುಪ್ಪಟ್ಟು ಮಾಡಿದೆ. ಆದರೂ ಮಹಿಳೆಯ ಬದುಕಿನ ಎಲ್ಲ ಆಯಾಮಗಳು ಪಾಶ್ಚಾತ್ಯ ಮತ್ತು ಭಾರತೀಯ ಸ್ತ್ರೀವಾದಕ್ಕೆ ಆಸಕ್ತಿದಾಯಕ. ಸುಮಾರು ಇನ್ನೂರು ವರ್ಷಗಳ ಕಾಲ ಪಿತೃಪ್ರಧಾನ ವ್ಯವಸ್ಥೆಯ ಜ್ಞಾನವಲಯಗಳೊಂದಿಗೆ ಮುಖಾಮುಖಿಯಾಗಿ ತನ್ನನ್ನು ತೊಡಗಿಸಿಕೊಂಡಿರುವ ಸ್ತ್ರೀವಾದಿ ಚಿಂತನೆಗಳು, ಚಳುವಳಿಗಳ ಮುಖಾಂತರವೂ ಅನೇಕ ಮಹಿಳಾ ಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಕೊಂಡಿದೆ. ಆ ಎಲ್ಲ ಆಲೋಚನೆಗಳನ್ನು ತರುವುದು ಅಧ್ಯಯನದ ವ್ಯಾಪ್ತಿಗೆ ಮೀರಿದ್ದು.

ಮಹಿಳೆಯದು ಬಹುಮುಖ ಪ್ರತಿಭೆ. ಸೀಮಿತ ನೆಲೆಯ ತನ್ನ ಬದುಕಿನೊಳಗೆ ಮಹಿಳೆ ತನ್ನ ಸೃಜನತೆಯ ಹಲವಾರು ಸೆಲೆಗಳನ್ನು ಕಂಡುಕೊಂಡಿರುತ್ತಾಳೆ. ಆ ಎಲ್ಲ ಕೆಲಸಗಳು

ಪುರುಷ ನಿರ್ದೇಶಿತವಾದರೂ, ಅವುಗಳಲ್ಲಿ ಅವಳ ಪ್ರತಿಭೆ ವ್ಯಕ್ತವಾಗಿರುತ್ತದೆ. ಅಡುಗೆ, ಪೂಜೆ, ಹಾಡು, ಹಸೆಯಂಥ ನಿತ್ಯ ಆವರ್ತನದ ಕೆಲಸಗಳಿಂದ ಹಿಡಿದು, ಬಿಡುವನ್ನು ಕಳೆಯಲು ತೊಡಗಿಸಿಕೊಳ್ಳುವ ಕಸೂತಿ, ಅಲಂಕಾರಗಳು ಅವಳ ಅಭಿವ್ಯಕ್ತಿಯ ನಾನಾ ರೂಪಗಳೇ. ನೃತ್ಯ, ಅಭಿನಯ, ಸಾಹಿತ್ಯ ರಚನೆಗಳು ಕೂಡಾ ಅವಳ ಸೃಜನಶೀಲತೆಯ ವಿಸ್ತರಣೆಗಳೇ. ಈ ಒಂದೊಂದು ಅಭಿವ್ಯಕ್ತಿಗಳು ಅವಳ ಬದುಕಿನ ಬಂಧನ – ಬಿಡುಗಡೆಯ ಸಾಧನಗಳಾಗಬಲ್ಲ ಸಾಧ್ಯತೆಗಳು. ಇವುಗಳಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಾಹಿತ್ಯದ ಅಭಿವ್ಯಕ್ತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಆಧುನಿಕ ಸಾಹಿತ್ಯದ ಹರವು ಬಹಳ ವಿಸ್ತಾರ ಮತ್ತು ವೈವಿಧ್ಯತೆಯುಳ್ಳದ್ದು. ಒಂದು ತೆಕ್ಕೆಯೊಳಗೆ ತೆಗೆದುಕೊಂಡು ಅದನ್ನು ಅಧ್ಯಯನ ಮಾಡುವುದು ಕಷ್ಟಕರ ಕೆಲಸ. ಕತೆ, ಕಾವ್ಯ, ಪ್ರಬಂಧ, ಕಾದಂಬರಿ ಪ್ರಕಾರಗಳಲ್ಲಿ ಮಹಿಳೆ ಸಾಹಿತ್ಯವನ್ನು ರಚಿಸಿದ್ದಾಳೆ. ಎಲ್ಲವನ್ನು ಅಧ್ಯಯನಕ್ಕೆ ಒಳಪಡಿಸುವುದು ಆಗದ ಕಾರಣ ಮಹಿಳಾ ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಯಲ್ಲಿ ಬಳಸಿಕೊಳ್ಳಲಾಗಿದೆ.

ಪ್ರಗತಿಶೀಲ ಸಂದರ್ಭದಲ್ಲಿ ಬಂದ 'ಅ.ನ.ಕೃ.', 'ತ.ರಾ.ಸು', 'ಕೃಷ್ಣಮೂರ್ತಿ ಪುರಾಣಿಕ' ಮುಂತಾದವರ ಜೊತೆಗೆನೇ ಹೆಚ್ಚಾಗಿ ಮಹಿಳೆಯರು ಕಾದಂಬರಿಗಳ ರಚನೆಗೆ ಶುರುಮಾಡಿದ್ದು. 'ತುಳಿತಕ್ಕೆ ಒಳಗಾದ ಜನಾಂಗದ ಸೃಷ್ಟಿ ಕಾದಂಬರಿಗಳು' ಎನ್ನುವ ಅಭಿಪ್ರಾಯಕ್ಕೆ ಪೂರಕವಾಗಿ ಎಂಬಂತೆ ಕಾದಂಬರಿಗಳ ರಚನೆಯಲ್ಲಿ ಮಹಿಳೆಯರು ತೊಡಗಿಸಿಕೊಂಡಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಕಾದಂಬರಿಗಳನ್ನು ರಚಿಸಿರುವುದರಿಂದ, ಎಲ್ಲ ಮಹಿಳಾ ಕಾದಂಬರಿಗಳನ್ನು ಚರ್ಚೆಗೆತ್ತಿಕೊಳ್ಳುವುದು ಈ ಅಧ್ಯಯನದ ವ್ಯಾಪ್ತಿಗೆ ಮೀರಿದ್ದು.

ಮಹಿಳೆಯ ಅಭಿವ್ಯಕ್ತಿಯನ್ನು 'ಜನಪ್ರಿಯ ಸಾಹಿತ್ಯ' ಎಂದು ಗುರುತಿಸಿರುವ ಸಂದರ್ಭವನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಜೊತೆಗೆ, ಬಹು ಮಹಿಳಾ ಸಮುದಾಯ ತೊಡಗಿಸಿಕೊಂಡಿರುವ ಕಾದಂಬರಿಗಳನ್ನು 'ಜನಪ್ರಿಯ ಕಾದಂಬರಿಗಳು' ಎಂದು ಗುರುತಿಸಿರುವುದರಿಂದ, ಅಂಥ ಕಾದಂಬರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇರುವುದರಿಂದ ಎಲ್ಲವನ್ನು ಅಧ್ಯಯನಕ್ಕೆ ಒಳಪಡಿಸುವದು ಅಸಾಧ್ಯ. ಆದ್ದರಿಂದ ಪ್ರಾತಿನಿಧಿಕವಾಗಿ ಹಿಂದೆ ಉಲ್ಲೇಖಿಸಿರುವ ಐದು ಜನ ಬರಹಗಾರ್ತಿಯರ ಆಯ್ದ ಕೃತಿಗಳನ್ನು ಅಧ್ಯಯನದಲ್ಲಿ ಪ್ರಾಯೋಗಿಕ ಚರ್ಚೆಗೆ ಒಳಪಡಿಸಲಾಗಿದೆ. ಈ ಐದು ಜನರಲ್ಲಿ ತ್ರಿವೇಣಿ, ಆರತಿ

ವೆಂಕಟೇಶ್ ಅವರನ್ನು ಹೊರತುಪಡಿಸಿದ ಮೂವರು ಕಾದಂಬರಿಕಾರ್ತಿಯರು ನೂರಕ್ಕೂ ಮಿಕ್ಕಿ ಕಾದಂಬರಿಗಳನ್ನು ರಚಿಸಿರುವುದರಿಂದ ಅವೆಲ್ಲವುಗಳನ್ನು ಪ್ರಾಯೋಗಿಕವಾಗಿ ಬಳಸಿಕೊಳ್ಳುವುದು ಅಗತ್ಯವಿಲ್ಲದರ ಕಾರಣ ಚರ್ಚೆಗೆ ಪೂರಕವಾದ ಕೃತಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಮಹಾಪ್ರಬಂಧ ಒಟ್ಟು ಏಳು ಅಧ್ಯಾಯಗಳನ್ನು ಹೊಂದಿದ್ದು; ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆಯೂ ಸೇರಿದಂತೆ ಅಧ್ಯಯನದ ಉದ್ದೇಶ-ತಾತ್ವಿಕತೆ, ಸ್ವರೂಪ, ವ್ಯಾಪ್ತಿ, ಇದುವರೆಗೆ ನಡೆದ ಅಧ್ಯಯನಗಳನ್ನು ಕುರಿತು ಚರ್ಚೆಯಿದೆ. ಅಧ್ಯಯನದ ಉದ್ದೇಶ-ತಾತ್ವಿಕತೆಗಳಲ್ಲಿ ಪಾರಂಪರಿಕ ಸಾಹಿತ್ಯ ಚಿಂತನೆಗಳು ಮಹಿಳಾ ಬದುಕಿಗೆ - ಬರಹಕ್ಕೆ ನ್ಯಾಯವನ್ನು ಒದಗಿಸಲಾರವು ಆದ್ದರಿಂದ, ಸ್ತ್ರೀವಾದಿ ಸೈದ್ಧಾಂತಿಕ ತಿಳುವಳಿಕೆಯ ಹಿನ್ನಲೆಯಲ್ಲಿ ಸಾಹಿತ್ಯ ಚಿಂತನೆಗಳನ್ನು ಮುಖಾಮುಖಿಯಾಗಿಸಿ, ಮರುಓದಿಗೆ ಒಳಪಡಿಸಬೇಕಾದ ಅವಶ್ಯಕತೆಯನ್ನು ಚರ್ಚಿಸಿದೆ. ಸ್ತ್ರೀವಾದಿ ತಾತ್ವಿಕತೆಗಳು ಹೇಗೆ ಮಹಿಳಾ ನೆಲೆಗಳಲ್ಲಿ ಚಿಂತನೆಯನ್ನು ಮಾಡುತ್ತವೆ ಎನ್ನುವುದನ್ನು ಚಿಂತಕಿಯರ ಚಿಂತನೆಗಳನ್ನು ಬಳಸಿಕೊಳ್ಳುವುದರ ಮೂಲಕ ಗಮನಿಸಲಾಗಿದೆ. ಸ್ವರೂಪದ ಭಾಗದಲ್ಲಿ ಸ್ತ್ರೀವಾದಿ ಚಿಂತನೆಗಳು ಹೇಗೆ ಮಹಿಳಾ ಬದುಕನ್ನು ಅರ್ಥೈಸುತ್ತವೆ ಎಂಬುದನ್ನು ಹೇಳಲಾಗಿದೆ. ವ್ಯಾಪ್ತಿಯ ಭಾಗದಲ್ಲಿ ಅಧ್ಯಯನ ಯಾವ ಚೌಕಟ್ಟನ್ನು ಹೊಂದಿದೆ ಎಂಬುದನ್ನು ವಿವರಿಸಿಕೊಳ್ಳಲಾಗಿದೆ. ಕೊನೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ನಡೆದಿರುವ ಅಧ್ಯಯನಗಳನ್ನು ಗಮನಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಎರಡು ಭಾಗಗಳಿದ್ದು; ಮೊದಲನೆಯ ಭಾಗದಲ್ಲಿ ಸ್ತ್ರೀವಾದಿ ತಾತ್ವಿಕತೆಯ ಸಮಗ್ರ ಸ್ವರೂಪವನ್ನು, ಪಾಶ್ಚಾತ್ಯ ಮತ್ತು ಭಾರತೀಯ ಸ್ತ್ರೀವಾದಿ ಚಿಂತನೆಗಳ ತಾತ್ವಿಕ ನೆಲೆಗಳನ್ನು ಕುರಿತಂತೆ ಒಂದು ಪರಿಚಯಾತ್ಮಕ ಹೊರಳು ನೋಟವಿದೆ. ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ, ಸಾಂಸ್ಕೃತಿಕ, ಮನಃಶಾಸ್ತ್ರದ ಚಿಂತನೆಗಳು ಹೇಗೆ ಸ್ತ್ರೀವಾದದಲ್ಲಿ ಮೂಡಿವೆ ಎನ್ನುವುದನ್ನು ಚರ್ಚಿಸಲಾಗಿದೆ. ಎರಡನೆಯ ಭಾಗದಲ್ಲಿ ಪುರುಷ ಸಾಹಿತ್ಯ ಚರಿತ್ರೆಯಲ್ಲಿ 'ಕಾಣೆ'ಯಾದ ಮಹಿಳೆಯ ಅಭಿವ್ಯಕ್ತಿ, ಮತ್ತದಕ್ಕೆ ಕಾರಣವಾದ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳನ್ನು ಚರ್ಚಿಸಲಾಗಿದೆ ಮತ್ತು ಕನ್ನಡ ಮಹಿಳಾ ಸಾಹಿತ್ಯದ ಚಾರಿತ್ರಿಕ ಸಮೀಕ್ಷೆಯನ್ನು ಮಹಿಳಾ ಅಧ್ಯಯನದ ಬೆಳಕಿನಲ್ಲಿ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರಾಸ್ತಾವಿಕ ಮಾತುಗಳಲ್ಲಿ ಮಹಿಳಾ ಸೃಜನಶೀಲತೆ ಹೊರಬರಲಾರದ ಸಾಮಾಜೀಕರಣದ ಸಂದರ್ಭವನ್ನು, ಅಡೆತಡೆಗಳನ್ನು ದಾಟಿ ಬಂದಾಗ ಎದುರಿಸಬೇಕಾದ ವಿಮರ್ಶೆಯ ಎದಿರೇಟನ್ನು ಚರ್ಚಿಸಲಾಗಿದೆ. ಈ ಅಧ್ಯಾಯವು ಮೂರು ಉಪಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ 'ಜನಪ್ರಿಯ ಸಂಸ್ಕೃತಿ' ಯಾರ ಸೃಷ್ಟಿ, ಯಾಕೆ ಸೃಷ್ಟಿಸಲಾಯಿತು. ಆ ಪ್ರಕ್ರಿಯೆಗಳಲ್ಲಿ ಭಾಗಿಗಳಾದವರು ಯಾರು ಎಂಬೆಲ್ಲಾ ಪ್ರಶ್ನೆಗಳಿಗೆ ಉತ್ತರಗಳನ್ನು ಶೋಧಿಸಲು ಪ್ರಯತ್ನಿಸಲಾಗಿದೆ. 'ಜನಪ್ರಿಯ' ಎಂಬ ಪದದ ವಿಶ್ಲೇಷಣೆ, ಅರ್ಥ, ಆ ಕುರಿತು ನಡೆದಿರುವ ಚರ್ಚೆ, ವ್ಯಾಖ್ಯಾನಗಳನ್ನು ಕುರಿತು ಚರ್ಚಿಸಲಾಗಿದೆ. ಎರಡನೆಯ ಭಾಗದಲ್ಲಿ 'ಜನಪ್ರಿಯ ಕಲೆಗಳು' ಅವು ಮಹಿಳಾ ಸಂದರ್ಭದಲ್ಲಿ ಪರಿಗಣಿತವಾಗುವ ರೀತಿಯನ್ನು ವಿವರಿಸಿಕೊಳ್ಳಲಾಗಿದೆ. ಜನಪ್ರಿಯ ಕಲೆಗಳಾಗಿ ಸಿನೆಮಾ, ಮತ್ತು ಧಾರಾವಾಹಿಗಳ ಪ್ರಾಯೋಗಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಅವುಗಳಲ್ಲಿ ಜನ ಸಮುದಾಯದ, ಮಹಿಳಾ ಸಮುದಾಯದ ಭಾಗಿತ್ವವನ್ನು, ಅದಕ್ಕೆ ಕಾರಣಗಳನ್ನು ಕಂಡುಕೊಳ್ಳಲಾಗಿದೆ. ಮೂರನೆಯ ಭಾಗದಲ್ಲಿ 'ಜನಪ್ರಿಯ ಸಾಹಿತ್ಯ'ವನ್ನು ಗಂಭೀರ ಸಾಹಿತ್ಯದ ಎದುರಿಗಿಟ್ಟು ಚರ್ಚೆ ಮಾಡಿ, 'ಜನಪ್ರಿಯ' ಎಂದು ಬಹು ಸಮುದಾಯದ ಸಾಹಿತ್ಯವನ್ನು ಕಡೆಗಣಿಸಿರುವ, ಅಪಮೌಲ್ಯೀಕರಣ ಮಾಡಿರುವ ಹಿಂದಿನ ಶ್ರೇಷ್ಠತೆಯ ರಾಜಕಾರಣವನ್ನು ಕುರಿತು ಚರ್ಚೆ ಮಾಡಲಾಗಿದೆ. ಜನಪ್ರಿಯ ಸಾಹಿತ್ಯದ ಸೃಷ್ಟಿ, ಅವುಗಳ ರಾಚನಿಕ ಲಕ್ಷಣಗಳ ಕುಂದುಕೊರತೆಗಳನ್ನು ಸಾಹಿತ್ಯ ಚಿಂತನೆಗಳ ನೆಲೆಯಲ್ಲಿ ಗಮನಿಸದೆ ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿ ಗುರುತಿಸಿದಾಗ ಅದಕ್ಕೆ ಕಾರಣಗಳು ವೈಯಕ್ತಿಕ ನೆಲೆಯವಾಗಿರದೆ ಸಾಮಾಜಿಕ ನೆಲೆಯವಾಗಿರುವುದನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಜನಪ್ರಿಯ ಕಾದಂಬರಿಗಳನ್ನು ಕುರಿತಂತೆ ಬಂದಿರುವ ಸಾಹಿತ್ಯ ವಿಮರ್ಶೆಯ ಚರ್ಚೆಗಳನ್ನು ಗಮನಿಸಲಾಗಿದೆ. ಸಾಹಿತ್ಯ ವಿಮರ್ಶೆಯ ಹಿಂದಿರುವ ಲಿಂಗ ರಾಜಕಾರಣವನ್ನು ಗುರುತಿಸಿ, ಆ ದೃಷ್ಟಿಕೋನದಲ್ಲಿ ಮಹಿಳಾ ಕಾದಂಬರಿಗಳನ್ನು ಗಮನಿಸಿದರೆ ಅವುಗಳ ನೆಲೆ-ಬೆಲೆ ಸರಿಯಾಗಿ ಅನಾವರಣಗೊಳ್ಳಲು ಸಾಧ್ಯವಿಲ್ಲ ಎಂಬುದನ್ನು ಸ್ತ್ರೀವಾದಿ ತಾತ್ವಿಕ ನೆಲೆಗಟ್ಟಿನೊಂದಿಗೆ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಆಯ್ದ ಐದು ಜನ 'ಜನಪ್ರಿಯ' ಕಾದಂಬರಿಕಾರ್ತಿಯರೆಂದು ಗುರುತಿಸಲ್ಪಟ್ಟ ಬರಹಗಾರ್ತಿಯರ ಕಾದಂಬರಿಗಳನ್ನು ಪ್ರಾಯೋಗಿಕ ನೆಲೆಯಲ್ಲಿ

ವಿಶ್ಲೇಷಿಸಲಾಗಿದೆ. ಕಾದಂಬರಿಗಳಲ್ಲಿ ಕೆಲವು ಅಂಶಗಳನ್ನು ಚರ್ಚೆಗೆತ್ತಿಕೊಂಡು, ಅವುಗಳ ವಸ್ತು ನಿರ್ವಹಣೆ, ತಂತ್ರ, ಪಾತ್ರ ಕಲ್ಪನೆ ಮತ್ತು ಭಾಷೆಗಳು ಹೇಗೆ ಮೂಡಿವೆ. ಹಾಗೇ ಮೂಡಲು ಕಾರಣಗಳೇನು ಎನ್ನುವುದನ್ನು ಚರ್ಚಿಸಲಾಗಿದೆ. ಸ್ತ್ರೀವಾದಿ ಚಿಂತಕರು ಈ ಎಲ್ಲ ಪರಿಕರಗಳನ್ನು ಕುರಿತು ಮಾಡಿದ ಚರ್ಚೆಯನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಇವುಗಳ ಚರ್ಚೆಗೆ ಪೂರಕವಾಗಿ ಜನಪ್ರಿಯ ಕಾದಂಬರಿಗಳ ರಚನೆ – ಓದುಗಳಲ್ಲಿ ನಿರತವಾಗಿರುವ ಕವಿ–ಕೃತಿ–ಓದುಗ ನೆಲೆಯ ಚರ್ಚೆಗಳನ್ನು ಬಳಸಿಕೊಳ್ಳಲಾಗಿದೆ. ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಬರಹಗಾರ್ತಿಯರ ಅಭಿಪ್ರಾಯ, ಪ್ರಕಾಶಕರ ಅಭಿಪ್ರಾಯ, ಓದುಗರ ಅಭಿಪ್ರಾಯ ಮಾಧ್ಯಮಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವವರ ಅಭಿಪ್ರಾಯ, ಮಾಸ ಪತ್ರಿಕೆಗಳ ಸಂಪಾದಕರ ಅಭಿಪ್ರಾಯಗಳನ್ನು ಪ್ರಶ್ನಾವಳಿಗಳ ಮುಖಾಂತರ ಸಂದರ್ಶಿಸಿ, ದೊರೆತ ಫಲಿತಗಳನ್ನು ಈ ಅಧ್ಯಾಯದಲ್ಲಿ ಮಂಡಿಸಲಾಗಿದೆ. ಮಹಿಳೆಯ ದುಡಿಮೆ ಮತ್ತು ವಿರಾಮಗಳನ್ನು ಕುರಿತಂತೆ ಮಹಿಳಾ ಓದುಗ ಬರಹಗಾರ್ತಿಯರನ್ನು ಚರ್ಚೆಗೆಳೆದು, ಮಹಿಳೆಯ ಬಿಡುವನ್ನು ಕುರಿತು ಚರ್ಚೆ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳನ್ನು, ಉತ್ತರಗಳನ್ನು, ನೀಡಿದ ಸಲಹೆಗಳನ್ನು ಸಮಾರೋಪದಲ್ಲಿ ಹೇಳಲಾಗಿದೆ.

ಅನುಬಂಧಗಳಲ್ಲಿ ನಾಲ್ಕು ಭಾಗಗಳದ್ದು ಅವು: ೧) ಕಾದಂಬರಿಗಳ ಪಟ್ಟಿ ೨) ಪ್ರಶ್ನಾವಳಿಗಳು ೩) ಪರಾಮರ್ಶನ ಗ್ರಂಥಗಳು, ೪) ಪಾರಿಭಾಷಿಕ ಪದಕೋಶ – ಇವುಗಳನ್ನು ಹೊಂದಿರುತ್ತದೆ.

## ೧.೫ ಇದುವರೆಗಿನ ಅಧ್ಯಯನಗಳು

ಅಭಿವ್ಯಕ್ತಿಯ ನೆಲೆಯನ್ನು ಕುರಿತಾದ ಚರ್ಚೆಗಳು ಸಾಹಿತ್ಯ ಚಿಂತನೆಗಳಲ್ಲಿ ಮತ್ತು ಸ್ತ್ರೀವಾದಿ ಚಿಂತನೆಗಳಲ್ಲಿ ಸಾಕಷ್ಟು ನಡೆದಿವೆ. ಕನ್ನಡದಲ್ಲಿ ಕವಿರಾಜಮಾರ್ಗದಲ್ಲಿ ಪ್ರಾರಂಭಗೊಂಡ ಪ್ರತಿಭೆ, ಕವಿ, ಸಹೃದಯ ಚಿಂತನೆಗಳು ಭಾರತೀಯ ಕಾವ್ಯ ಮೀಮಾಂಸೆ, (ತೀ.ನಂ. ಶ್ರೀಂಕಠಯ್ಯ) 'ಕಾವ್ಯಾರ್ಥ ಚಿಂತನೆ' (ಜಿ.ಎಸ್. ಶಿವರುದ್ರಪ್ಪ) ಪಾಶ್ಚಾತ್ಯ ಕಾವ್ಯ ಮೀಮಾಂಸೆ (ಎಂ. ವಿ. ಇನಾಂದಾರ)........... ಮುಂತಾದ ಕೃತಿಗಳಲ್ಲಿ ವಿಸ್ತಾರವಾಗಿ ನಡೆದಿವೆ. ಸ್ತ್ರೀವಾದಿ ಚಿಂತಕರು ಕೂಡಾ ಮಹಿಳಾ ಪ್ರತಿಭೆ, ಅದರ

ಬಹುಸ್ತರೀಯತೆಯನ್ನು ಕುರಿತು ಚರ್ಚಿಸುತ್ತಾ, ಪುರುಷ ಸಿದ್ಧಾಂತ ಮತ್ತು ಚೌಕಟ್ಟುಗಳಿಗೆ ಎದುರಾಗಿ ಸ್ತ್ರೀ ಸಾಹಿತ್ಯವನ್ನು ವಿಶ್ಲೇಷಣೆ ಮಾಡಲು ಸ್ತ್ರೀ ಕೇಂದ್ರಿತ ಚಿಂತನೆಗಳ (ಇದನ್ನೇ ಇಲೇನ್ ಶೋಆಲ್ಟರ್ 'ಗೈನೋಕ್ರಿಟಿಕ್ಸ್' ಎಂಬ ಪರಿಭಾಷೆಯಲ್ಲಿ ಬಳಸುತ್ತಾಳೆ) ಮೂಲಕ ಹೊಸ ಚೌಕಟ್ಟುಗಳ ನಿರ್ಮಾಣವನ್ನು ಕುರಿತು ಚರ್ಚೆಯನ್ನು ಬೆಳೆಸಿದ್ದಾರೆ.

ಪಾಶ್ಚಾತ್ಯ ಸಂದರ್ಭದಲ್ಲಿ ಮಾರ್ಕ್ಸ್‌ವಾದಿ ಚಿಂತಕರಿಂದ ಪ್ರಾರಂಭಗೊಂಡ ಜನಪ್ರಿಯ ಸಂಸ್ಕೃತಿ – ಸಾಹಿತ್ಯಗಳ ಚರ್ಚೆಯನ್ನು ಸಂಸ್ಕೃತಿ ಚಿಂತಕರಾದ 'ಎಫ್.ಆರ್. ಲೀವಿಸ್', 'ರೇಮಾಂಡ್ ವಿಲಿಯಮ್ಸ್', 'ಜಾನ್ ಸ್ಟೋರಿ'............ ಮುಂತಾದವರು ವಿಫುಲವಾದ ಚರ್ಚೆಯನ್ನು ಮಾಡಿದ್ದಾರೆ. ಜನಪ್ರಿಯ ಸಂಸ್ಕೃತಿ, ಸಾಹಿತ್ಯ ಅವುಗಳಿಂದಾಗುವ ಪರಿಣಾಮಗಳನ್ನು ಕುರಿತಂತೆ ಬಹಳ ಗಂಭೀರವಾದ ಚರ್ಚೆಯನ್ನು ಬೆಳೆಸಿದ್ದಾರೆ. ಪಿತೃ ಪ್ರಧಾನ ನೆಲೆಯ ಈ ವಿಮರ್ಶೆಗಳನ್ನು ಜೆಂಡರ್ ನೆಲೆಯಲ್ಲಿ ಮರುವ್ಯಾಖ್ಯಾನಿಸಿರುವ ಸ್ತ್ರೀವಾದಿ ಚಿಂತನೆಗಳನ್ನು ಗಮನಿಸಲಾಗಿದೆ.

ಕನ್ನಡದಲ್ಲಿಯೂ ಸ್ತ್ರೀವಾದಿ ಚಿಂತನೆಗಳಲ್ಲಿ ತೊಡಗಿಸಿಕೊಂಡ ವಿಜಯಾದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ಎಚ್.ಎಸ್. ಶ್ರೀಮತಿ, ನೇಮಿಚಂದ್ರ.......... ಮುಂತಾದವರು ಮಹಿಳಾ ಬದುಕು, ಸೃಜನತೆ, ಅವಳ ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ ಸಂದರ್ಭಗಳನ್ನು ಚರ್ಚಿಸಿದ್ದಾರೆ. ಜನಪ್ರಿಯ ಸಾಹಿತ್ಯವನ್ನು ಕುರಿತಂತೆ ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ಎಚ್.ಎಸ್. ಶ್ರೀಮತಿ, ಡಿ.ಆರ್. ನಾಗರಾಜ, ರಾಜೇಂದ್ರ ಚೆನ್ನಿ, ಸಿ.ಎನ್. ರಾಮಚಂದ್ರನ್, ಪ್ರೀತಿಶುಭಚಂದ್ರ, ಎಚ್.ಎಸ್. ಮಾಧವರಾವ್ (ಅಪ್ರಕಟಿತ ಪಿಎಚ್.ಡಿ. ಪ್ರಬಂಧದಲ್ಲಿ ಜನಪ್ರಿಯ ಸಾಹಿತ್ಯವನ್ನು ಕುರಿತಂತೆ ಚರ್ಚಿಸಿದ್ದಾರೆ).............. ಮುಂತಾದವರು ತಮ್ಮ ಲೇಖನಗಳಲ್ಲಿ ಜನಪ್ರಿಯ ಸಾಹಿತ್ಯದ ಹುಟ್ಟು, ನೆಲೆ, ಅವು ಬೀರುವ ಪ್ರಭಾವ ಮುಂತಾದ ಅಂಶಗಳನ್ನು ಚರ್ಚಿಸಿದ್ದಾರೆ. ಈ ಎಲ್ಲದರ ಓದಿನ ಹಿನ್ನೆಲೆ ಈ ಅಧ್ಯಯನಕ್ಕಿದೆ.

ಇದುವರೆಗೂ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಪಾರಂಪರಿಕ ಸಾಹಿತ್ಯ ಚಿಂತನೆಗಳು ಮಹಿಳೆಯ ಬುದ್ಧಿ-ಭಾವಗಳ ಜಗತ್ತನ್ನು ಆವರಿಸಿದ ಸಂಗತಿಗಳನ್ನು ಸಾಮಾಜಿಕ ನೆಲೆಯಲ್ಲಿ ಲಕ್ಷಿಸದೆ, ತನ್ನ ಮೂಗಿನ ನೇರಕ್ಕೆ ಎಲ್ಲ ಸಂಗತಿಗಳನ್ನು ವಿಶ್ಲೇಷಿಸಿರುವುದನ್ನು ಗಮನಸಿಬಹುದು. ಮಹಿಳಾ ಅಭಿವ್ಯಕ್ತಿ ಪ್ರಕಟಗೊಂಡ ನಂತರ ನೇರವಾಗಿ ಸಾಂಪ್ರದಾಯಿಕ ಸಾಹಿತ್ಯ ವಿಮರ್ಶೆಯ ಮಾನದಂಡಗಳ ಮುಖಾಂತರ ಅದನ್ನು

ಚರ್ಚಿಸಿ, ಕೆಲವು ಬಾರಿ ಚರ್ಚಿಸಲಿಕ್ಕೂ ಯೋಗ್ಯತೆಯಿಲ್ಲ ಎಂಬಂತೆ ನಾಮಕಾವಸ್ತೆ ಹೆಸರಿಸಿ ಕೈಬಿಡುತ್ತವೆ. ಯಾಕೆ ಇಂಥ ಕೃತಿಗಳು ಹೊರಬರುತ್ತವೆ ಎಂಬುದಕ್ಕೆ, 'ಅವರಿಗೆ ಯೋಗ್ಯತೆಯಿಲ್ಲ ಅದರಿಂದ' ಎಂಬ ಸಿದ್ಧ ಉತ್ತರವನ್ನು ಮಂಡಿಸಿಬಿಡುತ್ತವೆ. ಇದೇ ಸೂತ್ರ ಮಹಿಳೆಯ ಸಾಹಿತ್ಯವನ್ನು 'ಜನಪ್ರಿಯ' ಎಂದು ಗುರುತಿಸಿ, ಅಲಕ್ಷಿಸಿರುವುದರಲ್ಲಿಯೂ ಕಂಡುಬರುತ್ತವೆ.

ಇದೇ ಸಂಗತಿಗಳನ್ನು ಸ್ತ್ರೀವಾದಿ ತಾತ್ವಿಕತೆಯ ಮಾನದಂಡಗಳಿಂದ ಗಮನಿಸಲು ಪ್ರಾರಂಭಿಸಿದರೆ. ಈ ಜನಪ್ರಿಯ ಕಾದಂಬರಿಗಳು, ಮಹಿಳೆಯ ಸಾಮಾಜಿಕ ಬದುಕನ್ನು ತೆರೆದಿಟ್ಟಿರುವುದು ಕಾಣುತ್ತದೆ. ಅವಳ ಅಂಚಿಗೆ ಸರಿದ ಬದುಕನ್ನು, ಅವಳದಲ್ಲದ ಅವಳ ಬದುಕನ್ನ ಬದುಕುತ್ತಿರುವುದಕ್ಕೆ ಈ ಕಾದಂಬರಿಗಳು ಸಾಕ್ಷಿಯಾಗುತ್ತವೆ. ಮಹಿಳೆ ನಂಬಿಕೊಂಡ ವಿಚಾರಗಳು, ಆಶೆ, ಆಕಾಂಕ್ಷೆ, ಊಟ, ಉಪಹಾರ, ನಿದ್ರೆ, ಅಂತಿಮವಾಗಿ ಅವಳು ಸ್ವಾತಂತ್ರ ಎಂದುಕೊಂಡ ಸ್ವಾತಂತ್ರ, ಅವಳ ದೇಹ, ತಾಯ್ತನ ಎಲ್ಲವೂ ಅಧೀನ ನೆಲೆಯದೇ. ಅವಳನ್ನು ಬೃಹತ್ತಾಗಿ ಆವರಿಸಿಕೊಂಡಿರುವ ಗೃಹಿಣಿತ್ವ, ಅವಳ ಬದುಕನ್ನು ನಿಯಂತ್ರಿಸುವ ಕೇಂದ್ರ ಸಂಗತಿಯಾಗಿರುವುದರಿಂದಲೇ ಅದರ ಗಾಢ ಪ್ರಭಾವ ಬುದ್ಧಿ-ಭಾವಗಳನ್ನು ಸಹಜವಾಗಿಯೇ ಆವರಿಸಿಕೊಂಡಿರುತ್ತದೆ. ಮೇಲ್ನೋಟಕ್ಕೆ ಓದು-ಬರಹ ಅವಳಿಗೆ ಸ್ವಾತಂತ್ರವನ್ನು ದೊರಕಿಸಿಕೊಟ್ಟಿದೆ ಎನ್ನುವ ಅಂಶ ಕಂಡರೂ ವಾಸ್ತವ ಸಂಗತಿ ಹಾಗಿಲ್ಲ. ಕಾದಂಬರಿಗಳು ಎಲ್ಲ ಸಂದರ್ಭಗಳಲ್ಲಿ ಪದೇ ಪದೇ ಚಿತ್ರಿಸುವ ಅವಸ್ಥೆಗಳು ಅವಳ ಬದುಕಿನ ವಾಸ್ತವಗಳೇ. ಮಹಿಳಾ ಅಧ್ಯಯನ / ಸ್ತ್ರೀವಾದಿ ಚಿಂತನೆ ಅನ್ನುವಂಥದ್ದೇ ಮಹಿಳೆಯ ಬಿಡುಗಡೆಯ ಹಾದಿಗಳನ್ನು ಶೋಧಿಸಿ, ಸ್ವಾತಂತ್ರ್ಯದ ಕಲ್ಪನೆಯ ಮೂಲಕ ಹೊಸ ಹೆಜ್ಜೆಗಳನ್ನು ಹಾಕಲು ಹೊರಟ ಪ್ರಯತ್ನ. ಸ್ತ್ರೀವಾದಿ ನೆಲೆಯ ಚರ್ಚೆ, ಮಹಿಳೆಯ ಯಾವುದೇ ಕ್ರಿಯೆಯಿಂದ ಅವಳಿಗೆ ಬಿಡುಗಡೆ ಅನ್ನೋದು ಸಾಧ್ಯ ಆಗಿದೆಯೇ; ಆಗಿಲ್ಲವಾದರೆ ಯಾಕೆ ಆಗಿಲ್ಲ; ಅದನ್ನು ಯಾವ ಹಾದಿಯ ಮುಖಾಂತರ ಕಟ್ಟಿಕೊಳ್ಳಬೇಕು ಎಂಬ ಪ್ರಶ್ನೆಗಳೊಂದಿಗೇನೇ ಹೊರಡುತ್ತದೆ. ಅಂತೆಯೇ ಮಹಿಳಾ ಅಭಿವ್ಯಕ್ತಿಗೆ ಇರುವ ತೊಡಕುಗಳನ್ನು ಕಂಡುಕೊಂಡು, ಪ್ರಾರಂಭದ ಹಂತಗಳಲ್ಲಿ ಅವುಗಳಿಗೆ ಪರ್ಯಾಯಗಳನ್ನು ಹುಡುಕಿದಾಗ ಮಾತ್ರ ಅವಳ ಅಭಿವ್ಯಕ್ತಿಯ ನೆಲೆಗಳು ಸಾಹಿತ್ಯವೂ ಸೇರಿದಂತೆ, ಜನಪ್ರಿಯ ಕಾದಂಬರಿಗಳೂ ಸೇರಿದಂತೆ, ಅವಳ ಬಿಡುಗಡೆಯ ಹಾದಿಗಳಾಗಬಹುದು.

ಆದ್ದರಿಂದಲೇ ಈ ಅಧ್ಯಯನದಲ್ಲಿ ಜನಪ್ರಿಯ ಕಾದಂಬರಿಗಳನ್ನು ಮಹಿಳೆಯ ಅಭಿವ್ಯಕ್ತಿಯ ಮುಖ್ಯ ನೆಲೆಯಾಗಿ ಭಾವಿಸಿ, ಅವುಗಳು ಅವಳ ಒಳ-ಹೊರಗನ್ನು ತೆರೆದಿಡುವ ಮೂಲಕ ಅವಳಿಗೆಂಥ ಬಿಡುಗಡೆಯನ್ನು, ಆತ್ಮತೃಪ್ತಿಯನ್ನು ತಂದು ಕೊಟ್ಟಿವೆ, ತಂದು ಕೊಟ್ಟಿವೆಯಾ, ಎಂಬುದರ ಚರ್ಚೆಯನ್ನು ಮಾಡಲಾಗಿದೆ. ಅವುಗಳನ್ನು ಓದುವ ಮಹಿಳಾ ಓದುಗ ಲೋಕಕ್ಕೊ ಅವು ಎಂಥ ತೃಪ್ತಿಯನ್ನು ಇತ್ತಿವೆ, ಯಾವ ಹೊಸ ನೆಲೆಗಳು ಅದರಿಂದ ದಕ್ಕಿವೆ ಎಂಬುದನ್ನು ಗಮನಿಸಲಾಗಿದೆ. ಜೊತೆಗೆ ಇಂಥ ರಚನೆ-ಓದಿನಲ್ಲಿ ತೊಡಗಿಕೊಂಡವರಿಗೆ ಅವುಗಳು ತೃಪ್ತಿಯ, ಬಿಡುಗಡೆಯ ಹಾದಿಗಳು ಆಗದೆ ಇರುವಾಗ ಅವರು ಕಂಡುಕೊಳ್ಳಬೇಕಾದ ಹೊಸ ಹಾದಿಗಳು ಯಾವುವು ಎಂಬುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಎಲ್ಲ ಕಾರಣಗಳಿಂದಲೇ ಸಾಹಿತ್ಯ ಕೃತಿಗಳನ್ನು ಸ್ತ್ರೀವಾದಿ ನೆಲೆಯಿಂದ ಮರುವ್ಯಾಖ್ಯಾನಿಸಬೇಕಾದ ಅಗತ್ಯವನ್ನು ಮನಗಂಡು ಆ ದಿಕ್ಕಿನತ್ತ ಆಲೋಚಿಸುವ ಸಣ್ಣ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.



**ಅಡಿಟಿಪ್ಪಣಿಗಳು**

೧) ಭಾರತೀಯ ಕಾವ್ಯ ಮೀಮಾಂಸೆ, ತೀ.ನಂ.ಶ್ರೀಕಂಠಯ್ಯ, ಪುಟ ೧೧೯.

೨) ರಾಜಶೇಖರ ಕಾವ್ಯಮೀಮಾಂಸೆ (ಪದವಾಕ್ಯವಿವೇಕ),ಅನು : ಡಾ ಕೆ.ಕೃಷ್ಣಮೂರ್ತಿ, ಪುಟ ೨೩

೩) ಕಾವ್ಯಾರ್ಥ ಚಿಂತನ, ಡಾ ಜಿ.ಎಸ್. ಶಿವರುದ್ರಪ್ಪ, ಪುಟ ೨೫

೪) ಭಾರತೀಯ ಸ್ತ್ರೀವಾದ, (ಸಂ) ಮನುಚಕ್ರವರ್ತಿ, ಪುಟ ೩

೫) ದ ಫೆಮಿನೈನ್ ಮಿಸ್ಟಿಕ್, ಬೆಟ್ಟಿ ಫ್ರೀಡನ್, ಪುಟ ೧೨

೬) ಕಾವ್ಯಾರ್ಥ ಚಿಂತನ, ಡಾ ಜಿ.ಎಸ್. ಶಿವರುದ್ರಪ್ಪ, ಪುಟ ೨೫

೭) ಭಾರತೀಯ ಸ್ತ್ರೀವಾದ, (ಸಂ) ಮನುಚಕ್ರವರ್ತಿ, ಪುಟ ೨೨

೮) ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಎಚ್.ಎಸ್. ಶ್ರೀಮತಿ (ಅಪ್ರಕಟಿತ)

೯) The feminist critique of Language : A Reader (Ed) Deborah cameron, page no 96.

೧೦) The feminist critique of Language : A Reader (Ed) Deborah cameron, page no 96.

೧೧) ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಅನು : ವಿಠಲರಾವ್ ಗಾಯಕ್ವಾಡ್, ಪುಟ ೪೪

## ಅಧ್ಯಾಯ – ಎರಡು

### ಭಾಗ–೧

## ಅಧ್ಯಾಯ–ಎರಡು

### ಭಾಗ–೧

### ೨.೧ ಸ್ತ್ರೀವಾದಿ ತಾತ್ವಿಕತೆಯ ಸ್ವರೂಪ

ಅನ್ಯ ಜ್ಞಾನವಲಯಗಳು ಪ್ರವೇಶ ಹಲವಾರು ಕಾರಣಗಳಿಂದ ಆಗುತ್ತದೆ. ಅವುಗಳು ಮೂರು ಎಂದು ಎಚ್.ಎಸ್. ಶ್ರೀಮತಿಯವರು ಸರಿಯಾಗಿ ಗುರುತಿಸುತ್ತಾರೆ. "ಜ್ಞಾನವಲಯಗಳನ್ನು ಹೆಚ್ಚಿತಿಳುವಳಿಕೆಗೋಸ್ಕರ ಪ್ರವೇಶಿಸುವುದು ಒಂದು ಬಗೆ. ತಮ್ಮ ಈವರೆಗಿನ ತಿಳುವಳಿಕೆಯನ್ನು ತಾಳೆ ನೋಡಲು ಇತರ ಜ್ಞಾನವಲಯಗಳ ತಿಳುವನ್ನು ಬಳಸುವುದು ಇನ್ನೊಂದು ಬಗೆ. ಮೂರನೆಯದು ಪ್ರತಿರೋಧದ ಬಗೆ. ಇಲ್ಲಿ ತನ್ನ ಶೋಧದ ಚೌಕಟ್ಟಿಗೆ ಇತರ ಜ್ಞಾನವಲಯಗಳ ಗ್ರಹಿಕೆ ಪೂರಕವಾಗಿದೆಯೇ ಅಥವಾ ವಿರೋಧವನ್ನು ಹುಟ್ಟು ಹಾಕುತ್ತಿದೆಯೇ ಎನ್ನುವುದನ್ನು ಕಂಡುಕೊಳ್ಳಲಾಗುತ್ತದೆ".[೧] ಸ್ತ್ರೀವಾದವು ಈ ಮೂರು ಬಗೆಗಳನ್ನು ಸಂದರ್ಭಕ್ಕನುಗುಣವಾಗಿ ಅನುಸರಿಸುತ್ತದೆ. ಎಲ್ಲಾ ಜ್ಞಾನವಲಯಗಳು ಹೆಣ್ಣನ್ನು ಒಳಗೊಳ್ಳದೆ ಚಿಂತನೆಗಳನ್ನು ರೂಪಿಸಿರುವುದು ಸ್ಪಷ್ಟ ಸಂಗತಿ. ಸಾಹಿತ್ಯ ಕೂಡ ಅಂಥ ಜ್ಞಾನವಲಯವೇ ಆಗಿರುವುದರಿಂದ ಸಾಹಿತ್ಯ ಕೃತಿಗಳನ್ನು ಸ್ತ್ರೀವಾದಿ ತಿಳುವಳಿಕೆಯ ಹಿನ್ನೆಲೆಯಲ್ಲಿ ಗಮನಿಸಬೇಕಾದ ಅಗತ್ಯವಿದೆ. ಇಂಥ ಅಧ್ಯಯನದ ಪೂರ್ವದಲ್ಲಿ ಸ್ತ್ರೀವಾದಿ ಚಿಂತನೆಯ ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸುವ ಕ್ರಮ ಮುಖ್ಯವಾದದ್ದು.

ಇದುವರೆಗಿನ ಸಾಂಪ್ರದಾಯಿಕ ಚಿಂತನಾ ವಿಧಾನಗಳು ಮಹಿಳೆಯನ್ನು ಗೃಹಿಣಿತ್ವದ ಗೂಟಕ್ಕೆ ಸಿಕ್ಕಿಸಿ ಮಾನವ ಚರಿತ್ರೆಯಲ್ಲಿ ಅದೃಶ್ಯ ಮಾಡಿದ ಸಂಗತಿ ಹೊಸದಲ್ಲ. 'ಬೆಟ್ಟಿ ಫ್ರೀಡನ್' ಅಮೇರಿಕಾದ ಮಧ್ಯಮ ವರ್ಗದ / ಮೇಲ್ ಮಧ್ಯಮ ವರ್ಗದ ಸಾಕಷ್ಟು ಮಹಿಳೆಯರನ್ನು ಪ್ರಶ್ನಾವಳಿಗಳ ಮೂಲಕ ಸಂಪರ್ಕಿಸಿದಾಗ ದೊರೆತ ದತ್ತಾಂಶಗಳ ಮೂಲಕ ದೊರೆತ ತಿಳುವಳಿಕೆ ಎಂದರೆ ಗೃಹಿಣಿತ್ವ ಎಂಬುದು ಮಹಿಳೆಯ ಹೆಸರಿಸಲಾರದ ಸಮಸ್ಯೆ ಎನ್ನವುದು. ಮುಂದುವರೆದು ಈ ಸಮಸ್ಯೆ ಮಹಿಳೆಯ ವ್ಯಕ್ತಿತ್ವವನ್ನು ಇಡಿಯಾಗಿ ಆವರಿಸಿ ಅವಳ ಬುದ್ಧಿ ಭಾವಗಳನ್ನು ಶೂನ್ಯವಾಗಿಸಿದ್ದನ್ನು ಬೆಟ್ಟಿ ಹೇಳುತ್ತಾಳೆ. ಈ ಕಾರಣದಿಂದಲೇ ಅವಳಿಗೆ ತನ್ನ ವ್ಯಕ್ತಿತ್ವಕ್ಕಿಂತ, ಸಾಮಾಜಿಕ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕಾದದ್ದು ಅನಿವಾರ್ಯವಾಯಿತು ಎಂದು ವಿವರಿಸುತ್ತಾಳೆ. ಈ ಸಂದರ್ಭದಲ್ಲಿಯೇ ಹೆಣ್ಣು ಮರೆಯಾಗುತ್ತ ಹೋಗಿದ್ದು ಚರಿತ್ರೆಯ ವಾಸ್ತವ. ಪುರುಷನಿಗೆ

ಪೂರಕವಾಗಿ ಬದುಕುವುದೇ ಅವಳ ಆತ್ಯಂತಿಕ ಸಂದರ್ಭವಾಗಿತ್ತು. ಅವಳು ತನಗೆ ಮುಖ್ಯ ಎಂದು ತಿಳಿದ ಸಂಗತಿಗಳು ಕೂಡಾ ಅವೇ ಮುಖ್ಯವೆಂದು ಹೇಳಲ್ಪಟ್ಟವು. ಅಡಿಗೆ, ರಂಗೋಲಿ, ಹಾಡು, ಹಸೆ, ಪೂಜೆ, ತಾಯ್ತನ ಎಲ್ಲವೂ ನಿರ್ದೇಶಿತವಾದವೇ. ಪಿತೃಪ್ರಧಾನತೆಯ ಗರಡಿಯಲ್ಲಿ ಪಳಗಿದ ಮಹಿಳೆಗೆ ಉದಾರವಾದಿ ಧೋರಣೆಯಿಂದ ವಿದ್ಯಾಭ್ಯಾಸ, ಉದ್ಯೋಗದ ಅವಕಾಶಗಳು ದಕ್ಕಿದರೂ ಅವು ಅವಳಿಗೆ ಅಸ್ತಿತ್ವದ ಶೋಧನೆಯ ಹಾದಿಯಾಗಿ ಬರಲಿಲ್ಲ.

ಆದರೂ ಮಹಿಳೆಯ ವಿಘಟಿತ ಲೋಕವನ್ನು ಒಂದು ಕಡೆ ಕೂಡಿಸಿಕೊಂಡು, ಕಳೆದುಹೋದ ಅಸ್ತಿತ್ವದ ಎಳೆಗಳನ್ನು ಕೂಡಿಸಿಕೊಳ್ಳುತ್ತಾ ಹೋಗುವ ಸಂದರ್ಭದಲ್ಲಿ ಮಹಿಳೆಯ ಬದುಕಿನ ಯಾವುದೇ ಹಂತವಾದರೂ ಅದು ಮುಖ್ಯವೇ. ಸ್ತ್ರೀವಾದಿ ಚಿಂತಕರು ಸ್ತ್ರೀ, ಸ್ತ್ರೀತನ ಮತ್ತು ಸ್ತ್ರೀತ್ವ ಎಂದು ಮೂರು ಹಂತಗಳನ್ನು ಗುರುತಿಸಿ, ಕೊನೆಯ ಹಂತ ಮಹಿಳೆಯ ಅಸ್ತಿತ್ವದ ಶೋಧದ ಹಂತ ಎಂದು ಹೇಳಿದ್ದಾರೆ. ಒಂದು ಎರಡನೆಯ ಹಂತವನ್ನು ದಾಟಿದಾಗ ಮಾತ್ರ ಮೂರನೆಯ ಹಂತಕ್ಕೆ ತಲುಪಲು ಸಾಧ್ಯ.

ಆದ್ದರಿಂದಲೇ ಮಹಿಳೆಯ ಬದುಕನ್ನು ಅರ್ಥಮಾಡಿಕೊಳ್ಳುವ ಯಾವುದೇ ಸಣ್ಣ ಎಳೆಯೂ ಕೂಡಾ ಅವಳ ಬದುಕನ್ನು ಪೂರ್ಣ ಅರ್ಥಮಾಡಿಕೊಳ್ಳಲು ಸಹಕಾರಿಯಾಗುತ್ತೆ. ಆ ಕಾರಣದಿಂದಲೇ ಅವಳ ಅಭಿವ್ಯಕ್ತಿಯ ಪ್ರಮುಖ ನೆಲೆಯಾದ ಬರಹವನ್ನು ಆಯ್ದುಕೊಂಡು ಸ್ತ್ರೀವಾದಿ ತಾತ್ವಿಕತೆಯನ್ನು ಹಿನ್ನಲೆಯಾಗಿಟ್ಟುಕೊಂಡು ಈ ಅಧ್ಯಯನ ಹೊರಟಿದೆ. ಈ ಸಂದರ್ಭಕ್ಕೆ ಪೂರಕವಾಗಿ ಸ್ತ್ರೀವಾದದ ಪ್ರಮುಖ ಚಿಂತನೆಗಳನ್ನು, ಚಿಂತಕರನ್ನು ಅರಿಯುವುದು ಮುಖ್ಯವಾಗುತ್ತದೆ.

ಎಲ್ಲ ಚಿಂತನೆಗಳಂತೆ ಸ್ತ್ರೀವಾದಿ ಚಿಂತನೆ ಕೂಡಾ ಜೀವಪರವಾದ ಚಿಂತನೆ. ಬದುಕಿನ ಅರ್ಥವನ್ನು ಹುಡುಕಲು, ನಮ್ಮ-ನಮ್ಮ ಅಸ್ತಿತ್ವಗಳ ಶೋಧದ ಹುಡುಕಾಟ ಮಾಡಲು ಅಂತಿಮವಾಗಿ, ಈ ಬದುಕಿನಿಂದ ನಮಗೆ ಬೇಕಾದ್ದೇನು ಎಂಬ ಪ್ರಶ್ನೆಯ ಶೋಧಕ್ಕೆ ಇದೂ ತೊಡಗುತ್ತದೆ. ಬೇರೆ ಜ್ಞಾನವಲಯಗಳು ತಮ್ಮ ಚಿಂತನಾ ವಿಧಾನದಲ್ಲಿ ಮನುಷ್ಯ, ಮಾನವ, ಪುರುಷೋತ್ತಮನ ಕಲ್ಪನೆಗಳನ್ನು ಸಾರ್ವತ್ರಿಕ ಎಂದು ಹೇಳುತ್ತವೆ. ಮಾನವನಲ್ಲಿ ಹೆಣ್ಣೂ ಸೇರಿರುತ್ತಾಳೆ ಎಂದು ವ್ಯಾಖ್ಯಾನಿಸುತ್ತವೆ. ಆದರೆ ಹೆಣ್ಣು ಮತ್ತು ಅವಳ ಜಗತ್ತು ಅಂತಸ್ಥವಾಗಿಲ್ಲ ಎಂಬುದು ವಿದಿತ ವಿಷಯವೇ. ಜೀವಪರ ಚಿಂತನೆಗಳೆಂದು ಹೊರಡುವ ಚಿಂತನೆಗಳಲ್ಲೂ ಹೆಣ್ಣು ಮುಖ್ಯವಾಗುವುದೇ ಇಲ್ಲ. ಜೈವಿಕ ಚಹರೆಯಿಂದ ಭಿನ್ನಳಾಗಿರುವ

ಹೆಣ್ಣನ್ನು ಮಾನಸಿಕವಾಗಿ, ಸಾಂಸ್ಕೃತಿಕವಾಗಿ ಸಾಮಾಜಿಕವಾಗಿಯೂ ಕೂಡಾ ಭಿನ್ನ ಎಂದು ಗ್ರಹಿಸುತ್ತವೆ. ಧಾರ್ಮಿಕ ತತ್ವಗಳಾದ ಜೈನ, ವೈದಿಕ, ಬೌದ್ಧ, ಸಿಖ್, ಇಸ್ಲಾಂ, ಕ್ರೈಸ್ತ, ಸಾಂಖ್ಯ ಮುಂತಾದ ತತ್ವಗಳು ಲೌಕಿಕದ ಸಂಗತಿಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡದೆ, ಆಧ್ಯಾತ್ಮಿಕ ಸಂಗತಿಗಳಿಗೆ, ಹೆಚ್ಚು ಒತ್ತು ಕೊಡಬೇಕೆಂದು ಹೇಳುತ್ತವೆ. ಬದುಕನ್ನು 'ನೀರ ಮೇಲಣ ಗುಳ್ಳೆ' ಎಂದೂ, 'ಅಲ್ಲಿದೆ ನಮ್ಮ ಮನೆ ಇಲ್ಲಿ ಬಂದೆ ಸುಮ್ಮನೆ' – ಎಂದು ಇಹಕ್ಕಿಂತ ಪರದ ಒಲವನ್ನು ತೋರುತ್ತವೆ. ಹೆಣ್ಣನ್ನು ಅತ್ಯಂತ ತಿರಸ್ಕಾರದಿಂದ ನೋಡುತ್ತಾ ಅವಳನ್ನು ಮಾಯೆಯಾಗಿ, ಕೇಡಾಗಿ, ಭೋಗದ ಸಾಧನವಾಗಿ ಗ್ರಹಿಸುತ್ತವೆ. ಇದೇ ಭಾವವೇ ಎಲ್ಲ ತತ್ವ, ಅವುಗಳನ್ನನುಸರಿಸಿದ ಎಲ್ಲಾ ಸಂಸ್ಥೆಗಳಲ್ಲಿಯೂ ಸಹಜವಾಗಿಯೇ ಇಳಿದು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ರೂಪಿತಗೊಂಡ, ಸಮಾಜ, ಕುಟುಂಬ, ರಾಜ್ಯ, ರಾಷ್ಟ್ರ, ಸಾಹಿತ್ಯ, ಕಲೆ, ಧರ್ಮ, ಆರ್ಥಿಕತೆ, ಕಾನೂನು, ತಂತ್ರಜ್ಞಾನ, ಮನಃಶಾಸ್ತ್ರ, ಚರಿತ್ರೆಗಳಲ್ಲಿ ಪಿತೃಪ್ರಧಾನತೆಯ ಅಂಶವಿದ್ದೇ ಇರುತ್ತದೆ. ಈ ಎಲ್ಲ ಜ್ಞಾನವಲಯಗಳಿಗಿಂತ ಭಿನ್ನವಾದ ನೆಲೆಯಲ್ಲಿ ಮಹಿಳೆಯ ಅಸ್ತಿತ್ವದ ಶೋಧಕ್ಕೆ ಹೊರಡುವ ಸ್ತ್ರೀವಾದ ನಿಜವಾದ ಅರ್ಥದಲ್ಲಿ ಹೆಣ್ಣು ಮತ್ತು ಅವಳ ಜಗತ್ತನ್ನು ಅಂತಸ್ಥ ಮಾಡಿಕೊಂಡು ಅವಳ ಅಸ್ತಿತ್ವದ ಶೋಧಕ್ಕೆ ಇರುವ ಅಡೆತಡೆಗಳನ್ನು ಗಮನಿಸುತ್ತದೆ. ಆ ಮೂಲಕ ಪರ್ಯಾಯ ಮಾರ್ಗಗಳನ್ನು ಹುಡುಕುವ ಪ್ರಯತ್ನಮಾಡುತ್ತದೆ. ಇದರ ಜೊತೆಗೆ ಅನಾರೋಗ್ಯಕರವಾದ ಲಿಂಗ ತಾರತಮ್ಯವನ್ನು ಗುರುತಿಸಿ, ಸಮಾನಮನಸ್ಕ ವೇದಿಕೆಯನ್ನು ನಿರ್ಮಾಣ ಮಾಡುವ ಪ್ರಯತ್ನ ಸ್ತ್ರೀವಾದಿ ತಾತ್ವಿಕತೆಯದು. ಜಗತ್ತಿನಾದ್ಯಂತ ಪಾಶ್ಚಾತ್ಯ ಮತ್ತು ಪೌರಾತ್ಯ ಎಲ್ಲೆಡೆಯಲ್ಲೂ ಅನೇಕ ಮಹಿಳೆಯರು ಚಳುವಳಿ ಮತ್ತು ಚಿಂತನೆಗಳ ಮುಖಾಂತರ ನಿರಂತರವಾಗಿ ಭದ್ರ ಬುನಾದಿಯನ್ನು ಸ್ತ್ರೀವಾದಿ ತಾತ್ವಿಕತೆಗೆ ಒದಗಿಸಿ ಕೊಡುತ್ತಿದ್ದಾರೆ.

ಸ್ತ್ರೀವಾದವು ವರ್ತಮಾನದ ಬದುಕನ್ನು ಮಾನ್ಯ ಮಾಡುತ್ತದೆ. ಬೇರೆಯ ಚಿಂತನೆಗಳು ಗುರುತಿಸದಿರುವ ಅಮುಖ್ಯ ಸಂಗತಿಗಳನ್ನು ಅದು ಮುಖ್ಯವಾಗಿಸಿಕೊಳ್ಳುತ್ತದೆ. ಇಂದಿನ ದಿನದ....... ಏಳು, ತೊಳ, ಬಳಿ, ಕೇರು, ಕೆತ್ತು, ಬಿತ್ತು, ಅಡುಗೆ, ಮಕ್ಕಳು, ಗಂಡ ಇದು ಮಹಿಳೆಯ ಅವರ್ತನ ಬದುಕು. ಅವಳ ಹೊತ್ತು ಮೂಡಿ ಮುಳುಗುವುದೇ ಈ ಕ್ಷುದ್ರ ಸಂಗತಿಗಳೊಡನೆ. ಬದುಕಿನ ಬಹಳ ದೊಡ್ಡ ಸಂಗತಿಗಳಿಗೆ ಮಹತ್ವ ಕೊಡುವ ಚಿಂತನೆಗಳು ಈ ಸಂಗತಿಗಳನ್ನು ಲಕ್ಷಿಸುವುದೇ ಇಲ್ಲ. ಆದರೆ ಸ್ತ್ರೀವಾದ ಮಹಿಳೆಯ ದೈನಂದಿನ ಪ್ರಕ್ರಿಯೆಗಳನ್ನು ಮುಖ್ಯ ಎಂದು ಮನಗಾಣುತ್ತದೆ ಮತ್ತು ಅವಳ ಬದುಕಿನ ಸತ್ಯಗಳು ಅವೇ

ಎಂಬುದನ್ನು ಗುರುತಿಸುತ್ತದೆ. ಇದನ್ನೇ 'ಹೈಲ್ಡ್ ಹೀನ್'ಳು "ಸ್ತ್ರೀವಾದಿ ತತ್ವ ಅನ್ನುವುದು ಅಮೂರ್ತ ವ್ಯಾಖ್ಯೆಗಳಿಂದ ಹುಟ್ಟುವುದು ಸಾಧ್ಯವೇ ಇಲ್ಲ"[೨] ಎನ್ನುತ್ತಾಳೆ.

ಹಾಗೆಯೇ ತನ್ನ ಅನುಭವಗಳಿಗೆ ಹೆಚ್ಚು ಒತ್ತು ಕೊಟ್ಟು ಸಂಗತಿಗಳನ್ನು ಗ್ರಹಿಸುವ ಕ್ರಮ ಮಹಿಳೆಯದು. ಇತರ ಚಿಂತನೆಗಳು ಅಮೂರ್ತ ಸಂಗತಿಗಳಿಗೆ ಆದರ್ಶಗಳಿಗೆ ಹೆಚ್ಚು ಒತ್ತು ಕೊಟ್ಟರೆ, ಮಹಿಳೆ ತನ್ನ ಅನುಭವಕ್ಕೆ ಹೆಚ್ಚು ಒತ್ತು ಕೊಡುತ್ತಾಳೆ. ಇದನ್ನ 'ಹೈಲ್ಡ್ ಹೀನ್' ಎಂಬ ಸ್ತ್ರೀವಾದಿ "ತತ್ವವು ಅನುಭವದಿಂದ ಭರಿತವಾಗಿರಬೇಕು'[೩] ಎಂಬುದು ಸ್ತ್ರೀವಾದಿ ತತ್ವದ ನಿಲುವು ಎನ್ನುತ್ತಾಳೆ.

ಸುಮಾರು ಇನ್ನೂರು ವರ್ಷಗಳಲ್ಲಿ ಹಾಯ್ದು ಬಂದ ಸ್ತ್ರೀವಾದ, ಚಳುವಳಿ-ಚಿಂತನೆ ಎರಡರ ಮೂಲಕವೂ ತನ್ನನ್ನು ಬಲಪಡಿಸಿಕೊಳ್ಳುತ್ತಾ, ಮಹಿಳೆಯ ಅಸ್ತಿತ್ವದ ಶೋಧದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಮಹಿಳೆಗೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನು ಸ್ತ್ರೀಪರ ಚಿಂತನೆಯ ದೃಷ್ಟಿಕೋನದಲ್ಲಿ ಸ್ತ್ರೀವಾದ ಗ್ರಹಿಸುತ್ತದೆ. ಅವಳ ಬದುಕಿನ ಅನೇಕ ಸಂಗತಿಗಳಿಗೆ ಪರಿಹಾರವನ್ನು ಒದಗಿಸಿದೆ.

### ೨.೧.೨ ಸ್ತ್ರೀವಾದಿ ತಾತ್ವಿಕತೆಯ ಮುಖ್ಯ ಪರಿಕಲ್ಪನೆಗಳು

#### ೧. ಸ್ತ್ರೀತ್ವ / ಪುರುಷತ್ವದ ಕಲ್ಪನೆಗಳು

ಸ್ತ್ರೀವಾದಿಗಳಲ್ಲಿ ಹೆಚ್ಚು ಗಂಭೀರವಾಗಿ ಚರ್ಚೆಗೆ ಒಳಪಟ್ಟ ವಿಷಯ ಲಿಂಗಪ್ರಭೇದ. ಇತರ ಚಿಂತನೆಗಳಿಗಿಂತ ಭಿನ್ನವಾದ ನೆಲೆಯಲ್ಲಿ ಈ ಪರಿಕಲ್ಪನೆಗಳನ್ನು ಸ್ತ್ರೀವಾದ ಗ್ರಹಿಸುತ್ತದೆ. ಸ್ತ್ರೀತ್ವ-ಪುರುಷತ್ವವೆಂಬ ಕಲ್ಪನೆಗಳು ಸಾಮಾಜಿಕವಾಗಿ, ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಟ್ಟಲ್ಪಟ್ಟ ಕಲ್ಪನೆಗಳಾಗಿವೆ. ಇದನ್ನೇ ಸ್ತ್ರೀವಾದದ ಮಾತೃಚಿಂತಕಿ 'ಸಿಮೋನ್ ದ ಬೋವಾ' ತನ್ನ ಕೃತಿ 'ದ ಸೆಕೆಂಡ್ ಸೆಕ್ಸ್'ನಲ್ಲಿ "ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು. ಹೆಣ್ಣು ನಿರ್ದಿಷ್ಠ ಸಾಮಾಜಿಕ ಪ್ರಮೇಯಗಳಿಂದ 'ಆಗುತ್ತಾಳೆ' ವಿನಾ ಯಾರೂ ಹೆಣ್ಣಾಗಿಯೇ ಹುಟ್ಟುವುದಿಲ್ಲ" ಎನ್ನುತ್ತಾಳೆ. 'ಕೇಟ್ ಮಿಲೆಟ್' ತನ್ನ ಕೃತಿ 'ಸೆಕ್ಷುವಲ್ ಪಾಲಿಟಿಕ್ಸ್'ನಲ್ಲಿ 'ಸೆಕ್ಸ್' ಎನ್ನುವುದು ಜೈವಿಕವಾಗಿ ನಿರ್ಧರಿತವಾದ ಸಂಗತಿ, 'ಜೆಂಡರ್' ಎನ್ನುವುದು ಮನಶಾಸ್ತ್ರೀಯ ಕಲ್ಪನೆ. ಆದ್ದರಿಂದ ಸ್ತ್ರೀತ್ವ ಎನ್ನುವುದು ಸಾಂಸ್ಕೃತಿಕವಾಗಿ ನಿರ್ಧರಿತವಾದ ಸಂಗತಿ ಎನ್ನುತ್ತಲೇ ಗಂಡು-ಹೆಣ್ಣು ಗುಣಗಳನ್ನು ಪಟ್ಟಿಮಾಡಿ ಗುರುತಿಸುತ್ತಾಳೆ. ಅವನ್ನು ಕುರಿತು ಹೇಳುತ್ತಾ "Aggression, intelligence,

force and effiency in the male; passivity, ignorance, docility, virtue and ineffectivites in the female"[೮] ಎಂದು ಗಂಡು ಹೆಣ್ಣಿನ ಆರೋಪಿತ ಗುಣಗಳನ್ನು ಗುರುತಿಸುತ್ತಾಳೆ.

ಹೀಗೆ ತನ್ನ ತಿಳಿವಿನ ನೆಲೆಯಲ್ಲಿಯೇ ಹೆಣ್ಣನ್ನು ಗ್ರಹಿಸಿಕೊಂಡಿರುವ ಪುರುಷಲೋಕ ಅವಳಿಗೆ ನಿಗದಿತ ಪಾತ್ರ ನಿರ್ವಹಣೆಯನ್ನು ಆರೋಪಿಸುವುದರಿಂದ, ಸಾಮಾಜಿಕವಾಗಿ ತನಗೆ ದತ್ತವಾದ ಸ್ಥಿರ ಮಾದರಿ ಪಾತ್ರಗಳ ನಿರ್ವಹಣೆಯನ್ನು ಆಕೆ ಆದರ್ಶ ಪತ್ನಿಯಾಗಿ, ವಾತ್ಸಲ್ಯಮಯಿ ತಾಯಿಯಾಗಿ, ವಿಧೇಯ ಮಗಳಾಗಿ, ಸಹೃದಯ ಗೆಳತಿಯಾಗಿ ನಿರ್ವಹಿಸಬೇಕಾಗುತ್ತದೆ. ಅಧಿಕಾರ ನೆಲೆಯಿಂದ ಸೂಚಿತವಾಗಿರುವ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಗುಣಗಳನ್ನು ಅಧಿಕಾರ ರಹಿತಳಾಗಿರುವ ಹೆಣ್ಣು ಒಪ್ಪಿಕೊಳ್ಳಬೇಕಾದ ಅನಿವಾರ್ಯತೆಯಿಂದ ಒಪ್ಪಿಕೊಂಡಿದ್ದಳು. ಪಿತೃಪ್ರಧಾನ ಚಿಂತನೆಯಲ್ಲಿ; ಪರಾವಲಂಬಿತ ಸ್ಥಿತಿ, ಕೋಮಲತೆ, ವಿಧೇಯತೆ, ಭಯ ಭೀರುತನ, ಕಷ್ಟ ಸಹಿಷ್ಣುತೆ, ತಾಳ್ಮೆ, ಸಹನೆ, ಕ್ಷಮೆ, ತಾಯ್ತನ, ಸಂಗೋಪನ, ಭಾವುಕತೆ, ಸೃಜನಶೀಲತೆ ಮುಂತಾದ ಗುಣಗಳನ್ನು ಹೆಣ್ಣಿನ ಇತ್ಯಾತ್ಮಕ ಗುಣಗಳೆಂದು ಗುರುತಿಸುತ್ತದೆ. ಮುಂದುವರೆಯುತ್ತಾ ಭೋಗಲಾಲಸೆ, ಅವಿಧೆಯತೆ, ಅಪ್ರಾಮಾಣಿಕತೆ, ಮೂರ್ಖತೆ, ಚಂಚಲತೆ, ವಂಚನೆ, ಅಸೂಯೆ, ಸೇಡು, ಅವೈಚಾರಿಕತೆ ಮುಂತಾದ ಗುಣಗಳನ್ನು ಹೆಣ್ಣಿನ ನೇತ್ಯಾತ್ಮಕ ಗುಣಗಳೆಂದು ನಿರ್ಧರಿಸುತ್ತದೆ. ಗಂಡು-ಹೆಣ್ಣು ಯಾರಲ್ಲಾದರೂ ಇರಬಹುದಾದ ಈ ಗುಣಗಳನ್ನು ಹೆಣ್ಣಿಗೇ ಆರೋಪಿಸಿರುವದರ ಹಿನ್ನೆಲೆಯನ್ನು ಸ್ತ್ರೀವಾದಿಗಳು ಪ್ರಶ್ನಿಸುತ್ತಾರೆ. ಈ ಮಾದರಿಯ ಆರೋಪಿತ ಗುಣಗಳು ವ್ಯಕ್ತಿತ್ವದ ಬೆಳವಣಿಗೆಗೆ ಅಡ್ಡಬರುವುದರಿಂದ ಸಹಜವಾಗಿ ವಿಕಸನ ಹೊಂದಬೇಕಾದ ಮಹಿಳೆಯ ಬದುಕು ಮುರುಟಿಹೋಗುತ್ತದೆ. ಹೆಣ್ಣಿನ ಈ ಸ್ಥಿತಿ ಜೊತೆಗಿರುವ ಗಂಡಿನ ಬಾಳಿಗೂ ಅಪೂರ್ಣತೆಯನ್ನು ತರುತ್ತದೆ. ಸಮಾನಚಿಂತನೆಯ ಮೂಲಕ ಹೆಣ್ಣು-ಗಂಡುಗಳು ತಮ್ಮತನವನ್ನು ಅರಳಿಸಿಕೊಳ್ಳಬೇಕೆಂಬುದನ್ನು ಸ್ತ್ರೀವಾದಿ ಚಿಂತನೆ ಹೇಳುತ್ತದೆ.

ಜೈವಿಕ ಸ್ತ್ರೀತ್ವ, ಸಾಮಾಜಿಕ ಸ್ತ್ರೀತ್ವಗಳಿಂದ ಹೆಣ್ಣು ರೂಪಿತಗೊಳ್ಳುವ ಸಂದರ್ಭದಲ್ಲಿ ಡಿ.ಆರ್. ನಾಗರಾಜರು ಎತ್ತುವ 'ಸ್ತ್ರೀತ್ವ ಎನ್ನುವುದು ಜೈವಿಕ ಸತ್ಯವೊ' ಅಥವಾ 'ತಿಳಿವಿನ ಸತ್ಯವೊ' ಎಂಬ ಪ್ರಶ್ನೆಗೆ ಉತ್ತರಿಸಿಕೊಳ್ಳುವುದು ಮುಖ್ಯವಾಗುತ್ತದೆ. ಸ್ತ್ರೀತ್ವ ಎನ್ನುವುದು ಕೇವಲ ಜೈವಿಕ ಸತ್ಯ ಅದೇ ಆತ್ಯಂತಿಕ, ನಿರ್ಣಾಯಕ ಎಂದರೆ ಹೆಣ್ತನ ಎನ್ನುವುದು

ಶಾರೀರಿಕ ಸತ್ಯವಾಗಿಬಿಡುತ್ತದೆ. ಅಲ್ಲದೆ ದೇಹದಾಚೆ ಒದಗಿಬರುವ ಸಂಗತಿಗಳಲ್ಲಿ ಮಹಿಳೆ ಇರುವುದೇ ಇಲ್ಲ. ಇನ್ನು ಇದನ್ನು ಕೇವಲ ತಿಳವಿನ ಸತ್ಯ ಎಂದು ಗ್ರಹಿಸಿಕೊಂಡರೂ ಸ್ತ್ರೀದೇಹಕ್ಕೆ ಅನ್ವಯವಾಗುವ ಕೆಲವು ಅನುಭವಗಳು ಕಾಣೆಯಾಗಿ ಬಿಡುತ್ತವೆ. ಆದ್ದರಿಂದ ಸ್ತ್ರೀತ್ವ ಎನ್ನುವುದನ್ನು ಜೈವಿಕ ಮತ್ತು ಮನಃಶಾಸ್ತ್ರಿಯ ತಿಳುವಿನ ಸತ್ಯವಾಗಿಯೇ ಒಪ್ಪಿಕೊಳ್ಳಬೇಕಾಗುತ್ತದೆ. ಆಗ ಮಾತ್ರ ಸ್ತ್ರೀ ಸಂವೇದನೆ ಎನ್ನುವುದು ತನ್ನ ಸತ್ಯದ ಅನುಭವದೊಂದಿಗೆ ಒಡಮೂಡಲು ಸಾಧ್ಯ ಎಂಬುದನ್ನು ಸ್ತ್ರೀವಾದಿಗಳು ಹೇಳುತ್ತಾರೆ.

ಕೆಲವು ಸಾಂಸ್ಕೃತಿಕ ಸ್ತ್ರೀವಾದಿಗಳು ನೈಸರ್ಗಿಕವಾಗಿ ಅವಳ ದೌರ್ಬಲ್ಯಗಳು ಎಂದು ಆರೋಪಿಸಲ್ಪಟ್ಟ ಗುಣಲಕ್ಷಣಗಳನ್ನೇ ಹೆಣ್ಣಿನ ವಿಶೇಷ ಶಕ್ತಿಗಳೆಂದು ನಂಬುತ್ತಾರೆ. 'ಆಡ್ರಿಯನ್ ರಿಚ್', 'ಮೇರಿ ಡಾಲಿ' ಹೆಣ್ಣಿನ ದೇಹ ಅವಳ ಆಸ್ತಿಯೆಂದು ಗುರುತಿಸುತ್ತಾರೆ. 'ಮೇರಿ ಡಾಲಿ' ಮುಂದುವರೆದು "ಹೆಣ್ಣಿನ ಬಿಡುಗಡೆಯೆಂದರೆ ನಿಜವಾದ ಸ್ತ್ರೀತ್ವದ ನೆಲೆಯಲ್ಲಿ ತನ್ನನ್ನು ತಾನು ವ್ಯಾಖ್ಯಾನಿಸಿಕೊಳ್ಳುವುದಾಗಿದೆ"[೫] ಎನ್ನುತ್ತಾಳೆ.

ಫ್ರೆಂಚ್ ಸ್ತ್ರೀವಾದಿಗಳು ಇಂಥ ವಾದವನ್ನು ತಿರಸ್ಕರಿಸಿ, ಪುರುಷ ಕಟ್ಟಿಕೊಟ್ಟ ಭಾವನಾತ್ಮಕ ನಿಲುವುಗಳನ್ನು ಒಪ್ಪಿಕೊಂಡರೆ, ಅಂತಿಮವಾಗಿ ಮತ್ತೆ ಅವರ ನಿಲುವುಗಳನ್ನೇ ಸಮ್ಮತಿಸಿದಂತಾಗುತ್ತದೆ ಎನ್ನುವ ವಾದವನ್ನು ಸಮರ್ಥವಾಗಿ ಮಂಡಿಸುತ್ತಾರೆ.

## ೨. ಸ್ತ್ರೀ-ಪುರುಷ ವೈರುಧ್ಯದ ವ್ಯಾಖ್ಯಾನಗಳು

ಪಿತೃಪ್ರಧಾನ ಸಮಾಜದಲ್ಲಿನ ಲಿಂಗ ಪರಿಕಲ್ಪನೆಗಳು ದ್ವಿಮುಖ ಧೋರಣೆಗಳನ್ನು ಹೇಳುತ್ತವೆ. ಸಂಸ್ಕೃತಿ -ಪ್ರಕೃತಿ, ತರ್ಕ-ವಿಚಾರಹೀನತೆ, ಬುದ್ಧಿ-ಭಾವ, ಖಾಸಗಿ-ಸಾರ್ವಜನಿಕ ಮುಂತಾದ ಪದಗಳು ಕೇವಲ ಪದಗಳಾಗಿ ಪರಿಗಣಿತವಾಗುವುದಿಲ್ಲ. ಮೊದಲನೆಯ ಗುಂಪಿನವು ಗಂಡಿಗೆ ಅನ್ವಯಿಸುತ್ತವೆಂದೂ, ಎರಡನೆಯ ಗುಂಪಿನವು ಹೆಣ್ಣಿಗೆ ಅನ್ವಯಿಸುತ್ತವೆ ಎಂದು ಹೇಳಿ ಹೆಣ್ಣಿನ ನೆಲೆಯನ್ನು ಕೀಳು, ಅಧೀನ ಎಂದು ಗುರುತಿಸಿದ್ದನ್ನು ಸ್ತ್ರೀವಾದಿಗಳು ತೀವ್ರವಾಗಿ ಪ್ರಶ್ನಿಸಿದರು. ಪಾಶ್ಚಾತ್ಯ ಸ್ತ್ರೀವಾದಿಗಳು ತೀವ್ರವಾಗಿ ತೊಡಗಿಸಿಕೊಂಡು ಕೇಳಿದ ಪ್ರಶ್ನೆಗಳು ಭಾರತೀಯ ಸಂದರ್ಭಕ್ಕೂ ಅನ್ವಯಿಸುತ್ತದೆ. ಮಹಿಳೆಗೆ ಪ್ರಕೃತಿಯ ಗುಣವನ್ನು ಆರೋಪಿಸಿ. ಮಕ್ಕಳನ್ನು ಹೊರುವ. ಹೆರುವ. ಸಾಕುವ. ಸಂಗೋಪನ ಕ್ರಿಯೆಗಳನ್ನು ಅವು ಅವಳವೇ ಎಂಬಂತೆ ಆರೋಪಿಸಿದ್ದನ್ನು ಪ್ರಶ್ನಿಸಿದರು. ಇದನ್ನೆ ತೀವ್ರವಾಗಿ ತನ್ನ ಕೃತಿ 'ಸೆಕ್ಷುವಲ್ ಪಾಲಿಟಿಕ್ಸ್'ನಲ್ಲಿ

ಪ್ರಶ್ನಿಸುವ 'ಕೇಟ್ ಮೀಲೆಟ್' ಈ ಕಾರ್ಯಗಳನ್ನು ಲಿಂಗ ನಿರ್ಧರಿತ ಕೆಲಸಗಳು ಎಂದು ಗುರುತಿಸಿ, ಆಕೆಯ ಸ್ಥಿತಿ ಪ್ರಾಣಿ ಸದೃಶ್ಯವಾದದ್ದು ಎಂದು ಹೇಳುತ್ತಾಳೆ. ಪರಿಸರ ಸ್ತ್ರೀವಾದಿ ಚಿಂತನೆ ಇದರ ಚರ್ಚೆ ಮಾಡುತ್ತದೆ. "ಹೆಣ್ಣಿನ ಭಾವುಕತೆ, ಅವೈಚಾರಿಕತೆ, ಅತಾರ್ಕಿಕತೆಯ ಗುಣಗಳು ಮೂಲಭೂತವಾಗಿ ಪ್ರಾಣಿಜಗತ್ತಿಗೆ ಸಂಬಂಧಪಟ್ಟಿದ್ದು, ಪ್ರಾಣಿಗಳು ರಾಗ-ದ್ವೇಷಗಳ ನೆಲೆಯಲ್ಲಿ ಹೊಟ್ಟೆಹೊರೆದುಕೊಳ್ಳುತ್ತ ಗರ್ಭಧಾರಣೆ, ಸಂತಾನೋತ್ಪತ್ತಿ, ಸಂಗೋಪನೆಗಳಲ್ಲೇ ನಿರತವಾಗುತ್ತವೆ. ಅವಕ್ಕೆ ಕೇವಲ ಹಸಿವು, ಮೈಥುನ, ಸಂತಾನೋತ್ಪತ್ತಿ – ಇವೇ ಬದುಕಿನ ಗುರಿಯಾಗುತ್ತವೆ. ಅವು ಇದಕ್ಕಿಂತಲೂ ಹೆಚ್ಚಿನದನ್ನು ಸಾಧಿಸಲು ಮುಂದಾಗುವುದಿಲ್ಲ".[೭] ಏಕೆಂದರೆ, ಅವಕ್ಕೆ ಬುದ್ಧಿಶೂನ್ಯವಾಗಿರುತ್ತವೆ ಎಂದು ಗುರುತಿಸುತ್ತಾರೆ. ಹೆಣ್ಣಿನ ಕೆಲಸವು ಇಷ್ಟೇ ಎಂದು ನಿರ್ಧರಿತವಾದ ಕಾರಣದಿಂದ 'ಕ್ಯಾಂಬ'ನು ಹೆಣ್ಣನ್ನು ಪ್ರಾಣಿಗಳಿಗೆ ಹೋಲಿಸುತ್ತಾನೆ. ಸ್ವತಂತ್ರ ಅಭಿಪ್ರಾಯ ನಿರ್ಮಾಣ, ಉತ್ತಮ ಭಾಷೆ, ಅಭಿವ್ಯಕ್ತಿ ಧೈರ್ಯ, ಸ್ವಾವಲಂಬಿತನ, ಇವುಗಳಿಲ್ಲದ ಕಾರಣದಿಂದ ಹೆಣ್ಣನ್ನು ಪ್ರಾಣಿಗಳಿಗೆ ಹೋಲಿಸುತ್ತಾನೆ. 'ಕ್ಯಾಂಬ'ನ ಈ ಚಿಂತನೆಗಳು ಪರಿಸರ ಸ್ತ್ರೀವಾದಿಗಳ ತೀವ್ರ ಆಕ್ಷೇಪಣೆಗೆ ಒಳಗಾಯಿತು.

ಪುರುಷಶಾಹಿ ನೆಲೆಯಲ್ಲಿ ನಿಲ್ಲುವ ಆಧುನಿಕತೆ ಮತ್ತು ವಿಜ್ಞಾನಗಳು, ಪ್ರಕೃತಿಯನ್ನು ಸ್ತ್ರೀಯಾಗಿ, ತಾಯಾಗಿ ಕಂಡು, ಅವಳ ನಿಜ ವ್ಯಕ್ತಿತ್ವವನ್ನು ಮರೆಮಾಚಿ ಬಿಡುತ್ತವೆ. ಇದರಿಂದಾಗಿ ಸಮಾಜದಲ್ಲಿ ಒಂದು ನಿರ್ದಿಷ್ಟ ಪಾತ್ರ ನಿರ್ವಹಣೆ (ತಾಯ್ತನ) ಸಹಜ ಎಂದೆನಿಸಿಕೊಂಡಿತು. ಅವಳ ಬೌದ್ಧಿಕತೆಗೆ ಅವಕಾಶ ಮತ್ತು ಬೆಲೆಯನ್ನು ಕೊಡದೆ ಪ್ರಾಣಿ ಸದೃಶ್ಯವಾದ ದೈಹಿಕ ಶ್ರಮಗಳನ್ನು ಅವಳಿಗೆ ನೀಡಲಾಯಿತು. ಮುಂದೆ ಸ್ತ್ರೀಯರು ಎಲ್ಲ ರಂಗಗಳಲ್ಲಿಯೂ ಪ್ರವೇಶಮಾಡಿ ಉದ್ಯೋಗಗಳನ್ನು ಕೈಗೊಂಡಾಗಲೂ, ಗೃಹಕೃತ್ಯಗಳನ್ನೇ ಮುಖ್ಯ ಎಂದು ಹೇಳಲಾಯಿತು. ಆರ್ಥಿಕ ಸೌಲಭ್ಯವನ್ನು ಕೊಡ ಮಾಡುವ ಉದ್ಯೋಗಗಳಿಗಿಂತ ಸಂತಾನೋತ್ಪತ್ತಿ ಕ್ರಿಯೆಯೇ ಹೆಚ್ಚು ಮುಖ್ಯ ಎಂದು ಹೇಳಿದವು. ಅವಳನ್ನು ಗೃಹದಲ್ಲಿಟ್ಟು ಅಲ್ಲಿ ನಡೆಯುವ ಶೋಷಣೆಗಳನ್ನು ಖಾಸಗಿ ಎಂದು ಪರಿಗಣಿಸಲಾದ ಬಗ್ಗೆ ಸ್ತ್ರೀವಾದಿಗಳು ತೀವ್ರವಾದ ಪ್ರತಿರೋಧವನ್ನು ಒಡ್ಡಿದರು. ಗಟ್ಟಿಯಾದ ತಾತ್ವಿಕ ಬುನಾದಿ ಮತ್ತು ತೀವ್ರವಾದ ಚಳುವಳಿ ಎರಡನ್ನು ಮೈಗೂಡಿಸಿಕೊಂಡ ಸ್ತ್ರೀವಾದಿ ಚಿಂತನೆ ನಿಂತಿರುವುದೇ ವಾಸ್ತವದ ನೆಲೆಗಟ್ಟಿನ ಮೇಲೆ.

## ೩. ಸ್ತ್ರೀ ಪ್ರತಿಭೆಯ ಅನನ್ಯತೆ

ಸೃಜನಶೀಲತೆ ಎಂಬುದು ಹೊಸತನ್ನು ಹುಟ್ಟು ಹಾಕುತ್ತದೆ. ವಿಶ್ವದ ಒಂದು ಭಾಗವಾಗಿ ಹೊರಬರುವ ಸ್ತ್ರೀಯ ಪ್ರತಿಭೆಯ ಆಳದ ಬೇರುಗಳಲ್ಲೂ ಪಿತೃಪ್ರಧಾನ ನೆಲೆಯ ಚಿಂತನೆಗಳು ಇಳಿದೇಬಿಟ್ಟಿರುತ್ತವೆ. ಪ್ರತಿ ವ್ಯಕ್ತಿಯ ಸೃಜನಶೀಲತೆ ಅವಳ/ನ ಸಾಮಾಜಿಕತೆಯನ್ನು ಒಳಗೊಂಡೇ ಇರುವ ಸಂದರ್ಭ ವಾಸ್ತವದ್ದು. ಮಹಿಳೆಯ ಪ್ರತಿಭೆ ಸಾಮಾಜಿಕ ಒತ್ತಡಗಳಿಗೆ ಎರಡು ಮಾದರಿಗಳಲ್ಲಿ ತನ್ನನ್ನು ಪ್ರಕಟಪಡಿಸಿಕೊಳ್ಳುತ್ತದೆ ಎಂಬುದನ್ನು ಡಿ.ಆರ್. ನಾಗರಾಜರು ತಮ್ಮ ಲೇಖನದಲ್ಲಿ ಹೇಳುತ್ತಾರೆ. ಅವುಗಳನ್ನು ಗಾರ್ಗಿ ಮತ್ತು ಕಾತ್ಯಾಯಿನಿಯ ಮಾದರಿ ಎಂದು ಗುರುತಿಸುತ್ತಾರೆ.

ಗಾರ್ಗಿ ಮಾದರಿ: ಇದರ ಪ್ರಖರ ವೈಚಾರಿಕತೆ ತನ್ನನ್ನು ತುಳಿಯುತ್ತಿರುವ, ಅವಮಾನಕ್ಕೀಡು ಮಾಡಿರುವ ಎಲ್ಲ ಅಧಿಕಾರಗಳನ್ನೂ ಉಗ್ರವಾಗಿ ಪ್ರತಿಭಟಿಸುತ್ತದೆ. ವ್ಯಂಗ್ಯವಾಗಿ ಅದಕ್ಕೆ ಛೀಮಾರಿಹಾಕುತ್ತದೆ. ವಿಷಾದದಿಂದ ನಿಟ್ಟುಸಿರಿಡುತ್ತದೆ. ತುಳಿತಕ್ಕೆ ಒಳಗಾದ ತನ್ನ ಸೋದರಿಯರ ಬಗೆಗೆ ಚಿಂತಿಸುತ್ತದೆ. ನಮ್ಮ ಕನ್ನಡದಲ್ಲಿ ಇತ್ತೀಚಿನ ಮಹಿಳಾ ಕಾವ್ಯ, ಒಂದಿಷ್ಟು ಕಥನಗಳಲ್ಲಿ ಈ ಮಾದರಿಗಳನ್ನು ಗುರುತಿಸಬಹುದು.

ಕಾತ್ಯಾಯಿನಿಯ ಮಾದರಿ : ಇದನ್ನು ಡಿ.ಆರ್. ನಾಗರಾಜರವರು ಗೃಹವಾದಿನಿ ಮಾದರಿ ಎಂದು ಗುರುತಿಸುತ್ತಾರೆ. ಪುರುಷ ಪ್ರಧಾನ ಮೌಲ್ಯಗಳನ್ನು ಒಪ್ಪಿಕೊಂಡು, ತನ್ಮಯತೆಯಿಂದ ತನ್ನ ಕಾರ್ಯವನ್ನು ನಿರ್ವಹಿಸುತ್ತಾಳೆ. ಈ ಕ್ರಮ ಮಂಜುಗತ್ತಿಯ ತೆರನಾದ್ದು. ಮೇಲ್ನೋಟಕ್ಕೆ ಪ್ರಧಾನಧಾರೆಯ ವಿಚಾರಗಳನ್ನು ಒಪ್ಪಿದಂತೆ ಕಂಡರೂ ಆಳದಲ್ಲಿ ವಿದ್ರೋಹದ ಸೂಚನೆಗಳಿರುತ್ತವೆ. ಸಾಂಸ್ಕೃತಿಕ ಸ್ತ್ರೀವಾದಿಗಳು ಮಹಿಳೆಯ ಪ್ರತಿಭೆಯನ್ನು ಕುರಿತಂತೆ ಚರ್ಚೆ ಮಾಡುತ್ತಾರೆ. 'ಜೂಲಿಯಾ ಕ್ರಿಸ್ಟೀವಾ' ಮತ್ತು 'ಹೆಲನ್ ಸಿಕ್ಸೂ' ಈ ಕುರಿತು ಮಾತನಾಡುತ್ತಾರೆ. ಸಿಕ್ಸೂ ತನ್ನ ನಿಲುವನ್ನು ಹೀಗೆ ಮಂಡಿಸುತ್ತಾಳೆ. "ಹೇಗೆ ಒಂದು ಸುಪ್ತಪ್ರಜ್ಞೆ ಇನ್ನೊಂದನ್ನು ಹೋಲುತ್ತದೆ ಎಂದು ಹೇಳಲಾಗುವುದಿಲ್ಲವೋ ಹಾಗೆಯೇ ಏಕೀಕೃತವಾದ, ಏಕರೂಪಿಯಾದ, ವರ್ಗೀಕೃತವಾದ ಸ್ತ್ರೀ ಲೈಂಗಿಕತೆ ಇದೆ ಎಂದು ಹೇಳಲಾಗುವುದಿಲ್ಲ. ಮಹಿಳೆಯ ಪ್ರತಿಭೆ ಎಂದೂ ಬತ್ತದ್ದು. ಅದು ಸಂಗೀತದ ಹಾಗೆ, ಶಿಲ್ಪ, ಸಾಹಿತ್ಯಗಳ ಹಾಗೇ ಅದರ ಕಲ್ಪಕತೆ ಊಹಾತೀತ".[೭]

ಅಧಿಕಾರಶಾಹಿ ವ್ಯವಸ್ಥೆಯ ಒಳಗಿದ್ದು, ಅದನ್ನು ಆರಾಧಿಸುತ್ತಲೇ ವ್ಯವಸ್ಥೆಯ ಚೌಕಟ್ಟನ್ನು, ಛಿದ್ರಗೊಳಸುತ್ತಲೋ ಅಥವಾ ವ್ಯವಸ್ಥೆಯ ಆಳದಲ್ಲಿಯೇ ಗುಹೆಗಳನ್ನು ನಿರ್ಮಾಣ ಮಾಡಿಕೊಳ್ಳುವ ಸಾಮರ್ಥ್ಯ ಸ್ತ್ರೀ ಬರಹಕ್ಕಿದೆ, "ಈ ರೀತಿಯ ಬರಹಗಳು ಕಾವ್ಯಾತ್ಮಕವೂ ವಾದವಿವಾದಾತ್ಮಕವೂ ಅಪ್ರತ್ಯಕ್ಷ ಸೂಚನೆಗಳುಳ್ಳವೂ, ಆದರ್ಶಾತ್ಮಕವೂ ಆಗಿವೆ. ಉದ್ದೇಶಪೂರ್ವಕವಾಗಿಯೇ ಹಳೆಯ ಆಲೋಚನಾ ರೀತಿಯ ನೆಲೆಯಿಂದ ಓದುಗರನ್ನು ಈ ಬರಹಗಳು ಕದಲಿಸುತ್ತವೆ".[೮] ಇದನ್ನೇ ಸೂಕ್ಷ್ಮ ಪ್ರತಿಭಟನೆ ಎನ್ನಬಹುದು. ಸೌಂದರ್ಯಾತ್ಮಕ ಪ್ರತಿರೋಧ ಎಂದು ಸ್ತ್ರೀವಾದಿಗಳು ಗುರುತಿಸಿ, ಸ್ತ್ರೀಯ ನೇತ್ಯಾತ್ಮಕ ಗುಣಗಳನ್ನೇ ಕಾವ್ಯಾತ್ಮಕ ಸಾಮರ್ಥವೆಂದು ಹೇಳುತ್ತಾರೆ.

**೪. ಭಿನ್ನ ಕ್ರಮಗಳ / ಮಾನದಂಡಗಳ ಚಿಂತನೆ**

ಸಾಹಿತ್ಯ ಲಿಂಗಬೇಧದಿಂದ ಹೊರತಾಗುಳಿದಿಲ್ಲ ಎಂಬ ಅಂಶವನ್ನು ಸ್ತ್ರೀವಾದಿಗಳು ಮನಗಂಡಿದ್ದರು. ಪ್ರಧಾನಧಾರೆಯ ವಿಮರ್ಶೆ ಸಾಹಿತ್ಯ ಚಟುವಟಿಕೆಗಳಾದ ಅಧ್ಯಯನ, ಸಂಶೋಧನೆ, ಓದು, ವಿಮರ್ಶೆ ಎಲ್ಲವನ್ನು ತನ್ನ ಮೂಗಿನ ನೇರದಲ್ಲಿ ಅರ್ಥೈಸುವ ಸಂಗತಿಯನ್ನು ಸ್ತ್ರೀವಾದ ನಿರಾಕರಿಸಿತು. "ಪ್ರಧಾನಧಾರೆಯ ವಿಮರ್ಶೆ ಕಲೆಯಲ್ಲಿ ವಸ್ತು, ಶೈಲಿ, ಚರಿತ್ರೆಯ ಕಲ್ಪನೆ, ಜೀವನ ದರ್ಶನ, ತಾರ್ಕಿಕ ಬೆಳವಣಿಗೆ.......... ಇತ್ಯಾದಿ ದೊಡ್ಡ ಸಂಗತಿಗಳನ್ನು ಅಪೇಕ್ಷಿಸುತ್ತದೆ. ಈ ಎಲ್ಲ ಮಾನದಂಡಗಳು ಮಹಿಳೆಯ ಅಭಿವ್ಯಕ್ತಿ ಸೂಕ್ಷ್ಮಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಸೋಲುತ್ತವೆ. ಹಾಗೆಂದೇ ಸ್ತ್ರೀವಾದಿ ತಾತ್ವಿಕತೆಯು ಅನುಭವದ ಸಾಂದ್ರತೆ, ಅಭಿವ್ಯಕ್ತಿಯ ತೀವ್ರತೆ, ವಿರುದ್ಧ ಓದಿನ ಕ್ರಮ ಮುಂತಾದ ತೆರೆದ ರಚನೆಯ ಮಾನದಂಡಗಳನ್ನು ಬಳಸಿ ಕಲೆಯ ಮೌಲ್ಯಮಾಪನ ಮಾಡುತ್ತದೆ".[೯]

ಸ್ತ್ರೀಕೇಂದ್ರಿತ ದೃಷ್ಟಿಕೋನದ ಸಾಹಿತ್ಯಾಧ್ಯಯನ ಮತ್ತು ವಿಮರ್ಶೆಗಳ ಲಕ್ಷಣಗಳನ್ನು ಹೆಚ್ಚು ಸಮಂಜಸವಾಗಿ ರೂಪಿಸಿದ ಪ್ರಮುಖ ಸ್ತ್ರೀವಾದಿ ಎಲೇನ್ ಶೋ ಆಲ್ಟರ್, ಮಹಿಳಾ ಸಾಹಿತ್ಯ ಪರಂಪರೆಯನ್ನು ಗುರುತಿಸುವ ಅಗತ್ಯವನ್ನು ಮನಗಾಣಿಸಿದಳು. "ಏಕೆಂದರೆ ಮಹಿಳಾ ಸಾಹಿತ್ಯದಲ್ಲಿ ಕೇಂದ್ರವಾಗುವ ವಸ್ತುಗಳು ಬಳಕೆಗೊಳ್ಳುವ ಪ್ರತಿಮೆ, ಒಟ್ಟಾರೆಯ ಅದರ ಗುಣ-ಲಕ್ಷಣಗಳ ಹಿನ್ನಲೆಗೆ ವಿಶಿಷ್ಟ ಮಹಿಳಾ ಕಾರಣಗಳು, ಕಾಳಜಿಗಳೂ ಇವೆ"[೧೦] ಎನ್ನುವ ಎಚ್.ಎಸ್.ಶ್ರೀಮತಿಯವರು ಮಹಿಳೆಯ ಸಾಹಿತ್ಯವನ್ನು ಭಿನ್ನವಾಗಿ ಗ್ರಹಿಸಬೇಕಾಗಿರುವುದನ್ನು ಹೇಳುತ್ತಾರೆ.

## ೫. ಹೊಸ ಓದಿನ ಕ್ರಮ

ಮೇರಿ ವೂಲ್‌ಸ್ಟನ್ ಕ್ರಾಫ್ಟ್ ತನ್ನ 'ಎ ವಿಂಡಿಕೇಷನ್ ಆಫ್ ದಿ ರೈಟ್ಸ್ ಆಫ್ ವುಮೆನ್' ಕೃತಿಯಲ್ಲಿ ಪಠ್ಯದ ವಿಮೋಚನೆಯ ಪ್ರಶ್ನೆಗಳನ್ನು ಹಾಕುತ್ತಾ ಸ್ತ್ರೀವಾದಿ ತಾತ್ವಿಕತೆಯನ್ನು ಬೆಳೆಸುತ್ತಾಳೆ. ಆಕೆ ಸ್ತ್ರೀಯ ವಿಮೋಚನೆಯನ್ನು ಪಠ್ಯದ ವಿಮೋಚನೆಯ ಜೊತೆಗೆ ಸಮೀಕರಿಸಿ ಮಾತನಾಡುತ್ತಾಳೆ. ಯಾವ ಓದೂ ತನ್ನಷ್ಟಕ್ಕೆ ತಾನೇ ಮುಗ್ಧ ಓದಲ್ಲ ಎಂಬ ಅರಿವು ಸ್ತ್ರೀವಾದದ್ದು. ಓದುವ ಹಿನ್ನಲೆಯಲ್ಲಿನ ಭಾಷಿಕ ರಾಜಕಾರಣವನ್ನು ಕುರಿತು ಮೇರಿ ತನ್ನ ಚಿಂತನೆಯನ್ನು ಮಂಡಿಸುತ್ತಾಳೆ. ಒಂದು ಪಠ್ಯ ಓದುವಾಗ ಓದುಗರ ಕಾಲ, ದೇಶ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಆರ್ಥವನ್ನು ಬಿಟ್ಟು ಕೊಡುತ್ತಾ ಹೋಗುತ್ತದೆ. ಪಠ್ಯವನ್ನು ಏಕಾರ್ಥದ ಪಠ್ಯವಾಗಿ ಓದದೆ ಅದರ ಹಿನ್ನೆಲೆಯ ಚಾರಿತ್ರಿಕ, ಸಾಂಸ್ಕೃತಿಕ ಅರ್ಥಗಳನ್ನು ಸ್ತ್ರೀವಾದಿ ಓದು ಗ್ರಹಿಸುವುದರಲ್ಲಿ ಪಠ್ಯದ ಅರ್ಥ ಹಿಗ್ಗುತ್ತಾ ಹೋಗುವುದರೊಂದಿಗೆ ಹೊಸ ಅರ್ಥ ಸಾಧ್ಯತೆಗಳು ಸಾಧ್ಯ.

ಲಿಂಗಾಧಾರಿತ ಅಧ್ಯಯನದ ಪರಿಕಲ್ಪನೆಯಲ್ಲಿ ಮೂರು ಅಂಶಗಳು ಸಮಾವೇಶಗೊಂಡಿವೆ ಎನ್ನುತ್ತಾರೆ ಆಶ್ವಿನಿ ಧೋಂಗಡೆ.

೧) "ಸ್ತ್ರೀಯು ಅಧ್ಯಯನ ಮಾಡುವಾಗ್ಗೆ ಸ್ತ್ರೀ ಸಂಬಂಧಿ ಅಂಶಗಳಾದ ತನ್ನ ಶರೀರಾನುಭವಗಳನ್ನೇ (ಉದಾ: ಮಾಸಿಕ ಸರದಿ, ಪ್ರಸೂತಿ ಮುಂತಾದವು) ಅಧ್ಯಯನ ಮಾಡುತ್ತಿರುತ್ತಾಳೆ.

೨) ಸ್ತ್ರೀ ಮತ್ತು ಅವಳ ಸ್ತ್ರೀತ್ವದಲ್ಲಿ ಏಕರೂಪತೆ ಇದೆ. ಇಲ್ಲಿ ಸ್ತ್ರೀತ್ವ ಎಂದರೆ ಸ್ತ್ರೀಯು ತಾನೇ ತನ್ನ ಸ್ವಂತಕ್ಕಾಗಿ ನಿರ್ಮಿಸಿಕೊಂಡ ಪ್ರತಿಕೃತಿ.

೩) ಸ್ತ್ರೀಯು ತನ್ನ ಸಮಾಜ ನಿರ್ಮಿಸಿರುವ ಸ್ತ್ರೀತ್ವದ ಅರಿವಿನಿಂದಲೇ ಓದುತ್ತಿರುವವಳು".[೧೧]

ಹೀಗೆ ಸಾಹಿತ್ಯ ಕೃತಿಗಳ ವಿರುದ್ಧ ಓದು/ಮರು ಓದಿನ ಕ್ರಮ ಆ ಪಠ್ಯಗಳಲ್ಲಿರುವ ಸ್ತ್ರೀ ಸಂವೇದನೆಯ, ಮತ್ತದರ ಅಭಾವವನ್ನು ಕಂಡುಕೊಳ್ಳುವಲ್ಲಿ ಸಹಾಯಕವಾಗುತ್ತವೆ. ಮತ್ತು ಪಠ್ಯಗಳಲ್ಲಿರುವ ಅಧಿಕಾರ ಸಂಬಂಧಗಳು ಸಾಂಸ್ಕೃತಿಕ ಚಹರೆಗಳು ಭಿನ್ನ ನೆಲೆಯ ಸ್ತ್ರೀ ಪುರುಷ ವ್ಯಕ್ತಿತ್ವಗಳು, ಸ್ಥೂಲ, ಸೂಕ್ಷ್ಮವಾದ ಪ್ರತಿರೋಧದ ನೆಲೆಗಳು ಎಲ್ಲವನ್ನು ಗುರುತಿಸಬಹುದು. ಆದ್ದರಿಂದಲೇ ಸ್ತ್ರೀವಾದವು ಪ್ರಜ್ಞಾಪೂರ್ವಕವಾಗಿಯೇ ಸ್ತ್ರೀ ಕೇಂದ್ರಿತ

ಓದನ್ನು ಒಪ್ಪಿಕೊಳ್ಳುತ್ತದೆ. ಆ ರೀತಿಯ ಭಿನ್ನ ಓದಿನ ಮುಖಾಂತರ ಹೊಸ ನೆಲೆಯ ಅರ್ಥಗಳನ್ನು ಸ್ಥಾಪಿಸುತ್ತದೆ.

## ೬. ಲೈಂಗಿಕತೆ

ಲೈಂಗಿಕತೆಯ ಪ್ರಶ್ನೆ ಸ್ತ್ರೀವಾದ ಎತ್ತಿರುವ ಪ್ರಶ್ನೆಗಳಲ್ಲೆಲ್ಲಾ ಅತ್ಯಂತ ಪ್ರಮುಖವಾದುದು. ಸ್ತ್ರೀಯ ಬದುಕಿನ ನೆಲೆ-ಬೆಲೆಗಳನ್ನು ನಿರ್ಧರಿಸುವ ಲೈಂಗಿಕತೆಯನ್ನು ಅದರ ಅನೇಕ ಮುಖಗಳನ್ನು ಸ್ತ್ರೀವಾದಿಗಳು ಚರ್ಚೆಗೆತ್ತಿಕೊಳ್ಳುತ್ತಾರೆ.

ಖಾಸಗಿ ಆಸ್ತಿಯ ಪರಿಕಲ್ಪನೆ, ಪಿತೃಪ್ರಧಾನತೆ, ಆಸ್ತಿಯ ವಾರಸುದಾರಿಕೆ – ಈ ಎಲ್ಲ ಸಂಗತಿಗಳು ಹೆಣ್ಣಿನ ಬದುಕನ್ನು ಅಧೀನ ನೆಲೆಗೆ ಒಯ್ಯುತ್ತವೆ. ಇವುಗಳ ಮೂಲಕ ಅವಳ ಲೈಂಗಿಕತೆಯನ್ನು ಸಾಮಾಜೀಕರಣ ಪ್ರಕ್ರಿಯೆಗೆ ಒಳಪಡಿಸಿ ಅವಳನ್ನು ಕುಟುಂಬ, ವಿವಾಹಗಳ ಚೌಕಟ್ಟಿನೊಳಗೆ ಬಂಧಿಸಲ್ಪಟ್ಟದ್ದು, ಚರಿತ್ರೆ. ಇದನ್ನು ಸ್ತ್ರೀವಾದ ತೀವ್ರವಾಗಿ ಶೋಧಿಸುತ್ತದೆ.

ಸ್ತ್ರೀಯ ಲೈಂಗಿಕತೆಯನ್ನು ಹತ್ತಿಕ್ಕುವ ಕಾರ್ಯದಲ್ಲಿ ಪ್ರಮುಖ ಸಂಸ್ಥೆಗಳಾದ ಧರ್ಮ, ಪ್ರಭುತ್ವ, ಸಮಾಜಗಳು ಬಹು ದೊಡ್ಡ ಪಾಲನ್ನು ನಿರ್ವಹಿಸಿದವು. "ಲೈಂಗಿಕ ಸ್ವೇಚ್ಛಾಚಾರದಿಂದ ಸ್ತ್ರೀಯು ತನ್ನನ್ನೂ ಸಮಾಜವನ್ನು ಹಾಳು ಮಾಡುತ್ತಾಳೆ. . . . . ಹೆಂಗಸರು ನಿರಂತರ ಸಂಭೋಗದಿಂದ ಗಂಡಸರನ್ನು ಪ್ರಲೋಭಿಸುವ ಬದಲು, ಕುಟುಂಬದ ಕೇಂದ್ರವಾಗಿ ತಮ್ಮ ಸ್ಥಾನವನ್ನು ಏಕೆ ಅಲಂಕರಿಸಬಾರದು"[೧೨] ಈ ವಿಚಾರಗಳ ಬೆಳವಣಿಗೆಯಿಂದ ಸ್ತ್ರೀಯ ಲೈಂಗಿಕತೆಯ ಸುತ್ತ ಮಿಥಗಳು ಬೆಳೆಯುತ್ತಾ ಅವಳು ಚರಿತ್ರೆಯಲ್ಲಿ ಕಾಣೆಯಾಗಿಬಿಟ್ಟಳು. ಖಾಸಗಿ ಆಸ್ತಿಯ ಪರಿಕಲ್ಪನೆ ಹೆಣ್ಣನ್ನು ಗಂಡಸಿನ ಆಸ್ತಿಯಾಗಿ ಪರಿವರ್ತಿಸಿತು. ಮಾರ್ಕ್ಸ್‌ವಾದಿಗಳು ಹೇಳುವಂತೆ, ಇದು ಹೆಣ್ಣಿನ ಲೈಂಗಿಕತೆಗೆ ಒದಗಿದ ಬಹುದೊಡ್ಡ ಚಾರಿತ್ರಿಕ ಸೋಲು.' ಖಾಸಗಿ ಆಸ್ತಿಯ ಮಾಲಿಕತ್ವ ಮುಂದುವರೆದು ಪಿತೃಪ್ರಧಾನ ಕುಟುಂಬವಾಗಿ ಮಾತೃಪ್ರಧಾನತೆಯನ್ನು ಹತ್ತಿಕ್ಕುವಲ್ಲಿ ಸಫಲವಾಯಿತು. ಕುಟುಂಬದಲ್ಲಿನ ಎಲ್ಲ ಹಕ್ಕುಗಳನ್ನು ಸ್ಥಾಪಿಸಲು ವಿವಾಹವೆಂಬ ದೊಡ್ಡ ಜಾಲ ಸೃಷ್ಟಿಯಾಯಿತು. ಸಂತಾನೋತ್ಪತ್ತಿಯ ಕಾರ್ಯಗಳಿಗೆ ಅವಳನ್ನು ಸೀಮಿತಮಾಡಿ ಅವಳ ಶಕ್ತಿಕೇಂದ್ರವಾದ ಗರ್ಭಾಶಯದ ಮೇಲೆ ಹಕ್ಕನ್ನು ಸ್ಥಾಪಿಸಲು ಸಫಲವಾಯಿತು. ಹೀಗೆ ಸ್ತ್ರೀಯರು ಆರ್ಥಿಕ, ಸಾಮಾಜಿಕ, ರಾಜಕೀಯ, ಹಕ್ಕುಗಳನ್ನೆಲ್ಲಾ ಕಳೆದುಕೊಳ್ಳುತ್ತಾ ಬಂದರು.

ಜಗತ್ತಿನಾದ್ಯಂತ ಇರುವ ಈ ನಿಯಂತ್ರಕವನ್ನು ಸ್ತ್ರೀವಾದಿಗಳು ಸ್ಪಷ್ಟವಾಗಿ ಗುರುತಿಸುತ್ತಾರೆ. ಶೀಲ, ಪಾವಿತ್ರ್ಯ – ಮುಂತಾದ ಮೌಲ್ಯಗಳನ್ನು ಹೇರಿ, ಕೆಲವು ಗುಣಗಳನ್ನು ಆರೋಪ ಮಾಡಿ ಹೆಂಗಸರನ್ನು ಭಾರತದ ಸಂದರ್ಭದಲ್ಲಿ ಶೋಷಣೆ ಮಾಡುತ್ತಿರುವುದನ್ನು ಕಾಣುತ್ತೇವೆ. ಪರಸ್ಪರ ಒಪ್ಪಿಗೆಯೊಂದಿಗೆ ಆನಂದವನ್ನುಂಟು ಮಾಡುವ ಲೈಂಗಿಕತೆಯಲ್ಲಿ ಸ್ತ್ರೀಯ ಪಾತ್ರ ನಿಷ್ಕ್ರಿಯೆಯದೇ. ಹತ್ತಿಕ್ಕಲ್ಪಟ್ಟ ವರ್ಗ, ಸಮಾನ ಸುಖವನ್ನು ಪಡೆಯುವುದು ಹೇಗೆ ತಾನೇ ಸಾಧ್ಯ? ದಾಸಿ, ದೇವತೆ, ಸೂಳೆಯನ್ನಾಗಿ ಮಾಡಿ ಅವಳ ಲೈಂಗಿಕತೆಯ ಮೇಲೆ ದಾಳಿ ಮಾಡಿದ್ದು ಚರಿತ್ರೆ. ಆಡಿಸುವಾತನ ಮರ್ಜಿಯಂತೆ ಆಡುವ ಗೊಂಬೆಯ ನಿರ್ಜೀವತೆ ಇಲ್ಲಿ ಹೆಣ್ಣಿನದಾಗಿರುತ್ತದೆ.

ಮನು ಚಕ್ರವರ್ತಿಯವರು ತಮ್ಮ ಲೇಖನವೊಂದರಲ್ಲಿ ಈ ವಿಷಯವನ್ನು ವಿವರಿಸಿದ್ದಾರೆ. ಇಲ್ಲಿ ಅವರು ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯ ಲೈಂಗಿಕತೆಯನ್ನು ಮುಚ್ಚಿಟ್ಟು ಅವಳನ್ನು ಎರಡು ರೀತಿಯಲ್ಲಿ ನಿರ್ಲಿಂಗಗೊಳಸುವುದನ್ನು ಗಮನಿಸಿದ್ದಾರೆ. "೧) ಸ್ತ್ರೀಯರನ್ನು ಪುರುಷನ ಭೋಗವಸ್ತು ಎಂದು ನೋಡುವಾಗ ಸ್ತ್ರೀಯ ಲೈಂಗಿಕ ಚಟುವಟಿಕೆಗೆ ಸ್ಥಾನವಿರುವುದಿಲ್ಲ. ಅಲ್ಲಿ ಪುರುಷ ಕ್ರಿಯಾತ್ಮಕನಾಗಿದ್ದರೆ ಸ್ತ್ರೀ ನಿಷ್ಕ್ರಿಯಳಾಗಿರುತ್ತಾಳೆ. ಪುರುಷ ಕಾಮುಕತೆಯೇ ಅಲ್ಲಿ ವಿಜೃಂಭಿಸುತ್ತಿರುತ್ತದೆ. ಸ್ತ್ರೀಯು ಅವನ ಇಚ್ಛೆಗೆ ತಕ್ಕಂತೆ ವರ್ತಿಸುವ ವಸ್ತುವಾಗಿ ಪರಿವರ್ತನೆಗೊಂಡಿರುತ್ತಾಳೆ. ಅವಳ ಸ್ವಂತ ಲೈಂಗಿಕತೆ ಅಲ್ಲಿ ನಗಣ್ಯ, ಇದು ಸ್ತ್ರೀಯನ್ನು ನಿರ್ಲಿಂಗಗೊಳಸಿದಂತೆಯೇ ಸೈ. ೨) ಸ್ತ್ರೀಗೆ 'ತಾಯಿ'ಯ ಸ್ಥಾನವನ್ನು ನೀಡಿ ಅವಳ ಲೈಂಗಿಕತೆಯನ್ನು ಮರೆಮಾಡಲಾಗುತ್ತದೆ. ತಾಯಿಗೆ ಕಾಮವಾಂಛೆ ಇರುವುದಿಲ್ಲ. ಭೋಗಲಾಲಸೆ ಇರುವುದಿಲ್ಲ. ಅವಳನ್ನು ದೈವೀಕರಣಗೊಳಸುತ್ತಾರೆ. ಸ್ತ್ರೀಯನ್ನು ನಿರ್ಲಿಂಗಗೊಳಸುವ ಇನ್ನೊಂದು ಕ್ರಮ ಇದು".[೧೩]

ಫ್ರೆಂಚ್ ಚಿಂತಕಿಯರಾದ ಹೆಲನ್ ಸೀಕ್ಸೂ, ಲ್ಯೂಸ್ ಇರಿಗೆರೆ, ಮೋನಿಕಾ ವಿಟ್ಟಗ್ ಮತ್ತು ಜೂಲಿಯಾ ಕ್ರಿಸ್ತೇವ್ ಮುಂತಾದವರು ತತ್ವಶಾಸ್ತ್ರ ಮನೋವಿಶ್ಲೇಷಣಾ ವಿಜ್ಞಾನ ಹಾಗೂ ಭಾಷಾ ಸಂಕೇತ ಶಾಸ್ತ್ರಗಳಲ್ಲಿನ ಪ್ರಸಿದ್ಧ ಚಿಂತಕರಾದ ಜಾಕ್ವೆಸ್ ಡೆರೀಡಾ, ಜಾಕ್ ಲಕಾನ್, ಲೆವಿಸ್ಟ್ರಾಸ್, ಮಿಶೆಲ್ ಪೂಕೋ ಅವರು ತಾತ್ವಿಕ ಹಾಗೂ ಮನೋವಿಶ್ಲೇಷಣಾ ಸಿದ್ಧಾಂತಗಳನ್ನು ಸ್ತ್ರೀವಾದಿ ಅಧ್ಯಯನಕ್ಕೊಳಪಡಿಸಿದರು. ಲ್ಯೂಸ್ ಇರಿಗೆರೆ, ಪ್ಲೇಟೋ, ಹೆಗಲ್, ಫ್ರಾಯ್ಡ್ ಮುಂತಾದವರು ಹೆಣ್ಣನ್ನು ಅವಳ ಲೈಂಗಿಕತೆಯನ್ನು ಸರಿಯಾಗಿ ಗುರುತಿಸದಿರುವುದರ ಬಗ್ಗೆ ಕಟುವಾಗಿ ವಿರೋಧಿಸುತ್ತಾಳೆ. ಹೆಣ್ಣಿನ ಹೆಣ್ತನವನ್ನು

ಗೌರವಿಸುತ್ತಾ "ಗಂಡಿನ ಲೈಂಗಿಕತೆಯಾಗಲಿ ಸುಖದ ಕಲ್ಪನೆಯಾಗಲಿ ಶಿಶ್ನ ಕೇಂದ್ರಿತವಾದುದು, ಅದಕ್ಕೆ ಪ್ರತಿಯಾಗಿ ಹೆಣ್ಣಿನ ಸುಖ ತೃಪ್ತಿಯ ಕಲ್ಪನೆ ಇಡೀ ಶರೀರಾದ್ಯಂತವಾದುದು. ಅದು ತುಟಿ, ಕುಚ, ಯೋನಿ, ತೊಡೆ, ಮುಖ- ಹೀಗೆ ಶರೀರ ಪರ್ಯಂತವಾದುದು. ಸುಖದ ಕಲ್ಪನೆ ಗಂಡು-ಹೆಣ್ಣುಗಳಲ್ಲಿ ಇಬ್ಬರಲ್ಲೂ ಬೇರೆ, ಬೇರೆಯಾದುದು, ಭಿನ್ನ ಸ್ವರೂಪವುಳ್ಳದ್ದಾಗಿದೆ"[೧೪] ಎಂದು ವಿವರಿಸುತ್ತಾಳೆ. 'ಜ್ಯೂಲಿಯಾ ಕ್ರಿಸ್ತೇವ' 'ಸೀಮಿಯಾಟಿಕ್' ಪರಿಕಲ್ಪನೆಯ ಮುಖಾಂತರ 'ಲೈಂಗಿಕತೆ'ಯನ್ನು ವಿವರಿಸುತ್ತಾಳೆ. "ಸೀಮಿಯಾಟಿಕ್ ಸ್ಥಿತಿ ಕೇವಲ ಹೆಣ್ಣಿಗಷ್ಟೇ ಮಿಸಲಾಗದೆ ಪುರುಷನನ್ನೂ ಆನಂದದ ನೆಲೆಗೊಯ್ಯಬಲ್ಲ ವಿಚಾರ ಎಂದು ಗುರುತಿಸುತ್ತಾಳೆ"[೧೫].

ಹೆಣ್ಣಿನ ಲೈಂಗಿಕತೆಯ ಬಗ್ಗೆ ಇತ್ಯಾತ್ಮಕವಾಗಿ ಆಲೋಚಿಸದಂತೆಯೇ, ಆಧುನಿಕ ಮಿಥ್‌ಗಳು ಹೆಣ್ಣಿನ ಲೈಂಗಿಕ ಶೋಷಣೆಯನ್ನು ಮತ್ತಷ್ಟು ಬಲಪಡಿಸುತ್ತವೆ. ಉದ್ಯೋಗ, ವಿದ್ಯಾಭ್ಯಾಸ, ಕಾನೂನುಗಳ ಲಭ್ಯತೆ ಸ್ತ್ರೀಯರಿಗೊದಗಿದರೂ ಅವು, ಅವಳ ಗೃಹಿಣಿತ್ವದ ಕಾರ್ಯದಿಂದ ಅವಳನ್ನು ಬಿಡುಗಡೆಗೊಳಿಸಿಲ್ಲ. ಬದಲಾಗಿ ಅವಳ ಮಾನಸಿಕ ಒತ್ತಡವನ್ನು ಮತ್ತಷ್ಟು ಹೆಚ್ಚು ಮಾಡುವಲ್ಲಿ ಸಫಲವಾಗಿವೆ.

"ತಾಯ್ತನ" ಹೆಣ್ಣಿನ ಲೈಂಗಿಕ ಶೋಷಣೆಯ ಇನ್ನೊಂದು ಮಜಲು ಎಂದು ಸ್ತ್ರೀವಾದ ಗ್ರಹಿಸುತ್ತದೆ. ಕಪ್ಪು ಸ್ತ್ರೀವಾದಿ 'ಆಲಿಸ್ ವಾಕರ್' "ತಾಯ್ತನ" ಎನ್ನುವುದು ಕಪ್ಪುಮಹಿಳೆಯರಿಗೆ ನಿರ್ಭಂದಿತ ಸ್ಥಿತಿಯಾಗಿರುವುದನ್ನು ಗಮನಿಸುತ್ತಾಳೆ. ತೀವ್ರಗಾಮಿ ಸ್ತ್ರೀವಾದಿಗಳು "ತಾಯ್ತನ"ದ ಚರ್ಚೆಯನ್ನು ಅತಿಗೆ ಒಯ್ದು 'ಜೈವಿಕ ಸಂತಾನೋತ್ಪತ್ತಿಯ' ಅವಶ್ಯಕತೆಯೇ ಇಲ್ಲ, ಕೃತಕ ತಂತ್ರಜ್ಞಾನದ ಮುಖಾಂತರ ಮಕ್ಕಳನ್ನು ಪಡೆದರಾಯಿತು ಎನ್ನುವ ಅಭಿಪ್ರಾಯ ತಳೆಯುತ್ತಾರೆ. ತಾಯ್ತನವನ್ನು ವೈಭವೀಕರಿಸಿ ಅವಳನ್ನು ಬಂಧನಕ್ಕೆ ಒಳಪಡಿಸುವ ಹುನ್ನಾರ ಎನ್ನುತ್ತಾರೆ. ತಾಯಿ-ಬಂಜೆ ಎನ್ನುವ ಮುಖಾಂತರ ಸಲ್ಲದ ಪ್ರಾಮುಖ್ಯತೆಯನ್ನು ಕೊಟ್ಟು ಅವಳನ್ನು ಮಾನಸಿಕವಾಗಿ ಕುಗ್ಗಿಸುವ ಸಂಚು ಎಂದು ಹೇಳುತ್ತಾರೆ. 'ಶುಲಾಮಿತ್ ಫೈರ್‌ಸ್ಟೋನ್', 'ಮಾರ್ಜ್ ಪರ್ಸಿಯ', 'ಆನ್ ಓಕ್ಲೆ', 'ಏಡ್ರಿಯನ್ ರಿಚ್' ಮುಂತಾದವರು ತಾಯ್ತನದ ಮಿಥ್‌ಗಳನ್ನು ಒಡೆದು ಭಿನ್ನವಾಗಿ ಚರ್ಚೆ ಮಾಡಿದ್ದಾರೆ.

ಗರ್ಭಪಾತ, ಅತ್ಯಾಚಾರ, ಗರ್ಭನಿರೋಧಕ ಔಷಧಿಗಳು – ಈ ಎಲ್ಲವೂ ಸ್ತ್ರೀಗೆ ಬಿಡುಗಡೆ ಬಂಧನ ಎರಡನ್ನೂ ಸೃಷ್ಟಿಮಾಡಿರುವುದನ್ನು ಸ್ತ್ರೀವಾದಿಗಳು ಗಮನಿಸುತ್ತಾರೆ. ಸ್ತ್ರೀ–ಸ್ತ್ರೀಯರ ನಡುವೆ ಉಂಟಾಗುವ ಲೈಂಗಿಕ ಪ್ರಕ್ರಿಯೆ / ಸಲಿಂಗ ಕಾಮವನ್ನು ಒಪ್ಪಿಕೊಳ್ಳುವ ಲೆಸ್ಬಿಯನ್ ಸ್ತ್ರೀವಾದಿ ಚಿಂತನೆಯು ಹುಟ್ಟಿಕೊಂಡಿದ್ದನ್ನು ಈ ಹಿನ್ನೆಲೆಯಲ್ಲೇ ಗಮನಿಸಬೇಕು.

## ೭. ಚರಿತ್ರೆಯ ಪುನರ್ ನಿರ್ಮಾಣ

'ಸಿಮೋನ್ ದ ಬೋವಾ' ತನ್ನ 'ದ ಸೆಕೆಂಡ್ ಸೆಕ್ಸ್'ನಲ್ಲಿ ಹೀಗೆ ಹೇಳುತ್ತಾಳೆ. "ಹೆಂಗಸರು ತಮ್ಮನ್ನು ಗಂಡಸಿನ ಎದುರಾಗಿ ಸಂಘಟಿಸಿಕೊಳ್ಳಲು ಮೂರ್ತ ಸಾಧನ ಇರದವರು. ಅವರಿಗೆ ಭೂತಕಾಲವಿಲ್ಲ, ಅವರಿಗೆ ಚರಿತ್ರೆಯಿಲ್ಲ"........... ಎನ್ನುತ್ತಾ ಚರಿತ್ರೆಯಲ್ಲಿ ಅವನಿರುವನೇ ಹೊರತು ಅವಳಲ್ಲ ಎಂದು ಸರಿಯಾಗೇ ಗುರುತಿಸುತ್ತಾಳೆ. ಚರಿತ್ರೆ ಎಂದರೆ his-story ಎಂಬುದನ್ನು ಸ್ತ್ರೀವಾದಿಗಳು ಗುರುತಿಸುತ್ತಾರೆ.

ಫ್ರೆಂಚ್ ಸ್ತ್ರೀವಾದಿಗಳು ಪಿತೃಪ್ರಧಾನ ದೃಷ್ಟಿಕೋನವುಳ್ಳ ಚರಿತ್ರೆಯನ್ನು ನಿರಾಕರಿಸಿದರು. ಪುರುಷನು ತಾನು ಕಟ್ಟಿದ ಚರಿತ್ರೆಯಲ್ಲಿ ತನಗೆ ಬೇಕಾದಂತೆ ಹೆಣ್ಣನ್ನು ಚಿತ್ರಿಸಿದ್ದನ್ನು ಗುರುತಿಸಿಕೊಂಡರು, ಮತ್ತು ಕಟ್ಟಿರುವ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯು ಕಾಣೆಯಾಗಿರುವುದನ್ನು ಗಮನಿಸಿ, ಅವಳನ್ನು ಪುನಃ ಹುಡುಕಿ ತೆಗೆಯುವ ಕ್ರಮದ ಅಗತ್ಯತೆಯನ್ನು ಸ್ತ್ರೀವಾದಿಗಳು ಕಂಡುಕೊಂಡರು. 'ಅಲೆನ್ ಫಾರ್ಜಾ' ಎಂಬ ಸ್ತ್ರೀವಾದಿ ಮಹಿಳಾ ಚರಿತ್ರೆಕಾರರಿಗೆ ಅಕ್ಯಾಡೆಮಿಕ್ ವಲಯಗಳಲ್ಲಿ ತುಂಬಾ ಪ್ರಮುಖ ಸ್ಥಾನವಿರುವುದನ್ನು ತನ್ನ ಅಧ್ಯಯನ, ಲೇಖನಗಳ ಮೂಲಕ ಮನದಟ್ಟು ಮಾಡಿಕೊಡುತ್ತಾಳೆ.

ಆಧುನಿಕೋತ್ತರ ಸ್ತ್ರೀವಾದಿಗಳು ಸಾಮಾಜಿಕ, ಸಾಂಸ್ಕೃತಿಕ ದೃಷ್ಟಿಕೋನಗಳ ಹಿನ್ನಲೆಯಲ್ಲಿ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಕಟ್ಟಬೇಕಾದ್ದರ ಅಗತ್ಯತೆಯನ್ನು ಮನಗಂಡರು. ಕನ್ನಡದಲ್ಲೂ ಇಂಥ ಮಹಿಳಾ ಚರಿತ್ರೆಯನ್ನು ಕಟ್ಟುವ ಕೆಲಸ ನಡೆದಿದೆ. ವಿಜಯಾ ದಬ್ಬೆ, ನೇಮಿಚಂದ್ರರವರ ಶೋಧನೆಗಳನ್ನು, ಎಚ್.ಎಸ್. ಶ್ರೀಮತಿಯವರು ಸಂಪಾದಿಸಿದ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಇಲ್ಲಿ ಹೆಸರಿಸಬಹುದು.

## ೮. ಅಧಿಕಾರ ವಿರೋಧಿ ಚಿಂತನೆ

ಸ್ತ್ರೀವಾದ ಅಧಿಕಾರ ವಿರೋಧಿ ಹಂಬಲವನ್ನುಳ್ಳ ಚಿಂತನಾ ಕ್ರಮ. ಅಧಿಕಾರರಹಿತ ಸ್ಥಿತಿಯಲ್ಲಿರುವ ಮಹಿಳೆಯರ ಬದುಕು ಪುರುಷ ಚಿಂತನೆಯ ನಿಯಂತ್ರಣಕ್ಕೆ ಒಳಪಟ್ಟದ್ದು. ಅವಳ ಬದುಕಿನ ಸಕಲವಾಗಿರುವವರು ಪುರುಷರು. ಎಲ್.ಜಿ. ಮೀರಾರವರು ಸರಿಯಾಗಿಯೇ ಗುರುತಿಸಿರುವಂತೆ ಪಿತೃಪ್ರಧಾನ ವ್ಯವಸ್ಥೆಯು ಸ್ತ್ರೀಯನ್ನು ಸ್ಥೂಲ ಮತ್ತು ಸೂಕ್ಷ್ಮ ರೀತಿಗಳಲ್ಲಿ ನಿಯಂತ್ರಿಸುತ್ತದೆ. ಲಿಂಗದ ಕಾರಣದಿಂದ ಉಂಟಾಗುವ ಈ ನಿಯಂತ್ರಣವನ್ನು ವಿರೋಧಿಸುವ ಉದ್ದೇಶದಿಂದಲೇ ಸ್ತ್ರೀವಾದ ಹುಟ್ಟಿದ್ದು. "ಸಾಮಾಜಿಕ ಕಟ್ಟುಪಾಡುಗಳು ಸೃಷ್ಟಿಶೀಲ ಸಂಗತಿಗಳ ಮೇಲೆ (ಭೂಮಿ, ಸ್ತ್ರೀ, ಕಲೆ.........) ತಮ್ಮ ವ್ಯವಸ್ಥೆ ಚದುರಿ ಹೋಗುವ ಭಯಕ್ಕಾಗಿ ನಿಯಂತ್ರಣವನ್ನು ಹಾಕುತ್ತಲೇ ಇರುತ್ತವೆ" (ಡಿ.ಆರ್. ನಾಗರಾಜ) ಈ ಉಲ್ಲಂಘನೆಯೇ ಸ್ತ್ರೀ ಸಂವೇದನೆ. ಸ್ತ್ರೀವಾದಿ ತಾತ್ವಿಕತೆ ತನ್ನ ಕೇಂದ್ರದಲ್ಲಿ 'ಅಧಿಕಾರ ವಿರೋಧ'ವನ್ನು ಹೊಂದಿದೆ. ಇದು ಸ್ತ್ರೀ-ಪುರುಷರ ಸಂದರ್ಭದಲ್ಲಿ ಕೆಲಸ ಮಾಡುವ ಅಧಿಕಾರ ಆಗಬಹುದು, ಸ್ತ್ರೀಯ ಮೇಲೆ ಕುಟುಂಬ, ಸಮಾಜ, ರಾಜ್ಯ, ರಾಷ್ಟ್ರ ಹಾಕುವ ನಿಯಂತ್ರಣ ಆಗಬಹುದು ಒಟ್ಟಿನಲ್ಲಿ ಎಲ್ಲ ಸಂಬಂಧಗಳ ಹಿಂದಿನ ಅಧಿಕಾರದ ಒತ್ತಡವನ್ನು ವಿರೋಧಿಸುವಂಥ ತಾತ್ವಿಕತೆ ಇದು"[೧೩].

ಸ್ತ್ರೀವಾದ ಪಿತೃರೂಪ ಕುಟುಂಬದ ಒಳಗಿರುವ ಅಧಿಕಾರದ ಸ್ವರೂಪವನ್ನು ವಿಶ್ಲೇಷಿಸುತ್ತದೆ. ಅಧಿಕಾರದ ಬಗೆಗೆ ಮಹತ್ವದ ಪ್ರಶ್ನೆಗಳನ್ನು ಎತ್ತುವ 'ಮಿಶೇಲ್ ಪುಕೋ'ನ್ ಚಿಂತನೆಗಳನ್ನು ಸ್ತ್ರೀವಾದ ತನ್ನವನ್ನಾಗಿಸಿಕೊಂಡಿದೆ. ಅವನೇ ಉಲ್ಲೇಖಿಸುವಂತೆ, "ಅಧಿಕಾರ ಹೇಗೆ ಶರೀರವನ್ನು ಭೌತಿಕ ಆಳದಲ್ಲಿ ವ್ಯಾಪಿಸುತ್ತದೆ ಎನ್ನುವುದನ್ನು ತೋರಿಸುವುದು ಇಲ್ಲಿ ನನ್ನ ಉದ್ದೇಶ. ವ್ಯಕ್ತಿಗಳ ಸ್ವಂತ ಪ್ರತಿನಿಧೀಕರಣಗಳನ್ನು ಕೂಡಾ ಅಧಿಕಾರ ಅವಲಂಬಿಸಬೇಕಿಲ್ಲ. ಶರೀರದ ಮೇಲೆ ಅಧಿಕಾರ ತನ್ನ ಹಿಡಿತ ಸ್ಥಾಪಿಸುವುದು ಜನರ ಪ್ರಜ್ಞೆಯಲ್ಲಿ ಅದು ಮೊದಲು ಬೇರೂರುವುದರಿಂದ ಅಲ್ಲ, ಜೈವಿಕ ಶಕ್ತಿಯ ಹಂದರವಿದೆ ಇಲ್ಲಿ. ಅದು ಲೈಂಗಿಕತೆಯನ್ನು ರೂಪಿಸುವಿಕೆಯ ಹಂದರ. ಅದೇ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪ್ರಕ್ರಿಯೆಯಾಗಿ ಅದರಲ್ಲಿಯೇ ಜನ ತಮ್ಮ ಗುರುತಿಸಿಕೊಂಡು, ಮುಳುಗಲು ಸಾಧ್ಯವಾಗುತ್ತದೆ............ ಈ ಸಾಮಾಜಿಕ ಶರೀರದ ಬೇರೆ, ಬೇರೆ ಅಂಶಗಳ ನಡುವೆ, ಗಂಡು-ಹೆಣ್ಣಿನ ನಡುವೆ, ಕುಟುಂಬದ ಸದಸ್ಯರ ನಡುವೆ, ಗುರುಶಿಷ್ಯರ ನಡುವೆ, ಗೊತ್ತಿರುವ-ಗೊತ್ತಿಲ್ಲದವರ ನಡುವೆ ಅಧಿಕಾರ ಸಂಬಂಧಗಳು ಇರುತ್ತವೆ. ಈ ಸಂಬಂಧ

ಸಾರ್ವಭೌಮ ಪ್ರಭುತ್ವ ವ್ಯಕ್ತಿಯ ಮೇಲೆ ಹೊಂದಿರುವ ಅಧಿಕಾರದ ಸರಳ, ನೇರ ಪುನರಾವರ್ತನೆ ಅಲ್ಲ.......... ಸಾರ್ವಭೌಮಾಧಿಕಾರ ಕೆಲಸ ಮಾಡಲು ಸಾಧ್ಯವಾಗುವ ಪರಿಸ್ಥಿತಿ ಅದು”[೧೨]. ಅಂತೆಯೇ ಮಾರ್ಕ್ಸ್, ಗ್ರಾಮ್‌ಷಿ ಇವರು ಅಧಿಕಾರವನ್ನು ವ್ಯಾಖ್ಯಾನಿಸಿದ್ದಾರೆ. ಮುಖ್ಯಾಧಿಕಾರ ಎನ್ನುವುದು ಪ್ರಭುತ್ವ ಮತ್ತು ಸಂಪನ್ಮೂಲಗಳಿಂದ ಹುಟ್ಟಿ ನಂತರ ಇಡೀ ಸಮಾಜಕ್ಕೆ ವ್ಯಾಪಿಸಿಬಿಡುತ್ತದೆ. ಇದನ್ನೇ ಗ್ರಾಮ್‌ಷಿ ‘ಯಜಮಾನಿಕೆ’ ಅಥವಾ ‘ಹೆಜೆಮೊನಿ’ ಎನ್ನುತ್ತಾನೆ.

ಮೇಲಿನ ದೀರ್ಘವಾದ ವಿವರಣೆ ಅಧಿಕಾರದ ವಿಶಾಲವ್ಯಾಪ್ತಿಯ ಸ್ವರೂಪವನ್ನು ಹೇಳುತ್ತದೆ. ಅಧಿಕಾರ ಯಾವಾಗಲೂ ಅಧಿಕಾರರಹಿತರ ಮೇಲೆ ಶೋಷಣೆಯನ್ನು ಮಾಡುತ್ತದೆ. ತನ್ನ ಮೂಗಿನ ನೇರಕ್ಕೆ ಅವರ ಹಿತಾ-ಹಿತಗಳನ್ನು ಹಕ್ಕುಭಾದ್ಯತೆಗಳ ಬಗ್ಗೆ ಕ್ರಮಗಳನ್ನು ತೆಗೆದುಕೊಳುತ್ತದೆ. ಇಂದು ಮಹಿಳಾ ಸಬಲೀಕರಣದ ಎಷ್ಟೋ ಕಾರ್ಯಕ್ರಮಗಳ ಹಿಂದಿರುವ ಮೆದುಳು ಇಂಥದರಿಂದಲೇ ಪ್ರೇರಿತವಾಗಿರುತ್ತದೆ. ಸ್ತ್ರೀಯರ ಬದುಕಿನ ಸಾರ್ಥಕತೆ ಪುರುಷನನ್ನು ಅನುಸರಿಸುವುದರಿಂದ ಎಂಬ ವ್ಯಾಖ್ಯಾನುಗಳನ್ನು ರಚಿಸಿಬಿಡುತ್ತದೆ. ಇದರಿಂದಾಗಿ ಶಾಶ್ವತವಾಗಿ ಶೋಷಿತ ವರ್ಗವೊಂದರ ನಿರ್ಮಾಣವಾಗಿ ಬಿಡುವುದರ ಅಪಾಯದ ಬಗ್ಗೆ ಸ್ತ್ರೀವಾದಿಗಳು ಚಿಂತನೆಗಳನ್ನು ನಡೆಸಿದ್ದಾರೆ.

ಇಂಥ ಅಧಿಕಾರದ ಕಬಂಧ ಬಾಹುಗಳಿಂದ ಪರಿಹಾರ ಸಿಗಬೇಕೆಂದರೆ, ಅಧಿಕಾರರಹಿತ ಸ್ಥಿತಿಯಲ್ಲಿರುವ ಸ್ತ್ರೀವರ್ಗ, ಕೇವಲ ಪ್ರತಿಭಟನೆಯನ್ನಷ್ಟೆ ಮಾಡದೆ ತನ್ನಲ್ಲಿರುವ ಇತ್ಯಾತ್ಮಕ ಅಂಶಗಳಿಂದ, ತನ್ನ ವಿಶಿಷ್ಟ ಶಕ್ತಿಯ ಪ್ರಜ್ಞೆಯ ತಿಳಿವಿನೊಂದಿಗೆ ತನ್ನ ಪರಂಪರೆಯ ಹೆಜ್ಜೆಗಳನ್ನು ಗುರುತಿಸಿಕೊಳ್ಳಬೇಕಾದ ಅಗತ್ಯವಿದೆ ಎನ್ನುತ್ತಾರೆ ಸ್ತ್ರೀವಾದಿಗಳು. ಮಹಿಳಾ ಚಳುವಳಿಗಳ ನೆಲೆಗಳ ಜೊತೆಯಲ್ಲಿಯೇ ತಾತ್ವಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಕಲಾತ್ಮಕ ನೆಲೆಗಳು ಗಟ್ಟಿಗೊಳ್ಳಬೇಕಾಗುತ್ತದೆ.

## ೮. “ವೈಯಕ್ತಿಕವೂ ರಾಜಕೀಯವೇ”

'The personal is political' ಎನ್ನುವುದು ಸ್ತ್ರೀವಾದದ ಮತ್ತೊಂದು ತಾತ್ವಿಕ ಚಿಂತನೆ, ‘ಕ್ಯಾಥರಿನ್ ಮ್ಯಾಕಿನ್’ ಅವರ ಪ್ರಕಾರ “ವೈಯಕ್ತಿಕವನ್ನು ರಾಜಕೀಯವೂ ಹೌದೆಂದು ಗುರುತಿಸುವುದೆಂದರೆ ವೈಯಕ್ತಿಕ ವಲಯದಲ್ಲಿ ರಾಜಕಾರಣದ ಪ್ರಭಾವವನ್ನೂ

ರಾಜಕಾರಣವನ್ನು ರೂಪಿಸುವಲ್ಲಿ ವೈಯಕ್ತಿಕತೆಯು ವಹಿಸುವ ಪಾತ್ರವನ್ನು ಬೀರುವ ಪ್ರಭಾವವನ್ನು ಗುರುತಿಸುವುದೇ ಆಗಿದೆ"[೧೮].

ಪ್ರಾರಂಭದಲ್ಲಿ ತಮ್ಮ ಸಮಸ್ಯೆಗಳಿಂದ ಬಹಳ ದುಃಖಿತರಾದ ಮಹಿಳೆಯರು ತಾವುಗಳು ಒಂದುಗೂಡಿದ ಕಡೆಯಲೆಲ್ಲಾ ತಮ್ಮ ದುಃಖಗಳನ್ನು ವ್ಯಕ್ತಪಡಿಸಿದಾಗ ಅವು ಸಮಾನ ದುಃಖಗಳಾಗಿರುವುದನ್ನು ಗಮನಿಸಿದರು. (ಬೆಟ್ಟಿ ಫ್ರೀಡನ್ ಕೂಡಾ ಇದನ್ನು ಗುರ್ತಿಸುತ್ತಾರೆ) ತಮ್ಮ ಸಮಸ್ಯೆಗಳಿಗೆ ಕಾರಣಗಳು ವೈಯಕ್ತಿಕ ನೆಲೆಯದ್ದಾಗಿರದೆ ಸಾಮಾಜಿಕ ನೆಲೆಯವಾಗಿರುವುದನ್ನು ಮನಗಂಡರು. ಸಾಮಾಜಿಕವಾಗಿ ಶೋಷಣೆಗೆ ಒಳಗಾಗಿರುವುದನ್ನು ಕಂಡು ತಮ್ಮ ಸಮಸ್ಯೆಯ ಹಿಂದಿನ ಶಕ್ತಿ ರಾಜಕಾರಣವನ್ನು ಅರಿತು ಸ್ತ್ರೀವಾದಿಗಳು ಸಂಘಟಿತ ಹೋರಾಟ ಒಂದರ ಅಗತ್ಯಗಳನ್ನು ಮನಗಂಡರು, ಕುಟುಂಬ ಮೂಲದಿಂದ ಹೊರಡುವ ಶೋಷಣೆ ಆರ್ಥಿಕ, ರಾಜಕೀಯ, ಸಂಸ್ಕೃತಿ, ಕಾನೂನು, ಶಿಕ್ಷಣ, ಧರ್ಮ ಮುಂತಾದವುಗಳೊಂದಿಗೆ ಹೊಂದುವ ನಿಕಟತೆಯನ್ನು ಅವುಗಳ ಚಾರಿತ್ರಿಕ ಸಂದರ್ಭಗಳನ್ನು ಸ್ತ್ರೀವಾದಿಗಳು ಗುರುತಿಸಿ ವಿರೋಧಿಸಿದರು.

## ೧೦. ಅನ್ಯ ಜ್ಞಾನಶಿಸ್ತುಗಳೊಂದಿಗೆ ಸಂಬಂಧ

ಸ್ತ್ರೀವಾದ ತನ್ನ ತಾತ್ವಿಕ ನೆಲೆಗಟ್ಟಿಗೆ ಸಮಾಜಶಾಸ್ತ್ರ, ಮಾನವಶಾಸ್ತ್ರ, ತತ್ವಶಾಸ್ತ್ರ, ಮನಃಶಾಸ್ತ್ರ, ವಿಜ್ಞಾನ, ಭಾಷಾಶಾಸ್ತ್ರ.......... ಮುಂತಾದ ಜ್ಞಾನಶಿಸ್ತುಗಳ ಚಿಂತನೆಗಳನ್ನು ಬಳಸಿಕೊಂಡು ತನ್ನನ್ನು ಬಲಗೊಳಿಸಿಕೊಂಡಿದೆ. ಹಿಂದೆ ಈಗಾಗಲೇ ಚರ್ಚಿಸಿರುವಂತೆ ಅನ್ಯಜ್ಞಾನಶಿಸ್ತುಗಳನ್ನು ನಾವು ಮೂರು ಬಗೆಗಳಲ್ಲಿ ಪ್ರವೇಶಿಸುತ್ತೇವೆ. ೧) ಹೆಚ್ಚಿನ ತಿಳುವಳಿಕೆಗಾಗಿ ೨) ತಮ್ಮ ತಿಳುವಳಿಕೆಯನ್ನು ಒರೆಹಚ್ಚಲು ಇತರ ಜ್ಞಾನಶಿಸ್ತುಗಳ ಬಳಕೆಗಾಗಿ ೩) ಪ್ರತಿರೋಧದ ಬಗೆಯಾಗಿ. ಎಲ್ಲ ಜ್ಞಾನಶಿಸ್ತುಗಳು ಮಹಿಳೆಯ ಬದುಕನ್ನು ಒಳಗೊಂಡಿಲ್ಲ ಎಂಬುದನ್ನು ಅರಿತುಕೊಳ್ಳಲಾದರೂ ಸ್ತ್ರೀವಾದಿ ಅಧ್ಯಯನ ಅವುಗಳಲ್ಲಿ ಪ್ರವೇಶಿಸಬೇಕಾಗುತ್ತದೆ. ಮಾರ್ಕ್ಸ್ ಮತ್ತು ಏಂಗಲ್ಸ್‌ರ ಚಿಂತನೆಗಳು; 'ಗ್ರಾಮ್‌ಷಿ'ಯ ಯಜಮಾನಿಕೆ ಅಥವಾ 'ಹೆಜಿಮೊನಿ'ಯ ಕಲ್ಪನೆ; ಫುಕೋನ 'ಅಧಿಕಾರಮೀಮಾಂಸೆ' 'ಜಾಕ್ ಲಕಾನ್'ನ ಭಾಷಾ ಪರಿಕಲ್ಪನೆ; 'ಜಾಕ್ವೆಸ್ ಡೆರೀಡಾ'ನ ನಿರಚನಾವಾದ; 'ಫ್ರಾಯ್ಡ್' ಮತ್ತು 'ಯಾಂಗ್'ರ ಮನಶಾಸ್ತ್ರೀಯ ಕಲ್ಪನೆ ಮುಂತಾದವು ಸ್ತ್ರೀವಾದ ತನ್ನನ್ನು ಹೊಸ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಹಾಯ ಮಾಡಿವೆ. ಪುರುಷಾಧಿಕಾರದ ವಿರುದ್ಧ ಸ್ತ್ರೀವಾದ ಸಶಕ್ತವಾಗಿ

ಮುಖಾಮುಖಿಯಾಗಲು, ಪರ-ವಿರೋಧ ಚಿಂತನೆಗಳನ್ನು ಮಂಡಿಸಲು ಸಹಾಯಕವಾಗಿವೆ. ಫ್ರೆಂಚ್ ಸ್ತ್ರೀವಾದಿಗಳು, ಆಧುನಿಕೋತ್ತರ ಸ್ತ್ರೀವಾದಿಗಳು ಹೆಚ್ಚಾಗಿ ಇತರ ಜ್ಞಾನವಲಯಗಳ ತಿಳುವಳಿಕೆಯನ್ನು ಸ್ತ್ರೀವಾದದ ತಿಳುವಳಿಕೆಯೊಂದಿಗೆ ಮುಖಾಮುಖಿಯಾಗಿಸಿಕೊಂಡಿದ್ದಾರೆ. ಈ ಕಾರಣಗಳಿಂದಲೆ ಸ್ತ್ರೀವಾದಿ ಓದು-ಚಿಂತನೆ-ಅಧ್ಯಯನಗಳು ಪಾರಂಪರಿಕ ಚಿಂತನೆಗಳಿಗೆ ಹೊರತಾದ ಹೊಸ ಮಗ್ಗಲುಗಳನ್ನು ಸ್ಪರ್ಶಿಸುತ್ತವೆ.

## ೧೧. ಸಾರ್ವತ್ರಿಕ ಮನುಷ್ಯನ ಕಲ್ಪನೆ

ಸ್ತ್ರೀಯ ಬದುಕು ತನ್ನದೇ ಆದ ವಿಭಿನ್ನತೆ, ವೈಶಿಷ್ಟ್ಯಗಳಿಂದ ಕೂಡಿದ್ದು, ಅದರ ಸಾಮರ್ಥ್ಯ, ಸೌಂಧರ್ಯಾತ್ಮಕ, ಕಾವ್ಯಾತ್ಮಕ ನೆಲೆಯಲ್ಲಿ, ಬರಹದಲ್ಲಿ ವ್ಯಕ್ತವಾಗುತ್ತದೆ. "ಅವರ ಪ್ರತಿಭೆ ಎಂದೂ ಬತ್ತದ್ದು" ಎನ್ನುವ ಸ್ತ್ರೀವಾದಿಗಳು ಸಾರ್ವತ್ರಿಕ ಮನುಷ್ಯ ಕಲ್ಪನೆಯನ್ನು ತಿರಸ್ಕರಿಸುತ್ತಾರೆ. "ಸ್ತ್ರೀವಾದಗಳು ಇವೆ ಸ್ತ್ರೀವಾದವಲ್ಲ" ಎಂಬ ಮಾತೂ ಕೂಡಾ, ವರ್ಗ, ಜನಾಂಗ, ಜಾತಿ, ದೇಶ- ಇವುಗಳಿಗೆ ಅನುಗುಣವಾಗಿ ಸ್ತ್ರೀವಾದಗಳು ಅನ್ವಯಿಸುತ್ತದೆ ಎಂಬ ಮಾತನ್ನು ಸ್ಪಷ್ಟಪಡಿಸುತ್ತದೆ. ಬಿಳಿ ಸ್ತ್ರೀವಾದದ ವಿರುದ್ಧ ಕಪ್ಪು ಸ್ತ್ರೀವಾದ, ಮೇಲ್ವರ್ಗದ ಸ್ತ್ರೀವಾದದ ವಿರುದ್ಧ ದಲಿತ ಸ್ತ್ರೀವಾದ ಎತ್ತಿರುವ ಧ್ವನಿಗಳೇ ಸ್ತ್ರೀವಾದಗಳ ಬಹುಸ್ತರಿಯಾತೆಗಳನ್ನು ಹೇಳುತ್ತದೆ.

## ೧೨. ಸ್ತ್ರೀಯರ ನಡುವಿನ ಪರಸ್ಪರ ಸಂಬಂಧಗಳು

ಸ್ತ್ರೀ ಪರಂಪರೆಯ ಬಗ್ಗೆ ಸ್ತ್ರೀವಾದಿ ಚಿಂತನೆಗೂ ಪ್ರಧಾನಧಾರೆಯ ಚಿಂತನೆಗೂ ವ್ಯತ್ಯಾಸವಿದೆ. ಸ್ತ್ರೀಯರ ಸಂಬಂಧಗಳನ್ನು ಪುರುಷ ಚಿಂತನೆ ಯಾವಾಗಲೂ ನೇತ್ಯಾತ್ಮಕ ನೆಲೆಯಲ್ಲಿಯೇ ಗ್ರಹಿಸುತ್ತದೆ. ಅತ್ತೆ-ಸೊಸೆ, ಅತ್ತಿಗೆ-ನಾದುನಿ, ಹೆಂಡತಿ-ಸವತಿ, ಹೀಗೆ ವಿರೋಧದ ನೆಲೆಗಳಲ್ಲಿ ನಿಲ್ಲಿಸುತ್ತದೆ. ಪುರುಷ ಕೇಂದ್ರಿತ ಬದುಕನ್ನು ಸುತ್ತುತ್ತಾ, ಅವನನ್ನು ಓಲೈಸುವ, ಅವನಿಗಾಗಿ ಕಿತ್ತಾಡುವ ಸ್ತ್ರೀಯರ ಸಂಬಂಧಗಳ ಮಾದರಿಗಳಿವೆ.

ಆದರೆ ಸ್ತ್ರೀ ತನ್ನ ಪರಂಪರೆಯನ್ನು ಅಜ್ಜಿ-ತಾಯಿ-ಮಗಳು ಈ ನೆಲೆಯಲ್ಲಿ ಗುರುತಿಸಿಕೊಳ್ಳುತ್ತಾಳೆ. ಅಜ್ಜಿ ತಾಯಿಯರನ್ನು ಅಂತರ್ಕರಿಸಿಕೊಂಡು ಮಗಳು ನೆಲೆ ನಿಲ್ಲುವುದನ್ನು ಸ್ತ್ರೀವಾದಿಗಳು ಹೆಳುತ್ತಾರೆ. ಸ್ತ್ರೀವಾದಿ ಪುರಾಣ ನಿರ್ಮಾಣದ ಬಗೆಗೆ ಚಿಂತನೆ ನಡೆಸುವಾಗ ಸೂಸಾನ್ ಗ್ರಿಫಿನ್ ಎಂಬ ವಿದ್ವಾಂಸೆ ಒಂದು ಅಂಶವನ್ನು ಗುರುತಿಸಿದ್ದಾರೆ. ಅದೇನೆಂದರೆ, "ಪ್ರಧಾನವಾಹಿನಿಯ ಚಿಂತನೆ ಭೂಮಿಯನ್ನು 'ತಾಯಿ' ಎಂದು

ಗುರುತಿಸಿದರೆ, ಸ್ತ್ರೀವಾದಿ ಚಿಂತನೆಯು ಭೂಮಿಯನ್ನು 'ಸಹೋದರಿ' ಎಂದು ಗುರುತಿಸುತ್ತದೆ. ಭೂಮಿಯನ್ನು ತಾಯಿ ಅಂದಾಗಿ ಅವಳ ಬಗೆಗೆ ಪ್ರೀತಿ ಮಾತ್ರ ಅಲ್ಲ, ಗೌರವವೂ ಇರುತ್ತದೆ. ಈ ಗೌರವ ಒಂದು ಬಗೆಯ ದೂರವನ್ನು ತರುತ್ತದೆ. ಸಹೋದರಿಯು ನಮಗೆ ಸಮಾನಳಾದುದರಿಂದ ನಮಗೆ ಹೆಚ್ಚು ಆಪ್ತಳು ಮತ್ತು ಅವಳನ್ನು ಶೋಷಿಸುವುದು ಕಷ್ಟ. ಸ್ತ್ರೀವಾದದ ಸಾಮಾಜಿಕ-ರಾಜಕೀಯ ಹೋರಾಟದಲ್ಲೂ ಈ ಸಹೋದರಿ ಪ್ರಜ್ಞೆ ತುಂಬಾ ಶಕ್ತಿಶಾಲಿಯಾಗಿದೆ"[೧೯]. ಕಪ್ಪು ಸ್ತ್ರೀವಾದ 'ಅಲೀಸ್ ವಾಕರ್'ಳು ತನ್ನ ಸೃಜನಶೀಲತೆಯ ಬೇರುಗಳನ್ನು ತನ್ನ ತಾಯಿ, ಅಜ್ಜಿ ಹಾಗೂ ಸುತ್ತಲಿನ ಹೆಂಗಸರ ಸೃಜನಶೀಲ ಬದುಕಿನಲ್ಲಿ ಹುಡುಕುತ್ತಾಳೆ.

ಇದನ್ನೇ 'ಫೆಮಿನಿಸ್ಟ್ ಥಿಯರಿ ಅಂಡ್ ಫೆಮಿನಸ್ಟ್ ಮೂವ್‌ಮೆಂಟ್'ನಲ್ಲಿ 'ನ್ಯಾನ್ಸಿ ಎಫ್ ಕಾಟ್ 'ಗುರುತಿಸುವಂತೆ 'ಸ್ತ್ರೀವಾದ ಒಂದು ಬಗೆಯ ವೈರುಧ್ಯದ ನೆಲೆಯದು', ಲಿಂಗಜಾತಿಯ ಒಗ್ಗಟ್ಟನ್ನು ವೈಯಕ್ತಿಕ ಸ್ವಾತಂತ್ರ್ಯಕ್ಕಾಗಿ ಮಾಡುವಂಥದು : 'ಹೀಗಾದಾಗ ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ನಂಬಿಕೆ ನಶಿಸಿ ಸ್ತ್ರೀಯ ವೈಯಕ್ತಿಕ ಸಮಸ್ಯೆಯ ನೆಲೆಯ ಸಾವತ್ರಿಕ ಬದುಕಿನಲ್ಲಿದೆ ಎಂದು ಗುರುತಿಸಿಕೊಂಡು ಸೋದರಿತ್ವ, ಬೇರೂರಿದಾಗ ಸಂಘಟನೆಯ ಶಕ್ತಿ ಬಲಗೊಳ್ಳಲು ಸಾಧ್ಯ.

## ೧೩. ಆಧುನಿಕ ಸಂಗತಿಗಳು

ರಾಷ್ಟ್ರ, ರಾಜ್ಯ, ಕಾನೂನು, ಸರ್ಕಾರಿ ನಿಯಮಗಳು ಎಲ್ಲರಿಗಾಗಿ, ಸಮಾನತೆಯ ಬದುಕನ್ನು ಬದುಕುವುದಕ್ಕಾಗಿ ಎಂದು ಹೊರಡುವ ನೆಲೆಯನ್ನು ಸ್ತ್ರೀವಾದ ಅನುಮಾನದಿಂದಲೇ ನೋಡುತ್ತದೆ. ಅಧಿಕಾರ ನೆಲೆಯಿಂದಲೇ ಮಾತನಾಡುವ ಈ ಸಂಸ್ಥೆಗಳು ಮಹಿಳೆಯ ಸಮಸ್ಯೆಯ ಭಿನ್ನ ಸ್ವರೂಪಗಳನ್ನು ಗಮನಿಸುವುದೇ ಇಲ್ಲ. ಎಲ್ಲರನ್ನೂ ಎಲ್ಲವನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗಿ ನೋಡುವ ಕ್ರಿಯೆಗಳು, ಅಸಮಾನತೆಯ ನೆಲೆಯಲ್ಲಿರುವ ಮಹಿಳೆಯ ಬದುಕನ್ನು ಮತ್ತಷ್ಟು ದುರ್ಬರ ಮಾಡಿಬಿಡುವ ಸಂಗತಿಗಳಾಗುತ್ತವೆ ಎಂಬುದನ್ನು ಸ್ತ್ರೀವಾದಿಗಳು ಗ್ರಹಿಸುತ್ತಾರೆ.

ವಿಜ್ಞಾನ, ತಂತ್ರಜ್ಞಾನ, ಕಲೆ, ಆರ್ಥಿಕತೆ ಇವುಗಳು ಕೂಡಾ ಮಹಿಳೆಯ ಬದುಕನ್ನು ಮತ್ತಷ್ಟು ಅಂಚಿಗೆ ತಳುತ್ತಿವೆ. ವ್ಯವಸ್ಥೆಯ ತಣ್ಣಗಿನ ಕ್ರೌರ್ಯವನ್ನು ರೂಢಿಸಿಕೊಂಡಿರುವ ಈ

ಸಂಗತಿಗಳು ವ್ಯವಸ್ಥೆಯನ್ನು ಮತ್ತಷ್ಟು ಬಲವಾಗಿಸುವಲ್ಲಿ ಸಹಾಯಕವಾಗಿವೆ. ಈ ಕುರಿತು ಸ್ತ್ರೀವಾದಿಗಳು ತಮ್ಮ ಚಿಂತನೆಗಳನ್ನು ಮಂಡಿಸಿದ್ದಾರೆ.

### ೨.೧.೩ ಸ್ತ್ರೀವಾದದಲ್ಲಿನ ಸಾಹಿತ್ಯಿಕ ಆಯಾಮಗಳು

ಮೇಲಿನ ಚರ್ಚೆಗಳಲ್ಲಿ ಒಟ್ಟು ಸ್ತ್ರೀವಾದದ ತಾತ್ವಿಕತೆಯ ಮುಖ್ಯಾಂಶಗಳನ್ನು ಗಮನಿಸಲಾಯಿತು. ಈ ಭಾಗದಲ್ಲಿ ಸಂಕ್ಷಿಪ್ತವಾಗಿ ಸ್ತ್ರೀವಾದದಲ್ಲಿನ ಸಾಹಿತ್ಯಿಕ ಆಯಾಮಗಳನ್ನು ಗಮನಿಸಬಹುದು. ಪಠ್ಯಗಳು ಎಂದೂ ಕೇವಲ ಪಠ್ಯಗಳಾಗಿ ರೂಪುಗೊಳ್ಳದೆ ತಮ್ಮ ಕಾಲದ ವಾತಾವರಣದ ಛಾಪನ್ನು ಹೊತ್ತು ರೂಪಗೋಳ್ಳುವುದರಿಂದ ಅವುಗಳ ವಿಮೋಚನೆಯ ಬಗ್ಗೆ ಸ್ತ್ರೀವಾದಿಗಳು ತಮ್ಮ ಚರ್ಚೆಗಳನ್ನು ಬೆಳೆಸಿದ್ದಾರೆ. ಅಮೆರಿಕನ್ ಸ್ತ್ರೀವಾದಿಗಳು, ಫ್ರೆಂಚ್ ಸ್ತ್ರೀವಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಅಧ್ಯಾಪನ ವೃತ್ತಿಯಲ್ಲಿ ತೊಡಗಿದ್ದರಿಂದ ಸಾಹಿತ್ಯಿಕ ಸಿದ್ದಾಂತಗಳನ್ನು ರೂಪಿಸುವಲ್ಲಿ, ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯನ್ನು ಗುರುತಿಸುವಲ್ಲಿ, ಸಾಹಿತ್ಯ ವಿಮರ್ಶೆ ಇತ್ಯಾದಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪುರುಷ ಸಿದ್ಧಾಂತ ಪ್ರತಿಷ್ಠಾಪನೆಗಿಂತ ಭಿನ್ನವಾದ ನೆಲೆಯಲ್ಲಿ ಸ್ತ್ರೀವಾದಿ ಸಾಹಿತ್ಯ ಸಿದ್ದಾಂತಗಳನ್ನು ರೂಪಿಸಿಕೊಳ್ಳಲು ಪ್ರಾರಂಭಿಸಿದರು.

ಪಠ್ಯವನ್ನು ಭಿನ್ನವಾದ ಭಾಷಿಕ ನೆಲೆಯಲ್ಲಿ ಓದುವ ಕ್ರಮವೇ ಪಠ್ಯದ ವಿಮೋಚನೆಯ ಜೊತೆಗೆ ಸ್ತ್ರೀ ವಿಮೋಚನೆಯನ್ನು ಒದಗಿಸಬಹುದೆಂದು ತಿಳಿಸಿದ್ದು 'ಎ ವಿಂಡಿಕೇಷನ್ ಆಫ್ ದಿ ರೈಟ್ಸ್ ಆಫ್ ವಿಮೆನ್' ಕೃತಿಯನ್ನು ರಚಿಸಿದ 'ಮೇರಿ ವೂಲೆಸ್ಟನ್ ಕ್ರಾಫ್ಟ್'.

ಪಠ್ಯ, ಸೃಜನಶೀಲತೆಯ ಅಭಿವ್ಯಕ್ತಿ, ಅದು ವಿಮರ್ಶೆಯ ಮಾರ್ಗವನ್ನು ಹಾಯ್ದು ತನ್ನತನವನ್ನು ಸ್ಥಾಪಿಸಿಕೊಳ್ಳಬೇಕು. ಸಾಹಿತ್ಯ ಸೃಷ್ಟಿಯ ಲೋಕವೇ ಪುರುಷನದು ಆದ್ದರಿಂದ ಅದು ಮಹಿಳಾ ಲೋಕವಾಗಿರಲಿಲ್ಲ. ಲೋಕಗ್ರಹಿಕೆ ಎಂದರೆ ವಾಸ್ತವದಲ್ಲಿದ್ದುದು ಪುರುಷ ಗ್ರಹಿಕೆಯೇ. ಸ್ತ್ರೀವಾದಿ ಸಿದ್ಧಾಂತಗಳು ಮಹಿಳಾ ಸೃಜನಶೀಲತೆಯಲ್ಲೂ ಪುರುಷ ಚಿಂತನೆಗಳು ಬೇರು ಬಿಟ್ಟಿದ್ದನ್ನು ಗುರುತಿಸಿ ಮಹಿಳೆಗೆ ದಕ್ಕುವ ತರಬೇತಿಗಳು, ಶಿಕ್ಷಣ, ಪುರುಷ ಚಿಂತನೆಯನ್ನೆ ಬುದ್ಧಿ-ಭಾವಗಳಲ್ಲಿ ತುಂಬುವುದನ್ನು ಗಮನಿಸಿದವು. ಸಹಜವಾಗಿಯೇ ಪುರುಷ ಚಿಂತನೆಯ ಮೂಸೆಯಲೆದ್ದು ಬಂದ ಮಹಿಳಾ ಸೃಜನತೆಗೆ ವಿಮರ್ಶಾ ಲೋಕದಲ್ಲೇನೂ ಮಾನ್ಯತೆ ಇರಲಿಲ್ಲ. ಇದನ್ನು ಸ್ತ್ರೀವಾದಿ ಚಿಂತನೆ ಗುರುತಿಸಿ,

ಕಾರಣಗಳನ್ನು ಹುಡುಕಲು ಪ್ರಯತ್ನಿಸಿದಾಗ, ಮಹಿಳಾ ಸೃಜನತೆ ಹೊರಬಂದಾಗ ಅದು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗದಿರುವುದನ್ನು ಮತ್ತು ವಸ್ತು, ತಂತ್ರ, ವಿನ್ಯಾಸ, ಭಾಷೆ ಇತ್ಯಾದಿ ಮಾನದಂಡಗಳ ಮೂಲಕ ಮಾಪನ ಮಾಡಿ, ಮಹಿಳಾ ಅಭಿವ್ಯಕ್ತಿಯನ್ನು 'ದ್ವಿತೀಯ ದರ್ಜೆ'ಯವೆಂದು ಗುರುತಿಸಿರುವುದನ್ನು ಗಮನಿಸಿದವು.

ಮಹಿಳೆ ಸೃಜನತೆಗೆ, ಅವಳ ಅಭಿವ್ಯಕ್ತಿಗೆ ಮಾನ್ಯತೆಯಲ್ಲದಿರುವುದನ್ನು ಗಮನಿಸಿದ ವಿಮರ್ಶೆ ಮತ್ತು ವಿಮರ್ಶಕಿಯರು ಕೂಡಾ ಪಿತೃಪ್ರಧಾನ ನೆಲೆಯ ಮಾನದಂಡಗಳನ್ನು ಪ್ರಶ್ನಿಸದೇ, ಸ್ತ್ರೀಯ ಸೃಜನತೆಯ ಶಕ್ತಿಯನ್ನೇ ಅನುಮಾನಿಸಿದರು.

ಮುಂದೆ ಬಂದ 'ಇಲೇನ್ ಶೋ ವಾಲ್ಟರ್' ಮಹಿಳಾ ಸಾಹಿತ್ಯ ಪರಂಪರೆಯನ್ನು ಗುರುತಿಸುವ ತುರ್ತು ಅಗತ್ಯವನ್ನು ಮನಗಾಣಿಸಿದಳು. ಪುರುಷ ಅಭಿವ್ಯಕ್ತಿಗಿಂತ ಭಿನ್ನವಾದ ವಸ್ತು, ಪ್ರತಿಮೆ, ಗುಣಲಕ್ಷಣಗಳನ್ನು ಹೊಂದಿರುವ ಮಹಿಳಾ ಅಭಿವ್ಯಕ್ತಿಯನ್ನು ಪ್ರತ್ಯೇಕವಾಗಿಯೇ ಚರ್ಚಿಸಬೇಕಾಗುತ್ತದೆ. ಸೃಜನಶೀಲತೆಯು – ಅಧಯ್ಯನ, ಅಭಿವ್ಯಕ್ತಿ, ವಿಮರ್ಶೆಗಳೆಂಬ ಮಾರ್ಗಗಳನ್ನು ಎಚ್ಚರದಿಂದಲೇ ದಾಟಬೇಕು, ಅಂಥ ಪಯಣದ ಮೂರು ಹಂತಗಳನ್ನು ಶೋವಾಲ್ತರ್ ಹೇಳುತ್ತಾಳೆ.

(೧) ಯಜಮಾನ ಸಂಸ್ಕೃತಿಯನ್ನು ಅನುಸರಿಸುವ ನಕಲು ಹಂತ. ಸ್ಥಿರ ಮಾದರಿಗಳ ಚಿತ್ರಣದ ಈ ಹಂತವನ್ನು ಸ್ತ್ರೀಯಾತ್ಮಕ ಹಂತವೆಂದು ಗುರುತಿಸುತ್ತಾರೆ.

(೨) ನಕಲಿನ ಹಾದಿಯಲ್ಲಿ ಮುಂದುವರೆದ ನಂತರ ಯಜಮಾನ ಸಂಸ್ಕೃತಿಯ ವ್ಯವಸ್ಥೆಯನ್ನು, ಮಾದರಿ ಮತ್ತು ಮಾನದಂಡಗಳನ್ನು ಪ್ರಶ್ನಿಸುವ ತಿಳುವಳಿಕೆಯ ಹಂತವನ್ನು ಸ್ತ್ರೀವಾದಿ ಹಂತವೆಂದು ಗುರುತಿಸುತ್ತಾರೆ.

(೩) ತನ್ನತನದ ಆಸ್ಮಿತೆಯನ್ನು ಕಂಡುಕೊಂಡ ಆತ್ಮಶೋಧನೆಯ ಹಂತಕ್ಕೆ ಸ್ತ್ರೀತ್ವದ ಹಂತವೆಂದು ಗುರುತಿಸುತ್ತಾರೆ.

ಈ ಮೂರು ಹಂತಗಳನ್ನು ನಾವು ಪ್ರತ್ಯೇಕ ಒಬ್ಬೊಬ್ಬರ ಬರವಣಿಗೆಯಲ್ಲಿ ಗುರುತಿಸುವುದು ಸಾಧ್ಯವಿಲ್ಲ. ಈ ಮೂರು ಹಂತಗಳು ಮಹಿಳಾ ಅಭಿವ್ಯಕ್ತಿಯ ಚರಿತ್ರೆಯಲ್ಲಿ ಮುಖ್ಯವಾದ 'ಮಹತ್ವದ ಘಟ್ಟಗಳೇ' ಆಗಿರುವುದನ್ನು ಗಮನಿಸಬೇಕು. ಸ್ತ್ರೀವಾದಿ ವಿಮರ್ಶೆ ಮಹಿಳಾ ಸಾಹಿತ್ಯ ಚರಿತ್ರೆಯನ್ನು ರೂಪಿಸಹೊರಟ ಹಾದಿಯಲ್ಲಿ ಈ ಎಲ್ಲ ಹಂತಗಳನ್ನು ಗಮನಿಸುವ ಅಗತ್ಯ ತುರ್ತಿನದು. ಪ್ರಸ್ತುತ ಅಧ್ಯಯನ ಕೂಡ ನಕಲಿನ ಹಂತವೆಂದು

ಗುರುತಿಸಬಹುದಾದ, ಮಹಿಳಾ ಅಭಿವ್ಯಕ್ತಿಯನ್ನು ಅವುಗಳ ಹಿನ್ನಲೆಯ ಸಾಮಾಜಿಕ, ಸಾಂಸ್ಕೃತಿಕ ಒತ್ತಡಗಳನ್ನು ಅಧ್ಯಯನ ಮಾಡಲು ಹೊರಟಿದೆ. ತನ್ನ 'ಎ ಲಿಟರೇಚರ್ ಆಫ್ ದೇರ್ ಓನ್' (೧೯೮೦) ಕೃತಿಯಲ್ಲಿ 'ಶೋ ಆಲ್ಟರ್' ಸ್ತ್ರೀ ಸಾಹಿತ್ಯದ ಶ್ರೀಮಂತ ಪರಂಪರೆಯನ್ನು ಪುರುಷ ವಿಮರ್ಶಕರು ಅಲಕ್ಷಿಸಿದ್ದನು ಗಮನಿಸಿ ಹೀಗೆ ನುಡಿಯುತ್ತಾಳೆ "ಈ ನಂಬಿಕೆ (ಮಹಾ ಪರಂಪರಯ ಬಗೆಗಿನ ನಂಬಿಕೆ) ಅಸಾಧಾರಣವಾಗಿ, ಸಮೃದ್ಧವಾಗಿರುವ ವೈವಿಧ್ಯತೆ ಹೊಂದಿರುವ ಇಂಗ್ಲೀಷ್ ಕಾದಂಬರಿಕಾರ್ತಿಯರನ್ನು ಕುಗ್ಗಿಸಿ ಮಹಾ ಎಂಬ ಚಿಕ್ಕ ಗುಂಪಿಗೆ ಇಳಿಸಿದೆ, ಅಲ್ಲಿಂದಲೇ ಎಲ್ಲ ಸಿದ್ಧಾಂತಗಳನ್ನು ಸೃಷ್ಟಿಸಿದೆ, ಕಾದಂಬರಿಕಾರ್ತಿಯರ ಮಟ್ಟಿಗೆ ಮಹತ್ತಿನ ಕಲ್ಪನೆ ಎಂದರೆ ಬರೀ ನಾಲ್ವರೆ – ಜೀನ್ ಆಸ್ಟಿನ್, ಬ್ರಾಂಟೆಗಳು, ಜಾರ್ಜ್ ಎಲಿಯಟ್, (ಮೇರಿ ಆನ್ ಇವಾನ್ಸ್) ಮರ್ಜೀನಿಯಾ ವುಲ್ಫ್ ಎಂದಾಗಿದೆ......... ಈ ಕೆಲವು ಕಾದಂಬರಿಕಾರ್ತಿಯರ ಮೇಲೆಯೇ ಕೇಂದ್ರೀಕರಿಸಿ 'ಮಹಾನ್' ಅಲ್ಲದವರನ್ನು ಅಲಕ್ಷಿಸಲಾಗಿದೆ. ಅವರನ್ನು ಸಂಕಲನ, ಪಠ್ಯ, ಚರಿತ್ರೆ, ಸಿದ್ಧಾಂತಗಳಿಂದ ಪೂರ್ಣವಾಗಿ ಕೈಬಿಡಲಾಗಿದೆ. ಮೈನರ್ ಕಾದಂಬರಿಕಾರ್ತಿಯರ ಬಗೆಗೆ ಗಮನ ಇಲ್ಲವಾಗಿದ್ದು, ಅವರು ಒಂದು ತಲೆಮಾರಿಗೂ ಇನ್ನೊಂದಕ್ಕೂ ಇರುವ ಕೊಂಡಿ ಎಂಬ ಅಂಶವೇ ಕಣ್ಮರೆಯಾಗಿದೆ, ಸ್ತ್ರೀ ಸಾಹಿತ್ಯದಲ್ಲಿರುವ ನಿರಂತರತಾ ಪ್ರಕ್ರಿಯೆಯೇ ಅರ್ಥವಾಗದೆ ಹೋಗಿದೆ. ಜೊತೆಗೆ ಲೇಖಕಿಯರ ಬದುಕು ಮತ್ತು ಸ್ತ್ರೀಯರ ಆರ್ಥಿಕ, ಸಾಮಾಜಿಕ ನ್ಯಾಯಾಂಗೀಯ ಅಂತಸ್ತಿನ ಜತೆಗಿರುವ ಸಂಬಂಧಗಳ ಬಗೆಗೆ ನಂಬಲರ್ಹ ಮಾಹಿತಿಯೂ ಇಲ್ಲವಾಗಿದೆ"[೨೦].

ಈಕೆಯ ಈ ವಿಚಾರಗಳು ಕೇವಲ ಎಮಿಲಿ ಬ್ರಾಂಟೆಯ ಕಾಲದಿಂದ ಬರೆದ ಬ್ರಿಟಿಷ್ ಕಾದಂಬರಿಕಾರ್ತಿಯರನ್ನು ಕುರಿತು ಹೇಳಿದ ಮಾತುಗಳು ಮಾತ್ರ ಆಗಿರದೆ ಇಡೀ ಮಹಿಳಾ ಸಾಹಿತ್ಯಕ್ಕೆ ಅನ್ವಯಿಸುತ್ತದೆ. ಕನ್ನಡದ ಸಂದರ್ಭದಲ್ಲಿಯೂ ಕೂಡ "ಮಹಾ' ಪರಂಪರೆಯ ಅಡಿಯಲ್ಲಿ ಅನೇಕ ಮೈನರ್ ಆದ ಬರಹಗಾರ್ತಿಯರು ಚರ್ಚಿತಗೊಂಡೇ ಇಲ್ಲ, ಅದರ ಸಾಹಿತ್ಯಾಭಿವ್ಯಕ್ತಿಯ ಮೌಲ್ಯ – ಅಪಮೌಲ್ಯಗಳೇನೇ ಇದ್ದರೂ, ಅದ್ದನ್ನೂ ಒಳಗೊಂಡೇ ಚರ್ಚಿತವಾಗಬೇಕಾದ್ದು ಅಗತ್ಯದ ಕೆಲಸ, ಇಂಥ ಪ್ರಯತ್ನಗಳಿಂದಲೇ ಸ್ತ್ರೀವಾದಿ ಪರಂಪರೆಯ ಎಳೆಗಳು ಹುರಿಗೊಂಡು ಗಟ್ಟಿಯಾಗಲು ಸಾಧ್ಯ.

ಮುಂದುವರೆದು ಪುರುಷ ಸಾಹಿತ್ಯ ಸಿದ್ಧಾಂತದಲ್ಲಿನ ಶುದ್ಧ ಸಾಹಿತ್ಯಿಕ ಮತ್ತು ಸೌಂದರ್ಯಾತ್ಮಕ ಮಾನದಂಡಗಳನ್ನು ನಿರಾಕರಿಸಿ ಶೋ ವಾಲ್ಟರ್ 'ಗೈನೋಕ್ರಿಟಿಸಿಸಂ'

ಚಿಂತನೆಯ ಮೂಲಕ ಮಹಿಳಾ ಸಾಹಿತ್ಯವನ್ನು ವಿಶ್ಲೇಷಣೆ ಮಾಡಬೇಕೆಂದು ಪ್ರತಿಪಾದಿಸುತ್ತಾಳೆ. ಅವಳ ಪ್ರಕಾರ 'ಗೈನೋಕ್ರಿಕಟ್' ಹೆಚ್ಚು ಸ್ವಯಂಪೂರ್ಣ ಪ್ರಯೋಗಾತ್ಮಕ ಸ್ತ್ರೀವಾದಿ ಸಂಶೋದನೆಯ ಅನ್ಯಶಿಸ್ತುಗಳ ಜೊತೆಗೆ ಇದು ಸಂಬಂಧ ಹೊಂದಿದೆ ಎಂದು ವಿವರಿಸುತ್ತಾಳೆ.

ಮುಂದೆ ತನ್ನ 'ಎ ರೂಮ್ ಆಫ್ ಓನ್ಸ್ ಓನ್'ದಲ್ಲಿ 'ವರ್ಜಿನಿಯಾ ವುಲ್ಫ್' ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದ ಕೆಲವು ಚಿಂತನೆಗಳನ್ನು ಮುಂದಿಡುತ್ತಾಳೆ. ಲೇಖಕಿಯರ ಹೊರ ಜಗತ್ತು ಮತ್ತು ಒಳಜಗತ್ತುಗಳ ಸಂಘರ್ಷವನ್ನು ಧೀರ್ಘವಾದ ಮಾತುಗಳಲ್ಲಿ ಹೇಳುತ್ತಾಳೆ. ಮಾನಸಿಕ ಜಗತ್ತನ್ನು ಮುಚ್ಚಿಹಾಕುವುದು ಸುಲಭವಲ್ಲ. ಹಾಗೆಯೇ ಸಾಂಸ್ಕೃತಿಕ ಭೂತ – ಗೃಹದೇವತೆಯ' ಉಚ್ಚಾಟನೆಯೂ ಅಷ್ಟು ಸರಳವಲ್ಲ. ಸ್ವಂತ ಮನೆ, ಆಸ್ತಿಪಾಸ್ತಿ, ಇದ್ದರೂ ಕೂಡಾ ಹೆಂಗಸಿನ ಲೇಖನಿ ಅಷ್ಟು ಸರಾಗವಾಗಿ ಚಲಿಸುವುದಿಲ್ಲ ಎಂಬುದನ್ನು ಕಂಡುಕೊಳ್ಳುತ್ತಾಳೆ. ತಾನು ಲೇಖಕಿಯಾದರೂ ಮನಸ್ಸು ಕೆಲಸ ಮಾಡುತ್ತಿಲ್ಲ ಎಂದು ಅರಿಯುತ್ತಾಳೆ. ತನ್ನಿಚ್ಚೆಯು ಹಾಗೆ ಪ್ರತಿಭೆಯ ಸ್ವತಂತ್ರ ವ್ಯಾಪಾರ ನಿರ್ವಹಣೆಗೆ ಅನೇಕ ತೊಡಕುಗಳಿವೆ ಎನ್ನುತ್ತಾಳೆ. ಹೆಂಗಸಿಗೆ ತನಗೊಂದು 'ಭಿನ್ನ ಅನುಭವ' ಇದ್ದು, ತಾನು ಅದನ್ನು ಹೇಳಬೇಕಾಗಿರುವ ಸಮಸ್ಯೆ ಇದೆ. ಸ್ಪಷ್ಟ ಸಾಂಸ್ಕೃತಿಕ ಸಮಸ್ಯೆಗಳಿಂದಾಗಿ ಅದನ್ನು ಹೇಳಲಾಗುತ್ತಿಲ್ಲ ಎಂದು ಹೇಳಿದ ವುಲ್ಫ್‌ಳ ಚಿಂತನೆ ಸ್ತ್ರೀವಾದಿ ವಿಮರ್ಶೆಯಲ್ಲಿ ತುಂಬಾ ಮುಖ್ಯ.

ನಂತರ ಬಂದ ಫ್ರೆಂಚ್ ಸ್ತ್ರೀವಾದಿ ಚಿಂತಕಿಯರು ಆಧುನಿಕೋತ್ತರ ಸ್ತ್ರೀವಾದದ ನೆಲೆಯನ್ನು ಗಟ್ಟಿಗೊಳಿಸಿದರು. ತಮ್ಮ ಚಿಂತನೆಯಲ್ಲಿ ತತ್ವಶಾಸ್ತ್ರ ಭಾಷಾಶಾಸ್ತ್ರ, ಮನೋವಿಜ್ಞಾನದ ಕ್ರಮಗಳನ್ನು ಬಳಸಿಕೊಂಡು ತಮ್ಮ ಚಿಂತನೆಗಳನ್ನು ಗಟ್ಟಿಗೊಳಿಸಿದರು. 'ಜಾಕ್ ಲಕಾನ್'ನ ಭಾಷಾ ಪರಿಕಲ್ಪನೆ ಮತ್ತು 'ಜಾಕ್ವೆಸ್ ಡೆರೀಡಾ'ನ ನಿರಚನಾವಾದವನ್ನು ತಮ್ಮ ಚಿಂತನೆಗಳಲ್ಲಿ ಬಳಸಿಕೊಂಡರು. 'ತೋರಿಲ್ ಮೊಯಿ', 'ಹೆಲನ್ ಸಿಕ್ಸೂ', 'ಲ್ಯೂಸ್ ಇರಿಗೆರೆ', 'ಜೂಲಿಯ ಕ್ರಿಸ್ತೇವ್' ಮುಂತಾದ ಸ್ತ್ರೀವಾದಿ ಮುಖ್ಯರು ಸಾಹಿತ್ಯಕ ಆಯಾಮಗಳನ್ನು ಕುರಿತು ತಮ್ಮ ಚರ್ಚೆಯನ್ನು ಬೆಳೆಸಿದ್ದಾರೆ.

'ಸ್ತ್ರೀಯಾತ್ಮಕತೆ'ಯನ್ನು ಪುರುಷ ಕಟ್ಟಿದ ಚರಿತ್ರೆಯೆಂದು ಗುರುತಿಸಿದ ಸ್ತ್ರೀವಾದಿಗಳು ಆ ಚರಿತ್ರೆಯಲ್ಲಿ ಮಹಿಳೆ ಇಲ್ಲದ್ದನ್ನು ಗಮನಿಸಿದರು. ಆದ್ದರಿಂದಲೇ ಪ್ರತ್ಯೇಕ ಮಹಿಳಾ

ಸಾಹಿತ್ಯ ಚರಿತ್ರೆ ಮತ್ತು ಮಹಿಳಾ ವಿಮರ್ಶೆಯ ಚರಿತ್ರೆಯನ್ನು ಕಟ್ಟಬೇಕಾದ್ದನ್ನು ಹೇಳುತ್ತಾರೆ. 'ಜಕ್ ಲಕಾನ್' ಫ್ರಾಯ್ಡ್ 'ಶೂನ್ಯ'ವೆಂದು ಗುರುತಿಸಿರುವ ಮಹಿಳಾ ಅಸ್ತಿತ್ವ ಭಾಷಾಶಾಸ್ತ್ರದಲ್ಲಿಯೂ ಹೇಗೆ ನಿರ್ಲಕ್ಷಕ್ಕೆ ಒಳಗಾಗಿದೆ ಎಂಬುದನ್ನು ಬರೆಯುತ್ತಾನೆ. ಭಾಷೆಯನ್ನು ಗ್ರಹಿಸುವ ಮಕ್ಕಳು ಬಾಲ್ಯದಿಂದಲೇ ಅದರಲ್ಲಿ ಅಡಕವಾಗಿರುವ ಲಿಂಗ ತಾರತಮ್ಯವನ್ನು ಕಲಿಯುತ್ತಾರೆ. ಸಹಜವಾಗಿಯೇ ಹೆಣ್ಣು ಪರಾಧೀನದ, ಅಧೀನತೆಯ ಭಾಷೆಯನ್ನು ಕಲಿಯುತ್ತಾ, ಪಿತೃಪ್ರಧಾನತೆಯ ವ್ಯವಸ್ಥೆಯಲ್ಲಿ ತನ್ನನ್ನು ಅಧೀನಳನ್ನಾಗಿ ಮಾಡಿಕೊಳ್ಳುತ್ತಾಳೆ ಎಂಬುದನ್ನು ಹೇಳುತ್ತಾನೆ. ಹೆಂಗಸಿನ ಸ್ವಭಾವ ಚಂಚಲವಾದ್ದೆಂದು ಗುರುತಿಸುವ ಸಂದರ್ಭದಲ್ಲಿ ಲಕಾನ್, ಅವಳ ಚಂಚಲತೆಗೆ ಹೆಚ್ಚು ಬೆಲೆ ನೀಡಿ ಆ ಮುಕ್ತತೆಯನ್ನು 'ಕಾವ್ಯಾತ್ಮಕ ಸಾಮರ್ಥ್ಯ' ಎಂದು ವ್ಯಾಖ್ಯಾನಿಸುತ್ತಾನೆ.

ಇದನ್ನೇ 'ಹೆಲನ್ ಸಿಕ್ಸೂ' ಹೀಗೆ ಹೇಳುತ್ತಾಳೆ, "(Lecritual feminie is milk, it's a song, something with rhythm and pulse, but no words, something connected with bodies and body beats and movements, but not with representational language)" "ಹೇಗೆ ಒಂದು ಸುಪ್ತ ಪ್ರಜ್ಞೆ ಇನ್ನೊಂದನ್ನು ಹೋಲುತ್ತದೆ ಎಂದು ಹೇಳಲಾಗುವುದಿಲ್ಲವೋ ಹಾಗೆಯೇ ಏಕೀಕೃತವಾದ, ಏಕರೂಪಿಯಾದ, ವರ್ಗೀಕೃತವಾದ ಸ್ತ್ರೀ ಲೈಂಗಿಕತೆ ಇದೆ ಎಂದು ಹೇಳಲಾಗುವುದಿಲ್ಲ. ಮಹಿಳೆಯ ಪ್ರತಿಭೆ ಎಂದೂ ಬತ್ತದ್ದು ಅದು ಸಂಗೀತದ ಹಾಗೇ, ಶಿಲ್ಪ ಸಾಹಿತ್ಯಗಳ ಹಾಗೆ, ಅದರ ಕಲ್ಪಕತೆ ಊಹಾತೀತ"[೨೧] ಹೆಣ್ಣಿನ ಸೃಷ್ಟಿಕ್ರಿಯೆಯನ್ನು ಲೇಖಕಿಯ ಸೃಜನಶೀಲತೆಯೊಂದಿಗೆ ಹೆಲನ್ ಹೋಲಿಸುತ್ತಾಳೆ. ಬರವಣಿಗೆಯನ್ನು ಇಡಿಯಾಗಿ ಸ್ತ್ರೀಕೇಂದ್ರಿತ (ಫೆಮಿನೆನ್) ಮತ್ತು ಪುರುಷಕೇಂದ್ರಿತ (ಮ್ಯಾಸ್ಕೂಲೈನ್) ಎಂದು ವಿಭಜಿಸಿ ಸ್ತ್ರೀಕೇಂದ್ರಿತ ಬರಹಗಳನ್ನು ಪುರುಷಕೇಂದ್ರಿತ ಬರಹಗಳು ಬದಿಗೊತ್ತಿರುವುದನ್ನು ಚರ್ಚಿಸುತ್ತಾ ಸಾಮಾಜಿಕ ಬದಲಾವಣೆಗಳು ಉಂಟಾದಾಗ ಮಾತ್ರ ಇಂಥ ಧೋರಣೆಗಳು ಹೋಗಲು ಸಾದ್ಯ ಎನ್ನುತ್ತಾಳೆ.

049221

ಹೆಲನ್ ಸಿಕ್ಸೂಳ ಚಿಂತನೆಗಳನ್ನು ಬೆಂಬಲಿಸುತ್ತಾ ಲ್ಯೂಸ್ ಇರಿಗೆರೆ ಹೆಣ್ಣಿನ ವಿಶಿಷ್ಟತೆಯನ್ನು ಗುರುತಿಸದ 'ಹೆಗಲ್', ಫ್ರಾಯ್ಡ್‌ರನ್ನು ಅವರ ಆಲೋಚನೆಗಳನ್ನು ವಿರೋಧಿಸಿ ಗಂಡಿನ ಸುಖದ ಕಲ್ಪನೆ ಶಿಶ್ನ ಕೇಂದ್ರಿತವಾದರೆ, ಹೆಣ್ಣಿನ ಸುಖದ ಕಲ್ಪನೆ ಇಡೀ ಶರೀರವನ್ನು ವ್ಯಾಪಿಸಿದ್ದು ಎನ್ನುತ್ತಾ ಸ್ತ್ರೀಯರ ಭಾಷೆಯ ಅಧೀನತೆಗೆ, ಅವರ ಬರಹದ ಮಿತಿಗಳಿಗೆ ಕಾರಣ ಸಾಮಾಜಿಕ ವ್ಯವಸ್ಥೆ ಎಂದು ಪ್ರತಿಪಾದಿಸುತ್ತಾಳೆ.

ಜಾಕ್ವೆಸ್ ಡೇರಿಡಾ ಪಠ್ಯದ ಒಳಗೆ ಇರುವ ವೈರುಧ್ಯದ ಅಂಶಗಳನ್ನು ಹೊಸ ಓದಿನೊಂದಿಗೆ ಗುರುತಿಸಿಕೊಂಡಾಗ ಪುರುಷ ಸಾಹಿತ್ಯದಲ್ಲಿ ಮತ್ತು ಸ್ತ್ರೀಸಾಹಿತ್ಯದಲ್ಲಿ ಅವಿತಿರುವ, ಸ್ತ್ರೀಚಿತ್ರಣಗಳ ಹೊಸ ದೃಷ್ಟಿ ಲಭ್ಯವಾಗುತ್ತದೆ. ಇದು ಸಾಹಿತ್ಯ ಪಠ್ಯಗಳಿಂದ ಹಿಡಿದು ಸಾಹಿತ್ಯ ವಿಮರ್ಶೆ, ಸಾಹಿತ್ಯ ಸಿದ್ಧಾಂತಗಳವರೆಗೆ ಸಾದ್ಯವಾಗಬೇಕೆಂದು ಚರ್ಚಿಸಿದ, ಸಾಹಿತ್ಯ ಸಂಸ್ಕೃತಿಯಲ್ಲಿ ಅಡಗಿರುವ ದ್ವಂದ್ವ ವಿರೋಧಿ ಪದಗಳನ್ನು ಡೇರಿಡಾ ಗುರುತಿಸುತ್ತಾನೆ. ಇದನ್ನೆ ಹೆಲನ್ ಸಿಕ್ಸೂ ಕೂಡಾ ತನ್ನ 'ಲಾಫ್ ಆಫ್ ಮೇಡುಸಾ' ಕೃತಿಯಲ್ಲಿ (Male/Female, order-chaos, language – silence, presence – absence, speech–writing, light-dark, good-evil) ಮುಂತಾಗಿ ವಿರೋಧಿ ದ್ವಂದ್ವಪದಗಳನ್ನು ಗುರುತಿಸಿ ಪಟ್ಟಿಮಾಡುತ್ತಾಳೆ. ಇಲ್ಲಿ ಮೊದಲನೆ ಗುಂಪಿಗೆ ಎರಡನೆಯದು ಯಾವಾಗಲೂ ಅಧೀನವಾಗಿರುತ್ತದೆ ಎಂದು ಗುರತಿಸುತ್ತಾಳೆ.

ಮತ್ತೊಬ್ಬ ಪ್ರಮುಖ ಚಿಂತಕಿ ಜೂಲಿಯಾ ಕ್ರಿಸ್ತೇವ್, ಸಿಮಿಯಾಟಿಕ್ (ಸಂಜ್ಞಾತ್ಮಕ) ಮತ್ತು ಸಿಂಬಾಲಿಕ್ (ಸಂಕೇತಾತ್ಮಕ) ಸ್ಥಿತಿಗಳನ್ನು ಗುರುತಿಸಿ ಹೆಣ್ಣಿನ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಸಿಮಿಯಾಟಿಕ್ ಸ್ಥಿತಿ ಎಂದು ಗುರುತಿಸುತ್ತಾಳೆ. ಸಮಿಯಾಟಿಕ್ ಅರ್ಥವನ್ನು ವಿವರಿಸುತ್ತಾ ಮಗು ಈಡಿಪಸ್ ಹಂತದ ಮೊದಲು ತನ್ನ ತಾಯಿಯೊಂದಿಗೆ ಹೊಂದಿರುವ ಅವಿನಾಭಾವ ಅನ್ಯೋನ್ಯತೆಯ ಸ್ಥಿತಿ. ಈ ಹಂತದ ಅನ್ಯೋನ್ಯತಾ ಭಾವ ಬರಬರುತ್ತಾ ಪಿತೃಪ್ರಧಾನತೆಯ ಚಿಂತನೆಯ ರೂಢಿಯಲ್ಲಿ ಕಾಣೆಯಾಗಿಬಿಡುತ್ತದೆ. ಎನ್ನುವ ಕ್ರಿಸ್ತೇವ್ ಈ ವಿವರಣೆಯನ್ನು ಸಾಹಿತ್ಯ ರಚನೆಗೆ ಸಮೀಕರಿಸುತ್ತಾಳೆ. ಹೆಣ್ಣಿಗೆ ಸಾಹಿತ್ಯ ರಚನೆ, ಸಾಹಿತ್ಯಾಭಿವ್ಯಕ್ತಿಯೇ ತನ್ನೆಲ್ಲ ಬಂಧನಗಳ ಬಿಡುಗಡೆಗೆ ಕಾರಣವಾಗುವ ವಿಚಾರವಾಗಿದ್ದು, ಈ ಪ್ರಕ್ರಿಯೆ ಮನೋದೈಹಿಕ ಸ್ವರೂಪದ್ದೆಂದು ಗುರುತಿಸುತ್ತಾಳೆ. ಪುರುಷ ದೃಷ್ಟಿಕೋನದ ಲಿಂಗತ್ವದ ಮಾದರಿಗಳನ್ನು ಹೀಗೆ ಮಾತ್ರ ದಮನಮಾಡಬಹುದೆಂದು ಹೇಳುತ್ತಾ ಕ್ರಿಸ್ತೇವ್ ಒಂದು ಹೊಸ ಕಾವ್ಯತತ್ವವನ್ನು ಸ್ತ್ರೀ ಬರಹಕ್ಕೆ ಕಟ್ಟಿಕೊಡುತ್ತಾಳೆ. ಜೊತೆಗೆನೇ ಈ ಸೀಮಿಯಾಟಿಕ್ ಸ್ಥಿತಿ, ಸ್ತ್ರೀ – ಪುರುಷರಿಬ್ಬರನ್ನು ಚಲನಶೀಲ, ಆನಂದದ ನೆಲೆಗೊಯ್ಯುವ ಸಂಗತಿ ಎಂದು ಹೇಳುತ್ತಾಳೆ.

## ೨.೧.೪ ಸ್ತ್ರೀವಾದಿ ಚಿಂತನಾ ಮಾದರಿಗಳು

ಇದುವರೆಗೂ ಕೆಲವು ಸ್ತ್ರೀವಾದಿಗಳ ಚಿಂತನೆಗಳನ್ನು, ಸ್ತ್ರೀವಾದದ ಪರಿಕಲ್ಪನೆಗಳನ್ನು ಗಮನಿಸಿದ್ದಾಯಿತು. ೨೦೦ ವರ್ಷಗಳ ಚರಿತ್ರೆಯನ್ನು ಹೊಂದಿದ ಸ್ತ್ರೀವಾದ ತನ್ನ ಭಿನ್ನ ಚಿಂತನಾಕ್ರಮ, ಕ್ರಿಯಾ ವಿಧಾನಗಳ ಮೂಲಕ ಸ್ತ್ರೀಯ ಬದುಕಿನಲ್ಲಿ ಹೊಸ ಸಂಚಲನವನ್ನು ಮೂಡಿಸಿರುವುದಂತೂ ವಾಸ್ತವ, ಪಾಶ್ಚಾತ್ಯ ಚಿಂತನೆಗಳು ತೃತೀಯ ರಾಷ್ಟ್ರವಾದ ಭಾರತದ ಹೆಣ್ಣುಮಕ್ಕಳ ಸಂದರ್ಭದಲ್ಲಿ ಎಷ್ಟು ಸೂಕ್ತ ಎಂಬೆಲ್ಲಾ ಆತಂಕ, ಅನುಮಾನಗಳು ಇದ್ದೇ ಇವೆ. ಜಾತಿ, ವರ್ಗ, ಜನಾಂಗ, ಅಕ್ಷರತೆ – ಅನಕ್ಷರತೆ, ಗ್ರಾಮೀಣ–ನಗರ ಇವುಗಳಲ್ಲಿ ಸ್ತ್ರೀ ಹಂಚಿ ಹೋಗಿದ್ದಾಳೆ. ಪ್ರತಿ ಭಿನ್ನ ಸಾಮಾಜಿಕ ಪರಿಸರಕ್ಕನುಗುಣವಾಗಿ ಸ್ತ್ರೀಯ ಸಮಸ್ಯೆಗಳು ಭಿನ್ನವಾಗಿರುತ್ತವೆ. ಪಾಶ್ಚಾತ್ಯ ಸ್ತ್ರೀವಾದವನ್ನು ಸಂಪೂರ್ಣವಾಗಿ ಅನುಸರಿಸದೆ, ತನ್ನದೇ ನೆಲೆಯಲ್ಲಿ ಸ್ತ್ರೀವಾದಗಳು ಇಂದು ಭಾರತದಲ್ಲೂ ಬೆಳೆಯುತ್ತಿವೆ, ಗಾಯತ್ರಿ ಚಕ್ರವರ್ತಿ, ಸ್ಪಿವಾಕ್, ಕುಂಕುಮ್ ಸಂಘೌರಿ, ಉಮಾ ಚಕ್ರವರ್ತಿ, ಮಧುಕೀಶ್ವರ ಮುಂತಾದ ಸ್ತ್ರೀವಾದಿಗಳು ಭಾರತದ ಸಂದರ್ಭದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಜೊತೆಗೆ ವಂದನಾಶಿವ, ಮಹಾಶ್ವೇತಾದೇವಿ, ಮೇಧಾ ಪಾಟ್ಕರ್, ಇಂದಿರಾ ಗೋಸ್ವಾಮಿ ಮುಂತಾದ ಮಹಿಳೆಯರು ಮಾನವಪರ ಚಳುವಳಿಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಈ ಎಲ್ಲ ಅಂಶಗಳ ಹೊರತಾಗಿಯೂ 'ಜ್ಯೂಲಿಯಟ್ ಮಿಷಲ್' ಹೇಳುವಂತೆ "ಎಲ್ಲ ಸಮಾಜಗಳೂ ಪುರುಷ ಪ್ರಧಾನ ಸಮಾಜಗಳೇ ಆಗಿರುವುದರಿಂದ ಹೆಣ್ಣು, ಪ್ರಪಂಚದ ಯಾವುದೇ ಮೂಲೆಯಲ್ಲಿ, ಯಾವುದೇ ಜಾತಿ, ಜನಾಂಗ, ವರ್ಗ, ವರ್ಣಗಳಿಗೆ ಸೇರಿದ್ದರೂ ಅವಳ ಸ್ಥಿತಿ ಒಂದೇ ಆಗಿರುತ್ತದೆ. ಅವಳು ಕರಿಯಳಾಗಿರಲಿ, ಬಿಳಿಯಳಾಗಲಿ, ಬಡವಳಾಗಲಿ, ಶ್ರೀಮಂತೆಯಾಗಲಿ, ವಿದ್ಯಾವಂತೆಯಾಗಲಿ, ಅವಿದ್ಯಾವಂತೆಯಾಗಲಿ, ಉದ್ಯೋಗಸ್ಥೆ, ನಿರುದ್ಯೋಗಸ್ಥೆಯಾಗಲಿ, ನಗರ ಹಳ್ಳಿಗಳಾಗಲಿ ಅವಳು ಪಿತೃಪ್ರಧಾನ ಮೌಲ್ಯವ್ಯವಸ್ಥೆಯಲ್ಲಿ, ಜೀವಿಸಿರುವವರೆಗೂ ಅವಳ ಸಮಸ್ಯೆಗಳು ಒಬ್ಬಳಿಂದ ಒಬ್ಬಳಿಗೆ ಭಿನ್ನವಾಗುವುದಿಲ್ಲ"[೨೨]. ಆದ್ದರಿಂದ ಎಲ್ಲ ಸ್ತ್ರೀವಾದಿಗಳು ಜಗತ್ತಿನಾದ್ಯಂತ ಇರುವ ಪಿತೃಪ್ರಧಾನ ಧೋರಣೆಗಳ ವಿರುದ್ಧ ಒಂದಾಗಿ ಚಳುವಳಿ ಮತ್ತು ತಾತ್ವಿಕ ನೆಲೆಯಲ್ಲಿ ಕೆಲಸ ಮಾಡಬೇಕಾದ ಅಗತ್ಯವಿದೆ.



**ಅಡಿಟಿಪ್ಪಣಿಗಳು**

೧. ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಎಚ್.ಎಸ್. ಶ್ರೀಮತಿ (ಅಪ್ರಕಟಿತ)
೨. ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ. ಮೀರಾ, ಪುಟ ೨
೩. ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ. ಮೀರಾ, ಪುಟ ೨
೪. ಸೆಕ್ಷುವಲ್ ಪಾಲಿಟಿಕ್ಸ್, ಕೇಟ್ ಮಿಲೆಟ್ (೧೯೬೮)
೫. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೯೫
೬. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಡಿ. ಮಂಗಳಾ ಪ್ರಿಯದರ್ಶಿನಿ, ಪುಟ ೧೧೬.
೭. ಭಾರತೀಯ ಸ್ತ್ರೀವಾದ, ಎನ್. ಮನು ಚಕ್ರವರ್ತಿ (ಸ), ಪುಟ ೨೨
೮. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೯೮
೯. ಸ್ತ್ರೀವಾದ, ಎಚ್.ಎಸ್. ಶ್ರೀಮತಿ ಪುಟ ೪೩
೧೦. ಸ್ತ್ರೀವಾದ, ಎಚ್.ಎಸ್. ಶ್ರೀಮತಿ ಪುಟ ೪೩
೧೧. ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಅಶ್ವಿನಿ ಧೋಂಗಡೆ ಅನು/ ವಿಠಲರಾವ್ ಗಾಯಕ್ವಾಡ್, ಪುಟ ೬೧
೧೨. ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ.ಮೀರಾ, ಪುಟ ೮
೧೩. ಭಾರತೀಯ ಸ್ತ್ರೀವಾದ, ಎನ್.ಮನು ಚಕ್ರವರ್ತಿ (ಸಂ), ಪುಟ ೧೦೪-೧೦೫
೧೪. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಡಿ. ಮಂಗಳಾ ಪ್ರಿಯದರ್ಶಿನಿ, ಪುಟ ೧೧೦.
೧೫. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಡಿ. ಮಂಗಳಾ ಪ್ರಿಯದರ್ಶಿನಿ, ಪುಟ ೧೧೩.
೧೬. ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ.ಮೀರಾ, ಪುಟ ೯
೧೭. ಭಾರತೀಯ ಸ್ತ್ರೀವಾದ, ಎನ್.ಮನು ಚಕ್ರವರ್ತಿ (ಸಂ), ಪುಟ ೭
೧೮. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ತೇಜಸ್ವಿನಿ ನಿರಂಜನ (ಸಂ), ಪುಟ ೨೩
೧೯. ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್.ಜಿ.ಮೀರಾ, ಪುಟ ೧೨
೨೦. ಭಾರತೀಯ ಸ್ತ್ರೀವಾದ, ಎನ್.ಮನು ಚಕ್ರವರ್ತಿ (ಸಂ), ಪುಟ ೧೩-೧೪
೨೧. ದ ಲಾಫ್ ಆಫ್ ಮೆಡುಸಾ, ಹೆಲೆನ್ ಸಿಕ್ಸೂ cixous.htm.
೨೨. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ; ಡಿ. ಮಂಗಳಾ ಪ್ರಿಯದರ್ಶಿನಿ, ಪುಟ ೮೩.

## ಅಧ್ಯಾಯ – ಎರಡು

### ಭಾಗ – ೨

## ಭಾಗ–೨

### ೨.೨.೧ ಕನ್ನಡ ಸಾಹಿತ್ಯದಲ್ಲಿ ಮಹಿಳಾ ಅಭಿವ್ಯಕ್ತಿಯ ಚಾರಿತ್ರಿಕ ನೆಲೆಗಳು

ಮಹಿಳೆಯ ಅಭಿವ್ಯಕ್ತಿಯ ನೆಲೆಗಳನ್ನು ಗುರುತಿಸುವ ಸಂದರ್ಭದಲ್ಲಿ ಅವಳ ಅಭಿವ್ಯಕ್ತಿ ದಾಟಿ ಬರಬೇಕಾದ ಅಗ್ನಿದಿವ್ಯಗಳನ್ನು ಗಮನಿಸುವುದು ಮುಖ್ಯ. ಪ್ರತಿಭೆಯ ಕುರಿತು 'ಕಾವ್ಯಮೀಮಾಂಸೆ'ಯಲ್ಲಿ ಹಲವು ಮಾತುಗಳಿವೆ.

"ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾಮತಾ"

"ಪ್ರಜ್ಞಾ ನವನವೋಲ್ಲೇಖ ಶಾಲಿನೀ ಪ್ರತಿಭಾಮತಾ"

"ಪ್ರತಿಭಾ ಅಪೂರ್ವ ವಸ್ತು ನಿರ್ಮಾಣ ಕ್ಷಮಾಪ್ರಜ್ಞಾ"[೧]

"ಪ್ರತಿಭೆ ಎನ್ನುವುದೊಂದು ಪ್ರಜ್ಞೆ. ಆ ಸ್ಥಿತಿಯಲ್ಲಿ ಮನಸ್ಸಿಗೆ ಹೊಸ ಹೊಸ ಅರ್ಥಗಳು ಹೊಳೆಯುತ್ತವೆ. ಹಾಗೇ ಹೊಳೆದ ಆ ಹೊಸ ಹೊಸ ಅರ್ಥಗಳು, ಹೊಸ ಹೊಸ ಮಾತುಗಳಲ್ಲಿ ಉಲ್ಲೇಖಿತವಾಗುತ್ತವೆ. ಹೀಗೆ ಅಪೂರ್ವವಾದ ವಸ್ತುವನ್ನು ನಿರ್ಮಾಣ ಮಾಡುವ ಸಾಮರ್ಥ್ಯವೇ ಪ್ರತಿಭೆ ಎನ್ನುತ್ತದೆ ಕಾವ್ಯಮೀಮಾಂಸೆ. ಮುಂದುವರೆದು 'ರಾಜಶೇಖರ'ನು ತನ್ನ 'ಕಾವ್ಯಮೀಮಾಂಸೆ' ಕೃತಿಯಲ್ಲಿ "ದೇಹ ಮನಸ್ಸುಗಳ ಸ್ವಸ್ಥತೆ, ಪ್ರತಿಭೆ, ಅಭ್ಯಾಸ, ಭಕ್ತಿ, ವಿದ್ವಾಂಸರೊಂದಿಗೆ ಮಾತುಕತೆ, ಪಾಂಡಿತ್ಯ, ಧೃಡವಾದ ಜ್ಞಾಪಕಶಕ್ತಿ, ಉತ್ಸಾಹ ಇವೆಂಟೂ ಕವಿತ್ವಕ್ಕೆ ತಾಯಿಯರು"[೨] ಎಂದು ಪಟ್ಟಿಹಾಕುತ್ತಾನೆ.

ಈ ಎಲ್ಲ ಅಂಶಗಳೊಂದಿಗೆ ತನಗೆ ದಕ್ಕುವ ಅನುಭವವನ್ನು ಭಾಷೆಯ ಮಾಧ್ಯಮದ ಮುಖಾಂತರ ಸಾಹಿತ್ಯವಾಗಿಸುವ ಪ್ರಕ್ರಿಯೆ ನಡೆಯುತ್ತದೆ. ಸೃಜನಶೀಲತೆ ಎಂಬುದು ಒಳಗಿರುವ ಸಾಮರ್ಥ್ಯ ಹೌದಾದರೂ, ಅದಕ್ಕೆ ಹೆಚ್ಚು ಸೂಕ್ಷ್ಮತೆಗಳು ದಕ್ಕಬೇಕಾದರೆ ಶಿಕ್ಷಣ, ತರಬೇತಿ, ಹೆಚ್ಚಿನ ಓದು, ವಿದ್ವಾಂಸರೊಂದಿಗೆ ಚರ್ಚೆ ಇವುಗಳ ಅಗತ್ಯ ಉಂಟಾಗುತ್ತದೆ. ಈ ಎಲ್ಲ ಸಾಧ್ಯತೆಗಳಿಂದ ಸೃಜನಶೀಲತೆ ಏಕಾಂತದಲ್ಲಿ, ಧ್ಯಾನಸ್ಥ ಸ್ಥಿತಿಯಲ್ಲಿ ನಿರ್ಮಾಣಗೊಂಡು ಭಾಷೆಯಲ್ಲಿ ಆಕಾರ ಪಡೆದುಕೊಳ್ಳುತ್ತದೆ.

ಈ ಮೇಲಿನ ಹೇಳಿಕೆಗಳನ್ನು ಗಮನಿಸಿದರೆ, ಯಾರಲ್ಲಿ ಸಾಮರ್ಥ್ಯವಿದೆಯೋ, ಪೂರಕವಾದ ಎಲ್ಲ ಅವಕಾಶಗಳಿವೆಯೋ, ಅವರಿಂದ ಅಭಿವ್ಯಕ್ತಿ ಸಾಧ್ಯ ಎಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಆದರೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಈ ಎಲ್ಲ ಸಾಧ್ಯತೆಗಳು ಸಾಧ್ಯವಾಗದಿರುವ ಸ್ಥಿತಿಯ ನಿರ್ಮಾಣ, ಮಹಿಳೆಯ ಸಾಮಾಜಿಕತೆಯು ಅವಳಿಗೆ

ಒದಗಿಸಿದೆ. ಲಿಂಗಬೇಧವು ಹೆಣ್ಣಿನ ಬದುಕಿನ ಎಲ್ಲ ಹಂತಗಳನ್ನು ಆವರಿಸಿಕೊಂಡಿರುವ ಸಂಗತಿ. ಅದು ಅವಳ ಸೃಜನತೆಯನ್ನು ಹೊರತಾಗಿಸಿಲ್ಲ. ಹೆಣ್ಣಿನ ಬದುಕನ್ನು ಬಹು ದೊಡ್ಡದಾಗಿ ಆವರಿಸಿಕೊಂಡಿರುವ ಸಂಗತಿ ಎಂದರೆ ಅವಳ ಗೃಹಿಣಿತ್ವ. ಇದನ್ನೇ 'ಬೆಟ್ಟಿ ಫ್ರಿಡನ್' ತನ್ನ 'ದ ಫೈಮಿನೈನ್ ಮಿಸ್ಟಿಕ್' ಕೃತಿಯಲ್ಲಿ ಬಹಳ ವಿವರವಾಗಿ 'ಹೆಣ್ಣಿನ ಗೊತ್ತಿಲ್ಲದಿರುವ ಸಮಸ್ಯೆ' ಎನ್ನುವುದನ್ನು ಹೇಳುತ್ತಾ ಮಹಿಳೆಯ ಬದುಕನ್ನೇ ಗೃಹಿಣಿತ್ವ ಕುಗ್ಗಿಸಿರುವ ಸಂಗತಿಗಳನ್ನು ಸೋದಾಹರಣವಾಗಿ ಮಂಡಿಸುತ್ತಾಳೆ. ತಾಯಿ, ಹೆಂಡತಿ, ಮಗಳು – ಇವು ಅವಳ ಸ್ಥಿರಮಾದರಿಗಳು. ಇವುಗಳಾಚೆ ಅಸ್ತಿತ್ವವೇ ಇಲ್ಲದ ಸ್ಥಿತಿ ಅವಳದು. ತನ್ನ ಆಚೆ ಇರುವ ಲೋಕದ ಗ್ರಹಿಕೆ ಅವಳಿಂದ ಖಂಡಿತಾ ಸಾಧ್ಯವಿಲ್ಲ. ಇಂಥ ದೊಡ್ಡ ವಿಸ್ಮೃತಿ ಅವಳಿಗೆ ಒದಗಿರುವಾಗ ಅವಳ ಲೋಕಾನುಭವ ವಿಸ್ತಾರಗೊಳ್ಳುವ ಸಾದ್ಯತೆಗಳೇ ಇಲ್ಲ. ಅವಳ ಸಮಯವೂ ಅವಳದಾಗಿರದೇ ಬೇರೆಯವರದೇ ಆಗಿರುತ್ತದೆ. ಇಂಥ ಸಂದರ್ಭದಲ್ಲಿ ಅವಳದು 'ತನು ನಿನ್ನದು ಮನ ನಿನ್ನದು' ಎನ್ನುವ ಸ್ಥಿತಿ. ಹೀಗಿರುವ ಸಂದರ್ಭದಲ್ಲಿ ಅವಳಿಗೆ ಏಕಾಂತ, ಧ್ಯಾನಸ್ಥ ಸ್ಥಿತಿ ದಕ್ಕುವ ಸಾಧ್ಯತೆಯೇ ಕಡಿಮೆ, ಹಾಗಿರುವಾಗಲೂ ಅವಳಿಗದು ದಕ್ಕಿದರೂ ಭಾಷೆಯಲ್ಲಿ ಅದನ್ನು ಹರಿಯಬಿಡುವ ಸಂದರ್ಭದಲ್ಲಿ ತನ್ನದಲ್ಲದ ಭಾಷೆಯಲ್ಲಿ ತನ್ನ ಮಾತುಗಳನ್ನು ಹೇಳಬೇಕಾದ ದುಸ್ತರತೆ ಒದಗಿಬರುತ್ತದೆ. ಹಾಗೊಂದು ವೇಳೆ ಅದು ಭಾಷೆಯಲ್ಲಿ ಅಭಿವ್ಯಕ್ತಿಗೊಂಡರೂ ಮುಂದೆ ಅದು ಪಿತೃ ಪ್ರಧಾನ ವಿಮರ್ಶೆಗೆ ಎದುರಾದಾಗ, ಸಿದ್ಧ ಮಾನದಂಡಗಳನ್ನು ಎದುರಿಸಿ ನಿಲ್ಲಬೇಕಾಗುತ್ತದೆ, ಆಗ ಮಹಿಳೆಯ ಅಭಿವ್ಯಕ್ತಿಯನ್ನು ಎರಡನೆಯ ದರ್ಜೆಯದೆಂದು ಪರಿಗಣಿಸಿ ಅದನ್ನು ತಿರಸ್ಕರಿಸುವ ಹುನ್ನಾರ ನಡೆಯುತ್ತದೆ. 'ಅಡಿಗೆಮನೆಯ ಸಾಹಿತ್ಯ'ವೆಂದು ತಿರಸ್ಕರಿಸಿ ಅಪಮೌಲ್ಯ-ಗೊಳಿಸಲಾಗುತ್ತದೆ. ಮಹಿಳೆಯು ತನ್ನ ಅನುಭವಕ್ಕೆ ದಕ್ಕುವ ಲೋಕದಿಂದಲೇ ತನ್ನ ಕೃತಿಗೆ ವಸ್ತುವನ್ನು ಆಯ್ದುಕೊಳ್ಳುತ್ತಾಳೆ. ಅವಳ ಜಗತ್ತು ಮನೆಯೊಳಗಿನ ಜಗತ್ತು. "ಈ ವಸ್ತುಜಗತ್ತಿನಲ್ಲಿ ಗಂಡ, ಮಕ್ಕಳು ಎಂಬ ಸಂಬಂಧಗಳನ್ನು ಸುತ್ತುವರೆದಂತೆಯೇ ಅವಳ ಭಾವ ಜಗತ್ತು ಕೂಡ ವರ್ತಿಸಬೇಕಾಗುತ್ತದೆ. ಮಹಿಳೆಗೆ ದತ್ತವಾಗುವ ವಸ್ತು ಜಗತ್ತು ಹಾಗೂ ಭಾವ ಜಗತ್ತುಗಳೆರಡೂ ತೀರಾ ಪರಿಮಿತ ವ್ಯಾಪ್ತಿಯವಾದ್ದರಿಂದ ಕೃತಿ ರಚನೆಗಾಗಿಯೇ ಪ್ರತ್ಯೇಕವಾಗಿ ಸಾರ್ವಜನಿಕ ವ್ಯಾಪ್ತಿಯ ವೈವಿಧ್ಯಮಯ ವಸ್ತುಗಳೇನೂ ಅವಳಿಗೆ ಒದಗಿ ಬರಲಾರವು".[೨]

ವಾಸ್ತವ ಹೀಗಿರುವ ಸಂದರ್ಭದಲ್ಲಿ ನಾವು ಮಹಿಳೆಯ ಅಭಿವ್ಯಕ್ತಿಯ ನೆಲೆ-ಬೆಲೆಗಳನ್ನು ಅವಳ ಸಾಮಾಜಿಕತೆಯ ಹಿನ್ನೆಲೆಯಲ್ಲಿ ಗುರುತಿಸಬೇಕೇ ಹೊರತು ಶಿಕ್ಷಣ, ಅದರಿಂದೊದಗುವ ವಿಮರ್ಶೆಯ ಮಾನದಂಡಗಳಿಂದ ಅಲ್ಲ. ಏಕೆಂದರೆ ಪಿತೃಪ್ರಧಾನತೆಯ ಹಿನ್ನೆಲೆಯಲ್ಲಿ ಈ ಸಂಗತಿಗಳೂ ಕೂಡಾ ಲಿಂಗಬೇಧದಿಂದಲೇ ಕೂಡಿರುತ್ತವೆ ಎಂಬುದು ವಾಸ್ತವ. ಮಹಿಳೆಯ ಕೃತಿಯ ಸೋಲನ್ನು ವೈಯಕ್ತಿಕ ನೆಲೆಯಲ್ಲಿ ಗುರುತಿಸದೆ ಸಾಮಾಜಿಕ ನೆಲೆಯಲ್ಲಿ ಗುರುತಿಸಬೇಕಾಗುತ್ತದೆ.

ಮಹಿಳೆಯ ಅಭಿವ್ಯಕ್ತಿಯ ಹಾದಿಯಲ್ಲಿ ಇಷ್ಟೆಲ್ಲಾ ಅಡ್ಡಗಾಲುಗಳು ಇರುವುದರಿಂದಲೇ, ಬರಹದ ಸಾಹಸಕ್ಕೆ ಕೈ ಹಾಕುವುದು ಸುಲಭಸಾಧ್ಯವಲ್ಲ. ಹಾಗೊಂದು ವೇಳೆ ಪ್ರಯತ್ನಿಸಿದರೂ ಅವು ಬೆಳಕಿಗೆ ಬಾರದಿರುವುದು ಸತ್ಯದ ಸಂಗತಿ. ಭಾರತೀಯ ಸಾಹಿತ್ಯಕ್ಕೆ ೩೫೦೦ ವರ್ಷಗಳ ಸುದೀರ್ಘ ಇತಿಹಾಸವಿದ್ದರೂ ಕ್ರಿ.ಶ. ೧೨ನೆಯ ಶತಮಾನದ ತನಕ ಸ್ತ್ರೀದನಿಗಳು ಕೇಳಿ ಬರದಿರುವುದು, ಚರಿತ್ರೆಯಿಂದ ಅವಳು ಹೊರಗಿರುವುದಕ್ಕೆ ಸಾಕ್ಷಿಯಾಗಿದೆ. ಇತ್ತೀಚಿನ ಅಧ್ಯಯನಗಳು, ಹೊಸ ತಾತ್ವಿಕತೆಯ ಹಿನ್ನೆಲೆ ಇದುವರೆಗೂ ಗಮನಿಸದೆ ನಿರ್ಲಕ್ಷ್ಯ ಮಾಡಿದ ಸಂಗತಿಗಳನ್ನು ಮುಖ್ಯ ಮಾಡಿಕೊಳ್ಳುತ್ತದೆ. ಮಹಿಳೆಯ ಅಭಿವ್ಯಕ್ತಿಯ ಮುಂಚಿನ ಸಂಗತಿಗಳನ್ನು, ಅಭಿವ್ಯಕ್ತಿಯ ಸಂದರ್ಭಗಳನ್ನು, ಅಭಿವ್ಯಕ್ತಿಯ ನಂತರದ ಸನ್ನಿವೇಶಗಳನ್ನು, ಮಹಿಳಾ ಓದನ್ನು - ಹೊಸ ಕ್ರಮದಲ್ಲಿ ಗ್ರಹಿಸುವ ಅರಿವು ಸಾಧ್ಯವಾದುದ್ದು, ಸ್ತ್ರೀವಾದಿ ಚಿಂತನೆಯಿಂದ. ಸ್ತ್ರೀ ಬದುಕಿನ ಸತ್ಯಗಳನ್ನು ಅವಳ ಬದುಕಿನ ಅನುಭವ, ಗ್ರಹಿಕೆಗಳಿಂದ ಗ್ರಹಿಸುವ ಕ್ರಮ, ಅಸ್ತಿತ್ವವನ್ನು ಗುರುತಿಸುವ ಕ್ರಮವೂ ಆಗಿರುತ್ತದೆ. ಈ ಗ್ರಹಿಕೆಯ ದೃಷ್ಟಿಕೋನದ ಅಧ್ಯಯನ ಸ್ತ್ರೀ - ಪುರುಷ ಸಾಹಿತ್ಯವನ್ನು ಒಳಗು ಮಾಡಿಕೊಳ್ಳುತ್ತದೆ.

ಸ್ತ್ರೀವಾದಿ ವಿಮರ್ಶೆಯಲ್ಲಿ ಚರಿತ್ರೆಯ ಪುನರ್ ನಿರ್ಮಾಣ ತುಂಬಾ ಮುಖ್ಯವಾಗಿ ಪರಿಗಣಿತವಾಗಿರುವ ಅಂಶ. ಅಸಂಪೂರ್ಣ ದಾಖಲೆಯಾಗಿರುವ ಚರಿತ್ರೆ, ಪಿತೃಪ್ರಧಾನ ಗ್ರಹಿಕೆಯಿಂದ ಮುಕ್ತವಾಗಿಲ್ಲ ಎಂಬ ಸತ್ಯವನ್ನು ಮನಗಂಡ ಸ್ತ್ರೀವಾದಿಗಳು, ವಿಶೇಷವಾಗಿ ಫ್ರೆಂಚ್ ಸ್ತ್ರೀವಾದಿಗಳಾದ 'ಆರಲೆಟ್ ಫಾರ್ಜ್', 'ಮಿಶೆಲ್ ಪೆರಾಟ್', 'ಬೆನಿವೀನ್ ಫ್ರೇಯ್ಸ್' ಮುಂತಾದವರು ಸಾಕಷ್ಟು ಈ ದಿಸೆಯಲ್ಲಿ ಕೆಲಸ ಮಾಡಿದರು. ಸ್ತ್ರೀವಾದಿ ಚರಿತ್ರೆಕಾರರ ಪ್ರಯತ್ನವು ಕೆಳಕಂಡ ಕಾರಣಗಳಿಗಾಗಿ ಮುಖ್ಯವಾಗಿದೆ.

೧. “ಸಾಂಸ್ಥಿಕ ಹಾಗೂ ಉದ್ಯೋಗಾಧಿಕಾರಗಳಲ್ಲಿ ಸೇರ್ಪಡೆಯಾಗದೆ, ಉದ್ದೇಶಪೂರ್ವಕ ನಿರ್ಲಕ್ಷಕ್ಕೆ ಒಳಗಾದ ಅಧಿಕೃತವೆನಿಸಿದ ಚರಿತ್ರೆಗಳಲ್ಲಿ ಹಾಗೂ ಮಹಿಳೆಯರ ಬದುಕನ್ನು ಸ್ತ್ರೀವಾದಿ ಚರಿತ್ರೆಯು ಪುನಃ ಶೋಧಿಸುತ್ತದೆ.

೨. ನಿರ್ಲಕ್ಷಿತ ಹಾಗೂ ಮೇಲುಗಾರಿಕೆಯ ನೆಲೆಯಿಂದ ಹೊರತುಪಡಿಸಿ ಮಹಿಳೆಯ ಬದುಕನ್ನು ವಿಶ್ಲೇಷಿಸುತ್ತದೆ.

೩. ನಿರ್ಲಕ್ಷಿತ, ದಮನಕ್ಕೀಡಾದ ಮಹಿಳೆಯ ಬದುಕನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡು ಮಹಿಳೆಯರನ್ನು ಸದಾ ಶೋಷಿತ ನೆಲೆಯಲ್ಲೇ ಇರುವ ವರ್ಗವೆಂದು ಭಾವಿಸಲಾಗುತ್ತದೆ. ಆದ್ದರಿಂದ ಗತಕಾಲದಲ್ಲಿನ ಮಹಿಳೆಯರ ಇತ್ಯಾತ್ಮಕ ಹಾಗೂ ಶಕ್ತ ಬದುಕನ್ನು ಗುರುತಿಸುವ, ಶೋಧಿಸುವ ಕೆಲಸವನ್ನು ಮುಖ್ಯವೆಂದು ಭಾವಿಸುವ ಸ್ತ್ರೀವಾದಿ ಮಹಿಳಾ ಚರಿತ್ರೆ ಹೊಸ ಇತಿಹಾಸವನ್ನು ನಿರುಪಿಸುತ್ತದೆ”.[೪]

ಸ್ತ್ರೀವಾದಿ ವಿಮರ್ಶೆಗೆ ಮಹಿಳಾ ಸಾಹಿತ್ಯ ಪರಂಪರೆಯಲ್ಲಿ ಅಮಿತವಾದ ಆಸಕ್ತಿಯಿದೆ. ವಿಜಯಾದಬ್ಬೆಯವರು ಸರಿಯಾಗೇ ಗುರುತಿಸಿರುವಂತೆ “ಇಂಥದೊಂದು ಪರಂಪರೆಯ ಪ್ರಜ್ಞೆ ಹೂತುಹೊದ ಸ್ತ್ರೀಯರ ಆತ್ಮವಿಶ್ವಾಸವನ್ನು ಎತ್ತಬಹುದು. ನ್ಯಾಯ ಪಡೆಯದ ಲೇಖಕಿಯರು ನ್ಯಾಯ ಪಡೆಯಬಹುದು. ಪರಂಪರೆಯ ಗುಣ ಮಿತಿಗಳು ಮುಂದಿನ ದಾರಿಯ ಮೇಲೇ ಬೆಳಕು ಚೆಲ್ಲಬಹುದು. ಇಂದಿನ ಸ್ತ್ರೀಯನ್ನು ಅರ್ಥಮಾಡಿಕೊಳ್ಳಲು ನೆರವಾಗಬಹುದು ಹೀಗೆ ಪರಂಪರೆಯ ತಿಳುವಳಿಕೆಗೆ ರಚನಾತ್ಮಕ ಪಾತ್ರವಿದೆ’’.[೫]

ಪಾಶ್ಚಾತ್ಯ ಸ್ತ್ರೀವಾದಿಗಳು, ಭಾರತೀಯ ಸ್ತ್ರೀವಾದಿಗಳು ತಮ್ಮ ನಿರಂತರ ಪ್ರಯತ್ನದಿಂದ ಸ್ತ್ರೀ ಪರಂಪರೆಯ ಶೋಧದಲ್ಲಿ ತೊಡಗಿದ್ದಾರೆ. ಇಂಥದೊಂದು ಯತ್ನ ಮಾಡಿದ ‘ಸೂಸಿ ಥಾರೂ’ ಮತ್ತು ‘ಕೆ. ಲಲಿತಾ’ ಅವರು ‘ವಿಮೆನ್ ರೈಟಿಂಗ್ ಇನ್ ಇಂಡಿಯಾ’ದ ಎರಡು ಬೃಹತ್ ಆವೃತ್ತಿಗಳನ್ನು ಹೊರತಂದಿದ್ದಾರೆ. ತಮ್ಮ ಬರವಣಿಗೆಯ ಮುನ್ನುಡಿಯಲ್ಲಿ ಸಂಪಾದಕರು ಬಹಳ ದೀರ್ಘವಾಗಿ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಶೋಧಿಸುವ ಕಷ್ಟವನ್ನು ತೋಡಿಕೊಂಡಿದ್ದಾರೆ. ತಮ್ಮ ‘ಚಕ್ರಾಧಿಪತ್ಯ, ರಾಷ್ಟ್ರ ಮತ್ತು ಸಾಹಿತ್ಯಿಕ ಪಠ್ಯ’ ಈ ಲೇಖನದಲ್ಲಿ ತೆಲಗು ಕೃತಿ ‘ರಾಧಿಕ ಸಾಂತ್ವನಂ’ ಪಠ್ಯದ ಪಾಡನ್ನು ವಿವರಿಸುತ್ತಾರೆ. ಕೃತಿಯನ್ನು ರಚನೆ ಮಾಡಿದ ಮುದ್ದು ಪಳನಿಯು ರಾಧೆಯನ್ನು ಸಂಕೀರ್ಣವಾದ, ಮನಸಿಕವಾಗಿ ಪರಿಪೂರ್ಣಳಾದ ಹೆಣ್ಣಾಗಿ ಚಿತ್ರಿಸಿದ್ದಾಳೆ. ಅವಳು ಇಳಾ

ಮತ್ತು ಕೃಷ್ಣರ ಪ್ರಣಯಕ್ಕೆ ಪ್ರೋತ್ಸಾಹ ನೀಡುತ್ತಾಳೆ. ಆದರೆ ತಾನೇ ಕೃಷ್ಣನನ್ನು ಪ್ರೀತಿಸುತ್ತಾಳೆ, ಅವನ ಅಗಲಿಕೆಯನ್ನು ತಡೆಯಲಾರಳು. ಅವಳು ಕೃಷ್ಣನನ್ನು ನಿಂದಿಸುತ್ತಾಳೆ. ಅವನು ತನ್ನನ್ನು ನಿರ್ಲಕ್ಷಿಸುತ್ತಿರುವನೆಂದು ಆಪಾದಿಸುತ್ತಾಳೆ. ತನ್ನೊಂದಿಗಿನ ಸಂಬಂಧವನ್ನು ಮುಂದುವರಿಸಬೇಕೆಂದು ಅಧಿಕಾರವಾಣಿಯಿಂದ ಕೇಳುತ್ತಾಳೆ. ಕೃಷ್ಣನು ಅವಳ ಕರೆಗೆ ಓಗೊಡುತ್ತಾನೆ. ಮರುಳು ಮಾಡುವ ಸಿಹಿಮಾತುಗಳಿಂದ, ಪ್ರೀತಿಯ ಆಲಿಂಗನಗಳಿಂದ ಅವಳನ್ನು ಸಮಾಧಾನ ಮಾಡುತ್ತಾನೆ. ಇಪ್ಪತ್ತನೆಯ ಶತಮಾನದಲ್ಲಿಯೂ ಕ್ರಾಂತಿಕಾರಕವಾಗಿ, ಮನ ಕೆರಳಿಸುವಂತೆ ಕಾಣಿಸುವ ಕೆಲವು ಲಕ್ಷಣಗಳು ಇಲ್ಲಿ ಕಂಡುಬರುತ್ತದೆ; ಲೈಂಗಿಕ ಸುಖವನ್ನು ಕುರಿತು ಆವರೆಗೆ ಎಲ್ಲರೂ ಒಪ್ಪಿಕೊಂಡಿದ್ದ ಅ-ಸಮಾನ ನೆಲೆಗಳನ್ನು ಈ ಕೃತಿಯು ದಿಟ್ಟವಾಗಿ ಆತ್ಮವಿಶ್ವಾಸದೊಂದಿಗೆ ಪ್ರಶ್ನಿಸುತ್ತದೆ. ಹೆಣ್ಣಿನಲ್ಲಿಯೂ ಲೈಂಗಿಕ ಬಯಕೆಗಳಿರುವುದು ಸಹಜವೆಂದು ಸಾರುತ್ತದೆ. ಅಂಥ ಸುಖವನ್ನು ಪಡೆಯುವುದು ಹೆಣ್ಣಿನ ಹಕ್ಕು ಎಂದು ಘೋಷಿಸುತ್ತದೆ.

ಹೀಗೆ ಸಾಹಿತ್ಯಿಕ ಪಠ್ಯವಾಗಿ, ಸಾಂಸ್ಕೃತಿಕ ಪಠ್ಯವಾಗಿ ಹೆಣ್ಣಿನ ಒಳ-ಆಶಯಗಳಿಗೊಂದಿಷ್ಟು ದನಿ ನೀಡುವ ಕೃತಿಯನ್ನು ಮುಂದಿನ ಶತಮಾನಗಳಲ್ಲಿ ಯಾಕೆ ನಿರಾಕರಿಸಲಾಯಿತು ಎಂಬ ಪ್ರಶ್ನೆ ಏಳುತ್ತದೆ. ಬ್ರಿಟಿಷ ಪ್ರಭುತ್ವ, ಪುರೋಹಿತಶಾಹಿತ್ವ, ಪುರುಷಶಾಹಿತ್ವ ಎಲ್ಲ ಒಟ್ಟಾಗಿ ಸೇರಿ, ಹೆಣ್ಣಿನ ಸಣ್ಣ ಪ್ರಮಾಣದ ದನಿಯನ್ನು ಅಶ್ಲೀಲ ಎಂಬ ಹಣೆಪಟ್ಟಿಯೊಂದಿಗೆ ಉಡುಗಿಸಿದ ರಾಜಕೀಯವನ್ನು ನಾವು ಮನಗಾಣಬೇಕಾಗಿದೆ. ಇದೇ ನಿಲುವೇ ಬೇರೆ ಬೇರೆಯ ಸ್ವರೂಪಗಳಲ್ಲಿ ಮಹಿಳೆಯರ ಸಾಹಿತ್ಯ ಸೃಷ್ಟಿಗೆ ಅಡ್ಡಿಯನ್ನೊಡ್ಡಿಸಿದ್ದನ್ನು ನಾವು ಕನ್ನಡ ಸಾಹಿತ್ಯದ ಸಂದರ್ಭದಲ್ಲೂ ಗುರುತಿಸಬಹುದಾಗಿದೆ.

ಅಕ್ಕಮಹಾದೇವಿಯನ್ನು ಮೊದಲ ಕವಿಯತ್ರಿ ಎಂದು ಸಾಹಿತ್ಯ ಚರಿತ್ರೆಕಾರರು ಗುರುತಿಸುತ್ತಾರೆ. ದೊರೆತ ದಾಖಲೆಗಳ ಪ್ರಕಾರ ಇದು ಸತ್ಯವಾದ ಮಾಹಿತಿ ಕೂಡಾ. ರಂ.ಶ್ರೀ. ಮುಗುಳಿಯವರ ಸಾಹಿತ್ಯ ಚರಿತ್ರೆಯಲ್ಲಿ ಅಕ್ಕನಿಗಿಂತ ಮೊದಲನೆಯವಳಾಗಿ 'ಕಂತಿ'ಯ ಪ್ರಸ್ತಾಪ ಬರುತ್ತದೆ.

ನಾಗಚಂದ್ರನ ಸಮಕಾಲೀನನಳಾದ ಕಂತಿಯನ್ನು ೧೩ನೆಯ ಶತಮಾನದ 'ಬಾಹುಬಲಿ' ತನ್ನ 'ನಾಗಕುಮಾರ ಚರಿತೆ'ಯಲ್ಲಿ 'ಅಭಿನವ ವಾಗ್ದೇವಿ' ಎಂದಿದ್ದಾನೆ. ದೇವಚಂದ್ರನು ತನ್ನ 'ರಾಜಾವಳಿ ಕಥೆ' (೧೮೩೮)ಯಲ್ಲಿ "ದೋರರಾಯನ ಆಸ್ಥಾನದ

ಕನ್ನಡ ಸಂಸ್ಕೃತ ಮಹಾಕವಿಗಧಿಪಂ ಪಂಪಕವಿಯಂ ಕಳುಹಿಲ್ ಆತಂ ಒಂದು ವಿದ್ಯೆಯಿಂ ಸಾವಿರ ಪ್ರಶ್ನೆಯಂ ಕೇಳಲ್ ಉತ್ತರಮಂ ಕುಡುಲ್ ಆಕೆಯಂ ರಾಜಸಭೆಗೆಯ್ದಿಸಿ ವಿದ್ವತ್ಸಮೂಹದೊಳ್ ಅಧಿಕ ಕವಿಶ್ವರಿಯಾದಳ್' ಎಂಬ ವಿವರಣೆ ಇದೆ. 'ಕಂತಿ ಹಂಪನ ಸಮಸ್ಯೆಗಳು' ಎಂಬ ಹೆಸರಿನಲ್ಲಿ ದೊರಕಿರುವ ಪದ್ಯಗಳು ಈಕೆಯ ಪ್ರತಿಭೆಯ ಸಾಕ್ಷಿಯಾಗಿವೆ. ಆದರೆ ಈಕೆಯ ಪ್ರತಿಭೆಗೆ ಹಿನ್ನಲೆಯಾಗಿ ಇರುವ ಕತೆ ಮಹಿಳೆಯ ಸೃಜನಶೀಲತೆಯ ಬಗ್ಗೆ ಇರುವ ಪಾರಂಪರಿಕ ನಂಬಿಕೆಯನ್ನು ಧೃಡಪಡಿಸುವಂತಿದೆ. 'ಕನ್ನಡ ಸಾಹಿತ್ಯ ಸಮೀಕ್ಷೆ'ಯಲ್ಲಿ 'ಜಿ.ಎಸ್. ಶಿವರುದ್ರಪ್ಪ'ನವರು ಉಲ್ಲೇಖಿಸುವ ಕತೆಯಂತೆ 'ಮತಿಪ್ರಕಾಶ' ಮಾಡುವ ಜ್ಯೋತಿಷ್ಮತಿ ತೈಲವನ್ನು ಒಂದು ಕುಡಿಕೆ ಕುಡಿದು ನಿಂತ ನಿಲುವಿನಲ್ಲೆ ಕವಿತ್ವವನ್ನು ಹೇಳಲು ಶುರು ಮಾಡಿದಳಂತೆ. ಇಂಥ ಕತೆಗಳ ನಿರ್ಮಾಣದ ಹಿಂದಿರುವ ಮನಸ್ಥಿತಿಗಳನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಅಲ್ಲದೆ ಇಡಿಯ ಸಾಹಿತ್ಯ ಚರಿತ್ರೆಯಲ್ಲಿ ಕವಿಯ ಹೆಸರು ಸಿಕ್ಕಿದರೂ ಅವನ ತಲಸ್ಪರ್ಶ ಶೋಧ ಮಾಡಿ ಹೊರತೆಗೆದು ಸಾಹಿತ್ಯ ಚರಿತ್ರೆಯನ್ನು ನಿರ್ಮಾಣ ಮಾಡಿರುವ ಸಂದರ್ಭದಲ್ಲಿ ಸ್ತ್ರೀಯರ ಸಾಹಿತ್ಯವನ್ನು ದಾಖಲು ಮಾಡುವಲ್ಲಿ ಇದೇ ಪರಿಶ್ರಮವನ್ನು ತೋರಲಿಲ್ಲ ಎಂಬುದು ಸತ್ಯ. ಈ ಕುರಿತಂತೆ ಸೂಸಿ ಥಾರೂ, ಕೆ. ಲಲಿತಾರವರು ಭಾರತೀಯ ಸ್ತ್ರೀ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಾತನಾಡಿದರೆ, ಕನ್ನಡದ ಸಂದರ್ಭದಲ್ಲಿ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯ ಪ್ರಸ್ತಾವನೆಯಲ್ಲಿ ಎಚ್.ಎಸ್. ಶ್ರೀಮತಿಯವರು ಈ ಕುರಿತು ದೀರ್ಘ ಚರ್ಚೆಯನ್ನು ಮುಂದಿಡುತ್ತಾರೆ.

ಆಳಿಸಿಕೊಳ್ಳುವ ವರ್ಗದ ಚರಿತ್ರೆಯನ್ನು ದಮನಮಾಡಿ ಅವರನ್ನು ಚರಿತ್ರಾಹೀನರಾಗಿ ಮಾಡುವುದು ಆಳುವ ವರ್ಗದ ಒಂದು ಪ್ರಬಲ ಹುನ್ನಾರ. ದಮನಿತ ವರ್ಗಗಳಿಗೆ ಚರಿತ್ರೆಯಿಲ್ಲ ಎಂಬುದನ್ನು ಸ್ಥಾಪಿಸುವುದಕ್ಕೆ ಪೂರಕವಾಗಿ ಎಲ್ಲ ಜ್ಞಾನಶಿಸ್ತುಗಳು ಸಹಕರಿಸುತ್ತವೆ. ಈ ಕುರಿತೇ ಹೇಳುವ 'ಎಚ್.ಎಸ್. ಶ್ರೀಮತಿ'ಯವರು ಈ ವಿಚಾರವನ್ನು ಸ್ಪಷ್ಟವಾಗಿ ಮಂಡಿಸುತ್ತಾರೆ. "ನಮ್ಮ ಕನ್ನಡ ಸಾಹಿತ್ಯ ಚರಿತ್ರೆಗಳಂತೂ ಈ 'ಸತ್ಯ'ದ ಶೋಧನೆಗೆ ತೊಡಗಿದಂತಿಲ್ಲ. ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಯಾವುದೇ ನೇರ ಸಾಕ್ಷಿ ಪುರಾವೆಗಳು, ದಾಖಲೆ, ಮಾಹಿತಿಗಳು ಲಭ್ಯವಿಲ್ಲ ಎಂಬ ಸ್ಥಿತಿಯಲ್ಲಿ ಅವು ಪರ್ಯಾಯ ಚಿಂತನಾ ವಿಧಾನಗಳತ್ತ ಮನಸ್ಸು ಹಾಕಿದಂತಿಲ್ಲ. ಕೊನೆಯ ಪಕ್ಷ ಹೀಗೆ ಲಭ್ಯವಿಲ್ಲ ಎಂಬುದು ಅಸಹಜ ಸ್ಥಿತಿಯಲ್ಲವೇ ಎಂದು ಯೋಚಿಸಬೇಕಿತ್ತು. ಸೃಜನಶೀಲ

ಮನಸ್ಸು ಹೆಣ್ಣಿಗೂ ಇರುತ್ತದೆ ಎಂಬ ವಿಶ್ವಾಸವಾದರೂ ಇದ್ದಿದ್ದರೆ, ಇದನ್ನನುಸರಿಸಿ ಅನೇಕ ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳಬಹುದಿತ್ತು. ಹೆಣ್ಣಿನ ಸೃಜನಶೀಲತೆ ಕಾರ್ಯಪ್ರವೃತ್ತವಾಗಲಿಲ್ಲ ಎಂದೇ ಇಟ್ಟುಕೊಂಡರೂ ಅದರ ಹಿಂದಿನ ಕಾರಣಗಳೇನಿರಬಹುದು ಎಂಬ ಪ್ರಶ್ನೆ ಅನಿವಾರ್ಯವಾಗುತ್ತಿತ್ತು. ಆಗ ಹಿಂದಿನ ಚಾರಿತ್ರಿಕ ಪರಿಸರಗಳಲ್ಲಿ ಮಹಿಳೆಯರಿಗೆ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅವಕಾಶಗಳು ಸಿಕ್ಕಿದವೇ, ಸಿಕ್ಕಷ್ಟು ಅವಕಾಶಗಳಲ್ಲಿ ಎಷ್ಟು ಮಹಿಳೆಯರು ಕೃತಿಗಳನ್ನು ರಚಿಸಿದರು. ಅವುಗಳ ಗುಣಲಕ್ಷಣಗಳೇನು ಎಂಬಂತಹ ಹಲವು ಪ್ರಶ್ನೆಗಳು ಮುಖ್ಯವಾಗಬೇಕಿತ್ತು. ಆದರೆ ನಮ್ಮ ಸಾಹಿತ್ಯ ಚರಿತ್ರೆಗಳಿಗೆ ಇಂಥಾ ಅನುಮಾನಗಳು ಕಾಡಿದಂತಿಲ್ಲ. ಬದಲಿಗೆ ಒಟ್ಟಾರೆಯಾದ ಬೀಸು ಹೇಳಿಕೆಗಳಲ್ಲಿ ಮಹಿಳೆಯರು ಸಾಹಿತ್ಯ ನಿರ್ಮಾಣದಂತಹ ಸೃಜನಶೀಲತೆಯಲ್ಲಿ ತೊಡಗಿದ್ದೆ ಇಲ್ಲ. ತೀರಾ ಅತ್ಯಲ್ಪ ಸಂಖ್ಯೆಯ ಮಹಿಳೆಯರು ಅಪರೂಪಕ್ಕೆ ನಡೆಸಿರಬಹುದಾದ ಪ್ರಯತ್ನಗಳೂ ಗುಣದ ದೃಷ್ಟಿಯಿಂದ ತೀರಾ ಕಳಪೆ ದರ್ಜೆಯವು ಎಂಬಂತಹ ಅಭಿಪ್ರಾಯಗಳನ್ನು ಹೇಳಿ ಕೈತೊಳೆದುಕೊಂಡರು".[೩]

ಮೇಲಿನ ವಿವರಣೆಯು 'ಸಾಹಿತ್ಯ ಚರಿತ್ರೆ'ಗಿಂತ ಭಿನ್ನವಾಗಿ 'ಮಹಿಳಾ ಸಾಹಿತ್ಯ ಚರಿತ್ರೆಯನ್ನು ಕಟ್ಟುವ ದಾಖಲಿಸುವ ಕ್ರಿಯೆಯ ಅಗತ್ಯವನ್ನು, ಮಹತ್ವವನ್ನು ಹೇಳುತ್ತದೆ. ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಅಂಥ ಪ್ರಯತ್ನಗಳು ನಡೆಯುತ್ತಿವೆ. ಅವುಗಳ ಅಧ್ಯಯನದ ಹಿನ್ನಲೆ ಈ ಬರಹಕ್ಕಿದೆ.

ಸ್ತ್ರೀಯ ಅಭಿವ್ಯಕ್ತಿ ಸಾಮರ್ಥ್ಯ ಗುಹೆ, ಬಿಲಗಳನ್ನು ನಿರ್ಮಿಸುವ ನೆಲೆಯದು. ತನ್ನ ಅಭಿವ್ಯಕ್ತಿಯ ಹಾದಿಯಲ್ಲಿ ಒಂದಿಷ್ಟು ಅವಕಾಶದ ಕಿಂಡಿಗಳು ಕಂಡರೆ ಅಲ್ಲಿ ತನ್ನನ್ನು ಹೊರಹಾಕಿಕೊಳ್ಳಲು ಅವಳಿಗೆ ಕಾತರ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸುಧಾರಣೆಯ ಘಟ್ಟಗಳು ಅಲ್ಲಲ್ಲಿ ನಿರ್ಮಾಣಗೊಂಡ ಎಲ್ಲ ಸಂದರ್ಭಗಳಲ್ಲಿ ಮಹಿಳೆ ತನ್ನ ಸೃಜನಶೀಲತೆಯನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ್ದಾಳೆ. ವಚನ ಚಳುವಳಿಯ ಸಂದರ್ಭ, ದಾಸ ಸಾಹಿತ್ಯದ ಸಂದರ್ಭ, ಒಡೆಯರ ಕಾಲದ ಉತ್ತೇಜನ, ಸುಧಾರಣಾವಾದಿ ಚಿಂತನೆಗಳು, ಹೊಸಗನ್ನಡದ ನವೋದಯ, ಪ್ರಗತಿಶೀಲ, ನವ್ಯ, ದಲಿತಬಂಡಾಯ ಚಳುವಳಿಗಳು ಮಹಿಳಾ ಸಾಹಿತ್ಯಾಭಿವ್ಯಕ್ತಿಗೆ ಒಂದು ವೇದಿಕೆಯನ್ನು ನಿರ್ಮಿಸಿಕೊಟ್ಟಿವೆ. ಈ ಸಂದರ್ಭದಲ್ಲಿ ಬಂದದ್ದೆಲ್ಲವೂ ಗಟ್ಟಿ ಸಾಹಿತ್ಯ ಎಂಬ ನಿರ್ಣಯಕ್ಕೆ ಬರಲಾಗದಿದ್ದರೂ,

ಕಳಪೆಯಲ್ಲದ ಸಾಹಿತ್ಯ ರಚನೆಯಾಗಿದೆ ಎನ್ನುವುದಂತೂ ಮಹಿಳಾ ಪ್ರತಿಭೆಗೆ ಸಾಕ್ಷಿಯಾಗಿದೆ.

ವಚನ ಚಳುವಳಿಯ ಸಂದರ್ಭದಲ್ಲಿ ಬಂದ ಅಕ್ಕಮಹಾದೇವಿ ತನ್ನ ಸ್ವಸಾಮರ್ಥ್ಯದಿಂದಲೇ ಅಲ್ಲಮ, ಬಸವಣ್ಣನಿಗೆ ಸಮಾನಳಾಗಿ ನಿಂತವಳು. ಇತಿಹಾಸದ ಒಂದು ವಿಪರೀತದ ಅಪವಾದವಾದ ಅಕ್ಕ ತನ್ನ ಬದುಕಿನುದ್ದಕ್ಕೂ ಏಕಾಂಗಿಯಾಗಿ ನಿಂತ ಸಾಧಕಿ. 'ಲೌಕಿಕದ ಗಂಡರನೊಯ್ದು ಒಲೆಯೊಳಗಿಕ್ಕು' ಎಂದು ಲೌಕಿಕದ ಗಂಡನನ್ನು ತಿರಸ್ಕರಿಸಿ ಕುಟುಂಬವನ್ನು ಒಲ್ಲದ ಅಕ್ಕ, ತನ್ನ ಶರೀರದ ಮೇಲಿನ ವ್ಯಾಮೋಹವನ್ನು ತ್ಯಜಿಸಿ 'ದಿಗಂಬರವೇ ದಿವ್ಯಾಂಬರವೆನಗೆ' ಎಂದು ಅಕ್ಕ, ಸಮಾನಮನಸ್ಕರೊಂದಿಗಿನ ಸಖ್ಯ ಬೆಳೆಸಲು ಕಾಡು-ಮೇಡಿನ ಹಾದಿ ಅಲೆದು ಕಲ್ಯಾಣಕ್ಕೆ ಬಂದ ಅಕ್ಕ – ಲೋಕದ ಪ್ರಶ್ನೆಗಳಿಗೆ ಉತ್ತರವಾಗಿ ಪರಲೋಕದ ಗಂಡನನ್ನು ಕಲ್ಪಿಸಿಕೊಳ್ಳಬೇಕಾದ ಪ್ರಸಂಗ ಬಂತು. ಅವನೊಡನೆ ಇಲ್ಲದ ದಾಂಪತ್ಯವನ್ನು ಕಟ್ಟಿ ಸುಖಿಸಬೇಕಾಯ್ತು, ತಪಿಸಬೇಕಾಯ್ತು. ಲೋಕದ ಪ್ರಶ್ನೆಗಳಿಗೆ ಪದೇ ಪದೇ ತನ್ನ ಬತ್ತಲೆಯನ್ನು ವಿವರಿಸಬೇಕಾಯ್ತು. ಸಮಾನಮನಸ್ಕರೂ, 'ಹೆಣ್ಣು ಹೆಣ್ಣಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಭಾವಿಸಿದ ಶರಣರ ಎದುರಿಗೂ ಯಾವ ಶರಣನೂ ಉತ್ತರಿಸಬೇಕಾಗಿಲ್ಲದ ಪ್ರಶ್ನೆಗಳಿಗೆ ಅಕ್ಕ ಉತ್ತರಿಸಬೇಕಾಯಿತು. ಆ ಪ್ರಶ್ನೆಗಳೆಲ್ಲಾ 'ಬಿಟ್ಟೆನೆಂದರೂ ಬಿಡದು' ನೆಲೆಯವು, ಗೃಹಿಣಿತ್ವಕ್ಕೆ ಸಂಬಂಧಪಟ್ಟವು. ಸತಿಯ ಸಿದ್ಧ ಮಾದರಿಯನ್ನು ಒಲ್ಲದ ಅಕ್ಕನಿಗೆ ಮತ್ತೆ ಮತ್ತೆ ಪತಿಯ ಅಸ್ತಿತ್ವವನ್ನು ಹೇಳು ಎಂದು ಒತ್ತಾಯಿಸಿದ ಮಾದರಿಯವು. ಅಲ್ಲಮನಂಥ ಅಲ್ಲಮ ಕೇಳುವುದು ಅವಳ ಗಂಡ, ಬತ್ತಲೆಯ ಬಗೆಗಿನ ಪ್ರಶ್ನೆಗಳೇ ಹೊರತು ಆಧ್ಯಾತ್ಮಿಕಕ್ಕೆ ಸಂಬಂಧಿಸಿದವಲ್ಲ. ಆಧ್ಯಾತ್ಮಿಕ ನೆಲೆಯಲ್ಲಿ ಉನ್ನತ ಸ್ಥಾನಗಳಿಸಿದ ಅಕ್ಕನ ಬದುಕಿನ ದುರಂತವೆಂದರೆ ಆಧ್ಯಾತ್ಮದ ಹಾದಿಯನ್ನು ತನ್ನದಾಗಿಸಿಕೊಂಡಾಗಲೂ, 'ನಿಮ್ಮ ತಲೆಗೆ ಹೂವ ತರುವೆನಲ್ಲದೆ ಹುಲ್ಲ ತಾರೆನು' ಎಂದು ಹೇಳಬೇಕಾದ ಅನಿವಾರ್ಯತೆ ಉಂಟಾಗಿದ್ದು. ತನ್ನ ಒಂಟಿತನದೊಂದಿಗೆ ಅವಳು ಕದಳಿ ವನದೊಳಗೆ ಮರೆಯಾಗಿಬಿಟ್ಟ ದುರಂತ ಅವಳ ಮೋಕ್ಷಕ್ಕೂ ಮೀರಿದ್ದು. ಹೆಣ್ಣಿನ ಬದುಕಿನ ತಾಕಲಾಟ, ತಳಮಳಗಳಿಂದಾಚೆ ಅವಳ ವಚನಗಳು ಸಾಮಾಜಿಕ ಬದುಕನ್ನು ಯಾಕೆ ಹಿಡಿದಿಡುವುದಿಲ್ಲ ಎಂಬ ಪ್ರಶ್ನೆಗೆ ಉತ್ತರ ಅವಳ ಬದುಕಿನ ಹಾಡು-ಪಾಡನ್ನು ಗಮನಿಸಿದಾಗ ಸಿಕ್ಕುತ್ತದೆ.

ಅಕ್ಕಮಹಾದೇವಿಯ ಬಾಲ್ಯ, ತಂದೆ-ತಾಯಿ, ಗುರು, ಗಂಡ ಈ ಹಿನ್ನೆಲೆಗಳನ್ನು ಗಮನಿಸಿದಾಗ ಸಹಜವಾಗಿ, ಆ ಸಂದರ್ಭದ ಬೇರೆಯ ಹೆಣ್ಣುಗಳಿಗೆ ದಕ್ಕಲಾರದ ಒಂದು ಪರಿಸರ ಅವಳಿಗೆ ದಕ್ಕಿತ್ತು ಎನ್ನುವುದು ಗಮನಿಸುವ ಅಂಶ. ಅಕ್ಕನದು ಸ್ವಯಂಭೂ ವ್ಯಕ್ತಿತ್ವ. ತನ್ನ ಗಂಡನಿಂದ ಹೊರ ಬರುವಾಗಲೇ ಒಂದು ಕ್ರಾಂತಿಕಾರಕ ನಿಲುವನ್ನು ತಳೆಯುತ್ತಾಳೆ. ಆದರೆ ಎಷ್ಟೇ ಸಾಂಪ್ರದಾಯಿಕ ಚೌಕಟ್ಟಿನಿಂದ ಹೊರಗುಳಿಯಲು ಪ್ರಯತ್ನಿಸಿದರೂ, ವಾಸ್ತವದ ಗೃಹಿಣಿತ್ವ ಮತ್ತು ಸತಿತ್ವದಿಂದ ಹೊರಬಂದರೂ, ಅವಳು ಕಲ್ಪನೆಯ ಗೃಹಿಣಿತ್ವ ಮತ್ತು ಸತಿತ್ವವನ್ನು ಆರೋಪಿಸಿಕೊಳ್ಳಬೇಕಾಯಿತು. ತನ್ನ ಹೆಣ್ಣು ದೇಹದ ಕಾರಣದಿಂದಲೇ ಅವಳು 'ಕಿನ್ನರಿ ಬೊಮ್ಮಯ್ಯ'ನಂಥವರಿಂದ ಪರೀಕ್ಷೆಗೆ ಒಳಪಡಬೇಕಾಯಿತು. ಮತ್ತೆ, ಮತ್ತೇ ಪರೀಕ್ಷೆಗೆ ಒಳಪಡಬೇಕಾಯಿತು, ತನ್ನ ಆಯ್ಕೆ ಮತ್ತು ಅನುಭಾವದ ನೆಲೆಯನ್ನು ಮತ್ತೆ, ಮತ್ತೇ ಸಮರ್ಥಿಸಿಕೊಳ್ಳಬೇಕಾಯಿತು. ತನ್ನ ಅನುಭಾವದ ನೆಲೆಯನ್ನು ಅವಳು ಅತ್ಯಂತ ಸಮರ್ಥವಾಗಿ;

> "ಮರೆದೊರಗಿ ಕನಸ ಕಂಡು ಹೇಳುವಲ್ಲಿ, ಸತ್ತಹೆಣ ಎದ್ದಿತ್ತು
> ತನ್ನ ಋಣ ನಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟಹಾಲು ಗಟ್ಟಿತುಪ್ಪವಾಗಿ
> ಸಿಹಿಯಾಯಿತ್ತು ಇದಕ್ಕೆ ತಪ್ಪ ಸಾಧಿಸಲೇಕೆ?
> ಚೆನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ?"[೭]

ಎಂದು ಹೇಳಿ ಸಮರ್ಥಿಸಿಕೊಳ್ಳುತ್ತಾಳೆ ಎಂಬುದು ಸತ್ಯ-ಸಂಗತಿ. ಆದರೆ ಬೇರೆ ಯಾವ ಶರಣರಿಗೂ ಇಲ್ಲದ ಈ ರೀತಿಯ ಪರೀಕ್ಷೆಗಳು, ಪ್ರಶ್ನೆಗಳು ಅಕ್ಕನಿಗೆ ಏಕೆ ಎಂಬ ಪ್ರಶ್ನೆ ಹೆಣ್ಣಿನ ಸಾಮಾಜಿಕ, ಸಾಂಸ್ಕೃತಿಕ ಬದುಕನ್ನು ಬಿಚ್ಚಿಡುತ್ತದೆ. 'ಶಾಂತಾ ಇಮ್ರಾಪೂರ'ರವರು ಹೇಳುವಂತೆ, "ಹೆಣ್ಣೆಂಬ ಕಾರಣಕ್ಕಾಗಿಯೇ ತನ್ನ ಆಸಕ್ತಿಯ ಆಯ್ಕೆಯನ್ನು, ಚಾರಿತ್ರ್ಯಶುದ್ಧಿಯನ್ನು, ವೈರಾಗ್ಯದ ಸತ್ವವನ್ನು ಸಾಬೀತುಪಡಿಸಿಕೊಳ್ಳಬೇಕಾದ ವಿಪರ್ಯಾಸಕ್ಕೆ ತುತ್ತಾಗಬೇಕಾಗುತ್ತದೆ. ಲೋಕಾಪವಾದಗಳಿಗೆ ಉತ್ತರಿಸಬೇಕಾದ ಅಗ್ನಿಪರೀಕ್ಷೆಯು ಶರಣರಿಂದಲೇ ಒದಗಿ ಬಂದುದು ಶರಣರ ಸ್ತ್ರೀಪರ ಮಾನವೀಯ ಕಾಳಜಿಗಳ ಹಿನ್ನಲೆಯಲ್ಲಿ ತೀರ ವ್ಯತಿರಿಕ್ತವಾಗಿ ತೋರುತ್ತದೆ. ವಿವಾಹ, ತಾಯ್ತನ, ಸತಿತ್ವದಾಚೆಗೂ ವಿಸ್ತರಿಸಿಕೊಳ್ಳಬಲ್ಲ ಸ್ತ್ರೀತ್ವದ ಸ್ವತಂತ್ರ ನೆಲೆಗಳನ್ನು ಅನುಭಾವದ ಆಶಯವನ್ನು ಗೌರವಿಸಿದ ಶರಣ ಸಮುದಾಯವೇ ಮಹಾದೇವಿಯಕ್ಕನ ಆಧ್ಯಾತ್ಮಿಕ

ಆಯ್ಕೆಯನ್ನು, ಲೌಕಿಕ ಸತಿತ್ವದ ನೆಲೆಯನ್ನು ಪ್ರಶ್ನಿಸುವುದು ವಿಸ್ಮಯವುಂಟು ಮಾಡುತ್ತದೆ”.[೮]

ಸ್ವಯಂಭೂ ವ್ಯಕ್ತಿತ್ವದ ಸಾಧ್ಯತೆಯ ಅಕ್ಕನೇ ಸಾಕಾಗಿ ‘ಕಾಡದಿರಣ್ಣಾ ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳ’ ಎನ್ನುವಂತಾದಾಗ, ಬೆನ್ನುತಟ್ಟುವ ಯಾವ ಹಿನ್ನೆಲೆಯೂ ಇರದ ಅಂದಿನ ಸ್ತ್ರೀ ಸಮೂಹ ಏನು ಮಾಡಿತು, ಈ ಸವಾಲುಗಳನ್ನು ಹೇಗೆ ಎದುರಿಸಿತು ಎಂಬ ಪ್ರಶ್ನೆಗಳು ಎದುರಾದಾಗ ದೊರಕುವ ಉತ್ತರ ‘ಪುಣ್ಯಸ್ತ್ರೀ’ಯರಾಗಿ ವಚನ ರಚಿಸಿದ ವಚನಕಾರ್ತಿಯರು. ಒಬ್ಬ ಮುಕ್ತಾಯಕ್ಕ ಅಲ್ಲಮನನ್ನು ಎದುರಿಸಿ ಪ್ರಶ್ನೆ ಕೇಳಿದ್ದು ಬಿಟ್ಟರೆ, ಉಳಿದವರು ಯಾರೂ ಇಂಥ ಸಂದರ್ಭಕ್ಕೆ ಮುಖಾಮುಖಿಯಾದವರೇ ಅಲ್ಲ. ಬಸವಣ್ಣನ ಹೆಂಡತಿಯರು ಆದರ್ಶ ಪತ್ನಿಯರು. ನೀಲಾಂಬಿಕೆ ವಿಚಾರ ಪತ್ನಿ, ಗಂಗಾಂಬಿಕೆ ವಿಧೇಯ ಪತ್ನಿ.

“ಪತಿಯಾಜ್ಞೆಯಲ್ಲಿ ಚರಿಪ ಸತಿಗ್ಯಾಕೆ ಪ್ರತಿಜ್ಞೆಯು?
ಪ್ರತಿಜ್ಞೆಯು ಪತಿಕರದಲ್ಲಿ ಪೋಪದಿರೆ ಯಾತನೆಯಲ್ಲವೇ?
ಇವಳ ಲಿಂಗನಿಷ್ಠೆ ಇವಳಿಗೆ
ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ
ಗಂಗಾಪ್ರಿಯ ಕೂಡಲಸಂಗಮದೇವಾ”[೯]

ಇದು ಗಂಗಾಂಬಿಕೆಯ ನಿಲುವನ್ನು ವ್ಯಕ್ತಪಡಿಸಿದರೆ, ವಿಚಾರಪತ್ನಿ ನೀಲಾಂಬಿಕೆ ತಾನು ಹೆಣ್ಣಾದ ವ್ಯಥೆಯನ್ನು ತನ್ನೊಂದು ವಚನದಲ್ಲಿ ತೋಡಿಕೊಳ್ಳುತ್ತಾಳೆ.

“ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ
ಪುಣ್ಯವಿಲ್ಲದ ಪಾಪಿಯ
ಆನು ಇಹಪರಕ್ಕೆ ದೂರಳಯ್ಯ
ಎನ್ನ ನಾಮ ಹೆಣ್ಣು ನಾಮವಲ್ಲಯ್ಯ
ನಾನು ಸಿರಿಯಿದ್ದ ವಸ್ತುವಿನ ವಧುವಾದ ಕಾರಣ
ಎನಗೆ ಹೆಣ್ಣು ನಾಮವಿಲ್ಲವಯ್ಯಾ”[೧೦]

ಇಲ್ಲಿ ಹೆಣ್ತನವನ್ನು ಮೀರಿ ಉಭಯ ಲಿಂಗವಳಿದು ಆತ್ಮವಾಗುವ ಆಶಯವನ್ನು ಗಮನಿಸಬಹುದು. ಆದರೆ ಸ್ತ್ರೀವಾದ ಹೆಣ್ತನ ಅಳಿದುಕೊಂಡು ‘ಏನೋ’ ಆಗುವ ಸಂಗತಿಯನ್ನು ನಿರಾಕರಿಸುತ್ತದೆ.

ತಳವರ್ಗದಿಂದ ಬಹು ಸಂಖ್ಯೆಯಲ್ಲಿ ಬಂದ ವಚನಕಾರ್ತಿಯರು ವ್ರತದ ಬಗ್ಗೆ, ಆಹಾರದ ಬಗ್ಗೆ, ಜಾತಿಹೀನರ ಬಗ್ಗೆ ತೀವ್ರವಾಗಿ ಪ್ರತಿಕ್ರಿಯಿಸುವ ವಚನಗಳ ಅಭಿವ್ಯಕ್ತಿಯಿದೆ. ಕೆಲ ವಚನಕಾರ್ತಿಯರನ್ನು ಬಿಟ್ಟರೆ ಉಳಿದ ವಚನಕಾರ್ತಿಯರ ಪರಿಚಯವಾಗುವುದೇ ಅವರ ಗಂಡಂದಿರ ಹೆಸರಿನಿಂದ. ಇವರು ಅವರ ಪುಣ್ಯಸ್ತ್ರೀಯರಷ್ಟೇ. 'ಸತಿ ಪತಿಗಳೊಂದಾದ ಭಕ್ತಿ ಹಿತಮಪ್ಪುದು ಶಿವಂಗೆ' ಅನ್ನುವಾಗಲೂ 'ದಾಸಿಮಯ್ಯ' ಬಯಸುವುದು 'ದುಗ್ಗಳೆ'ಯಂಥ ಅನುಕರಣಶೀಲ ವಿಧೇಯ ಪತ್ನಿಯನ್ನೇ. ಧರ್ಮದ ಸ್ಥಾಪನೆಯೇ ಆದರ್ಶವಾಗಿದ್ದ ಸಂದರ್ಭದಲ್ಲಿ ಹೆಣ್ಣಿನ ಅಸ್ತಿತ್ವದ ಪ್ರಶ್ನೆ ಪ್ರಮುಖವಾಗದ ಸಂಗತಿಯನ್ನು ನಾವು ಅಲ್ಲಿ ಗಮನಿಸಬೇಕು. ಮಹಿಳೆಯ ಪ್ರಶ್ನೆ ಅವರಿಗೆ ಎಂದೂ ಕೇಂದ್ರವಾಗಲಿಲ್ಲ. 'ಲಿಂಗ ಪತಿ-ಶರಣ ಸತಿ' ಎಂದು ಪತಿ-ಸತಿ ಎಂಬ ವಿಚಾರವನ್ನು ಸಾರ್ವತ್ರಿಕಗೊಳಿಸಿದರಷ್ಟೇ. ಲಿಂಗಬೇಧವನ್ನು ಅಳಿಸಿಹಾಕಿ ಮಹಿಳೆಯ ಅಸ್ತಿತ್ವವನ್ನು ಹೇಳಲಿಲ್ಲ. ಪುರುಷನೊಂದಿಗೆ ವಿಲೀನಗೊಳ್ಳುವುದನ್ನು ಹೇಳಿ ಪುರುಷನ ಅಸ್ತಿತ್ವವನ್ನು ಎತ್ತಿ ಹಿಡಿದರು. ಈ ಕಾರಣದಿಂದಲೇ ಬಸವಣ್ಣನಿಗೆ ಇಬ್ಬರು ಹೆಂಡತಿಯರಿದ್ದ ಬಗ್ಗೆ ಯಾರೂ ಪ್ರಶ್ನೆ ಕೇಳಲಿಲ್ಲ. ಶೀಲದ ಪ್ರಸ್ತಾಪ ಇವರಲ್ಲೂ ಇತ್ತು. ಸ್ತ್ರೀ ಸಮಾನತೆ ಇತ್ತೆಂದರೆ ಅಕ್ಕ ಯಾಕೆ ತನ್ನ ಇಡೀ ಬದುಕಿನ ಉದ್ದಕ್ಕೂ ಬೆತ್ತಲೆ, ಗಂಡ, ಕುಟುಂಬಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸುವುದರಲ್ಲೇ ತನ್ನ ಜನ್ಮ ನೀಗಿಕೊಳ್ಳಬೇಕಾಯಿತು?

ಹೊಸ ಓದುಗಳು ಮುಖ್ಯವಾದಂಥ ಇಂದಿನ ಸಂದರ್ಭದಲ್ಲಿ, ವಚನ ಸಾಹಿತ್ಯದ ಬಗೆಗೂ ಅನೇಕ ಪ್ರಶ್ನೆಗಳು ಉದ್ಭವವಾಗುತ್ತವೆ. ತಳವರ್ಗದ ವಚನಕಾರ್ತಿಯರು ತಮ್ಮ ಒಂದೆರಡು ವಚನಗಳಲ್ಲೇ ಆಭಿವ್ಯಕ್ತಿಯನ್ನು ನೀಗಿಕೊಳ್ಳಬೇಕಾಯಿತು ಯಾಕೆ, ಸೂಳೆ ಸಂಕವ್ವೆಗೆ ಇದ್ದ ಪ್ರಶ್ನೆಗಳೇ ಬೇರೆ ಅಲ್ಲವೇ, ವ್ರತವ ಆಚರಣೆಯ ಒತ್ತಡ ತಳವರ್ಗದ ವಚನಕಾರ್ತಿಯರಲ್ಲೇ ಹೆಚ್ಚು ಪ್ರಸ್ತಾಪವಾಗುವುದು ಏಕೆ............ ಹೀಗೆ ಅನೇಕ ಪ್ರಶ್ನೆಗಳು ಮಹಿಳೆಯ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ಮೂಡಿಬರುತ್ತವೆ.

ಹನ್ನೆರಡನೆಯ ಶತಮಾನದಲ್ಲಿ ಒಂದಿಷ್ಟು ಪ್ರಕಟಗೊಂಡಿದ್ದ ಮಹಿಳಾ ಅಭಿವ್ಯಕ್ತಿ ಮುಂದೆ ಕಾಣಿಸಿಕೊಳ್ಳುವುದೇ ಹದಿನೇಳನೆಯ ಶತಮಾನದಲ್ಲಿ. ಕ್ರಿ.ಶ. ೧೫೦೦ಕ್ಕೂ ಸ್ವಲ್ಪ ಹಿಂದೆ ಕ್ರಿ.ಶ. ಸುಮಾರು ೧೪೭೫ರಲ್ಲಿ ಗೆರುಸೊಪ್ಪೆಯ ರಾಜ ಭೈರವೇಂದ್ರನ ರಾಣಿ ನಾಗಲದೇವಿ 'ಷೋಡಶ ಭಾವನೆ ನೊಂಪಿ' ಎಂಬ ಪುಟ್ಟ ಕೃತಿಯನ್ನು ರಚಿಸಿದ ಉಲ್ಲೇಖ ಬಿಟ್ಟರೆ ಬೇರೆ ಯಾವ ಮಹಿಳಾ ಬರಹವೂ ಕಾಣಿಸುವುದಿಲ್ಲ. 'ವೈ.ಸಿ. ಭಾನುಮತಿ'ಯವರು

ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯ ಹಿನ್ನಲೆಯಲ್ಲಿ ಈ ಖಾಲಿತನಕ್ಕೆ ಕಾರಣಗಳನ್ನು ಗುರುತಿಸುತ್ತಾರೆ. "ವಿದೇಶಿಯರ ಆಕ್ರಮಣಗಳು ದೇಶದಲ್ಲಿ ಅಸ್ಥಿರವಾದ ರಾಜಕೀಯಕ್ಕೆ, ಅರಾಜಕತೆಗೆ ಆಸ್ಪದ ನೀಡಿತು. ಇದರಿಂದ ಮಹಿಳೆಯರ ಸ್ಥಿತಿಗತಿಯ ಮೇಲೂ ತೀವ್ರ ಪರಿಣಾಮ ಉಂಟಾಯಿತು. ಹೆಣ್ಣುಮಕ್ಕಳ ಶೀಲ ಕಾಪಾಡುವುದೇ ದುಸ್ತರವಾದ ಕಾರಣ, ಹನ್ನೆರಡನೆಯ ಶತಮಾನದ ಬಿಡುಗಡೆಯ ಪ್ರಯತ್ನಗಳು ಕಾಲಗರ್ಭದಲ್ಲಿ ಸೇರಿಹೋದವು. ಇತಿಹಾಸ ಮರುಕಳಿಸಿದಂತೆ ಹೆಣ್ಣನ್ನು ಹಿಂದಿನಂತೆಯೇ ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ನಿರ್ಬಂಧಿಸಲಾಯಿತು. ಹನ್ನೆರಡನೆಯ ಶತಮಾನದ ಬಳಿಕ ಹೆಣ್ಣುಮಕ್ಕಳ ಸೃಜನಶೀಲತೆ ನಿಷ್ಕ್ರಿಯವಾಗಿದ್ದಕ್ಕೆ, ಹದಿನೇಳನೆಯ ಶತಮಾನದವರೆಗೆ ಬಹುತೇಕ ದುರ್ಬಲಗೊಂಡಿದ್ದಕ್ಕೆ ಕಾರಣಗಳನ್ನು ಪುರುಷ ಸಾಹಿತ್ಯ ಚರಿತ್ರೆಕಾರರು ಗಂಭೀರವಾಗಿ ಚಿಂತಿಸಿದಂತೆ ಕಂಡುಬರುವದಿಲ್ಲ. ಏಕೆಂದರೆ ಅವರು ಸಾಹಿತ್ಯ ಚರಿತ್ರೆಯನ್ನು ಪುರುಷ ಕಣ್ಣಿನಿಂದ ತೂಗಿ ನೋಡಿದ್ದೂ ಕಾರಣವಾಗಿರಬೇಕು. ಆದರೆ ಸರೋಜಿನಿ ಮಹಿಷಿಯವರು ಈ ಬಗ್ಗೆ ಆಲೋಚಿಸಿದ್ದಾರೆ. ಹನ್ನೆರಡನೆಯ ಶತಮಾನದ ವೀರಶೈವ ಧಾರ್ಮಿಕ ಸಾಮಾಜಿಕ ಕ್ರಾಂತಿ 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ' ಎಂಬ ತಿಳಿವನ್ನು ಅಂದಿನ ಸಮಾಜದಲ್ಲಿ ಬಿತ್ತರಿಸಲು ಪ್ರಯತ್ನಿಸಿ ಯಶಸ್ವಿಯಾಯಿತು. ಆದರೆ ಈ ಶತಮಾನದ ತರುವಾಯ ಸಾಹಿತ್ಯ ರಚನೆಯ ರಭಸವು ಹಿಂದೆ ಸರಿದಂತೆ ಇಂತಹ ಸಾಮಾಜಿಕ ಹೊಸ ವಿಚಾರಗಳು ಹಿಂದೆ ಸರಿದವು. ಮಹಮ್ಮದೀಯರ ಆಕ್ರಮಣವು ಸ್ತ್ರೀ ಜೀವನದ ಸುರಕ್ಷತತೆಯನ್ನು ಆಹುತಿ ತೆಗೆದುಕೊಂಡಿತು. ಸಮಾಜಕ್ಕೆ, ಪುರುಷ ವರ್ಗಕ್ಕೆ ಕರ್ತವ್ಯ ದೃಷ್ಟಿಯಿಂದ ಸ್ತ್ರೀ ಹೊರೆಯಾಗಿ ಕಂಡಳು. ಜೊತೆಗೆ ವಿಲಾಸದ ದೃಷ್ಟಿಯಿಂದ ಉಪಭೋಗದ ಸಾಧನವಾಗಿ ಕಂಡಳು ಎಂದು ಅಭಿಪ್ರಾಯ ಪಟ್ಟಿರುವುದು ವಿಚಾರಾರ್ಹವಾಗಿದೆ". [೧೧]

ಈ ಆಲೋಚನೆಯ ಹಿನ್ನೆಲೆಯಲ್ಲೇ ನಾವು ಮುಂದೆ ಬಂದ ಭಕ್ತಿ ಸಾಹಿತ್ಯವಾದ ದಾಸ ಸಾಹಿತ್ಯವನ್ನು ಗಮನಿಸಬೇಕಾಗುತ್ತದೆ. ದಾಸ ಪರಂಪರೆಯಲ್ಲಿ ಅಭಿವ್ಯಕ್ತಿಗೊಂಡ ಮಹಿಳೆಯ ನೆಲೆಗಳು ಸಾಂಪ್ರದಾಯಿಕ ಹಿನ್ನಲೆಯವೇ ಎಂಬುದು ಇಲ್ಲಿ ಗಮನಾರ್ಹ. ಲಿಂಗಬೇಧದಿಂದ ಮನೆಯೊಳಗಿರುವ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದರು. ಸಾಂಪ್ರದಾಯಿಕ ಸ್ತ್ರೀ ಬದುಕಿನ ತರಬೇತಿಯನ್ನು ಉಳ್ಳ ಇವರು, ತಮ್ಮನ್ನು ಭಾಷೆಯ ಮೂಲಕ ಅಭಿವ್ಯಕ್ತಿಸಿಕೊಂಡಾಗಲೂ ಪಿತೃಪ್ರಧಾನ ಧೋರಣೆಗಳೇ ಇವರ ಅಭಿವ್ಯಕ್ತಿಯಲ್ಲಿ ಮೂಡಿಬಂದವು. ಹದಿನೇಳನೆಯ ಶತಮಾನದಲ್ಲಿ (ವೈ.ಸಿ. ಭಾನುಮತಿಯವರು

ಗುರುತಿಸಿರುವಂತೆ) ಮೈಸೂರು ಒಡೆಯರ ಕಾಲದಲ್ಲಿ ಮಹಿಳೆಯ ಅಭಿವ್ಯಕ್ತಿಯನ್ನು ಗುರುತಿಸಬಹುದು. ಚಿಕ್ಕದೇವರಾಯನ ಕಾಲ, ವೈಷ್ಣವಧರ್ಮ ತನ್ನ ಉತ್ಕರ್ಷವನ್ನು ಕಂಡುಕೊಂಡ ಸಂದರ್ಭ. ಈ ಹಿನ್ನಲೆಯಿಂದ ಬಂದ ಶೃಂಗಾರಮ್ಮ, ಸಂಚಿಯ ಹೊನ್ನಮ್ಮ ಸಮಕಾಲೀನ ಬರಹಗಾರ್ತಿಯರು.

ಸಂಚಿಯ ಹೊನ್ನಮ್ಮನ ಕೃತಿ 'ಹದಿಬದೆಯ ಧರ್ಮ'ವನ್ನು ಕುರಿತು ರಂ.ಶ್ರೀ ಮುಗುಳಿಯವರು ತಮ್ಮ ಸಾಹಿತ್ಯ ಚರಿತ್ರೆಯಲ್ಲಿ 'ಸೋಜಿಗದ ಸಂಗತಿಯೇ ಸರಿ' ಎನ್ನುತ್ತಾರೆ. ಹೊನ್ನಮ್ಮನು ನೀಡಿದ "ಈ ಗೃಹಿಣಿಯರ ಕೈಪಿಡಿ ಕನ್ನಡ ಸಾಹಿತ್ಯಕ್ಕೆ ಚಿರವಾದ ಕೊಡುಗೆ" ಎಂದು ರಂ.ಶ್ರೀ ಮುಗುಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯ ೩.೨೯ನೆಯ ಪುಟದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

"ಪತಿಯೇ ಪರಮಗುರು ಪತಿಯೇ ದೇವತೆ
ಪತಿಯೇ ಸದ್ಗತಿಯೆಂದು
ಪತಿಯ ಪಾದಾಂಬುಜದೊಳು ಭಕ್ತಿಗೈವುದು
ಸತಿಯರ ಧರ್ಮದ ಸಾರ"

ಈ ಆಲೋಚನೆಯನ್ನೇ ಕೇಂದ್ರವಾಗಿ ಹೊಂದಿದ ಕೃತಿ 'ಹದಿಬದೆಯ ಧರ್ಮ' ಸ್ತ್ರೀಪರ ಆಲೋಚನೆಗಳಿಗೆ ಧಕ್ಕೆ ತರುವಂಥ ವಿಚಾರಗಳನ್ನು ವ್ಯಕ್ತಪಡಿಸುತ್ತದೆ. ಇಡೀ ಕೃತಿಯಲ್ಲಿ ಸ್ತ್ರೀಪರವಾದ ಮಾತುಗಳು ಒಂದೆರಡು ಪದ್ಯಗಳಲ್ಲಿ ಬರುತ್ತವೆ ಎಂಬುದನ್ನು ಗಮನಿಸಿಯೂ, ಈ ಕೃತಿ ಅಂದಿನ ಮಹಿಳೆಯ ಗೃಹಣಿತ್ವಕ್ಕೆ ಹಿಡಿದ ಬಹು ಮುಖ್ಯ ದಾಖಲೆ ಎಂಬುದನ್ನು ನಾವು ಗಮನಿಸಬೇಕು. ಸ್ತ್ರೀವಾದಿ 'ಎಲೇನ್ ಶೋ ಆಲ್ಟರ್' "ಮಹಿಳೆಯರ ಸೃಜನಶೀಲತೆಯು ಅಧ್ಯಯನ, ಅಭಿವ್ಯಕ್ತಿ, ವಿಮರ್ಶೆಗಳೆಂಬ ಸಾಧನೆಯ ಮಾರ್ಗವನ್ನು ಪ್ರಜ್ಞಾಪೂರ್ವಕವಾಗಿಯೇ ಕ್ರಮಿಸಬೇಕು ಎನ್ನುತ್ತಾಳೆ. ಮುಂದುವರೆದು ಇಂಥಾ ಪಯಣದ ಮಜಲುಗಳು ಹೇಗಿರಬಹುದು ಎಂದು ಕೂಡಾ ಕಲ್ಪಿಸುತ್ತಾಳೆ. ಮೊದಲ ಹಂತದಲ್ಲಿ ಇದು ಯಜಮಾನ ಸಂಸ್ಕೃತಿಯನ್ನು ಯಥಾವತ್ತಾಗಿ ಅನುಕರಿಸುವ ದೀರ್ಘ ಅವಧಿಯಾಗಿರುತ್ತದೆ. ಇದು ಅಲ್ಲಿನ ದೃಷ್ಟಿಕೋನವನ್ನು ಇಡಿಯಾಗಿ ನಕಲು ಮಾಡುವ ಹಂತ. ಲೇಖಕಿಯರು ಈ ಹಂತದಲ್ಲಿ ರೂಢಿಗತ ಸ್ಥಿರ ಮಾದರಿಗಳನ್ನು ಪುನರುಚ್ಚರಿಸುವುದನ್ನಷ್ಟೇ ಕಲಿಯುತ್ತಾರೆ. ಇದನ್ನು ಸ್ತ್ರೀಯಾತ್ಮಕ ಹಂತವೆನ್ನುತ್ತಾರೆ".[೧೨] ಇದನ್ನೇ ಹೊನ್ನಮ್ಮ ಮಾಡಿದ್ದು. ಪುರುಷ ಧೋರಣೆಗಳನ್ನು ಬಿಂಬಿಸುವ ಇಂಥ ಸಾಹಿತ್ಯದ ಹಿಂದಿರುವ

‘ಒಡೆಯನಿರಿಸಿದಂತಿರ್ಪುದಲ್ಲದೆ ಪೇಳೊಡವೆಗೆ ಬೇರಿರವುಂಟೆ’ ಎಂಬ ಅನಿವಾರ್ಯ ಸಾಮಾಜಿಕತೆಯನ್ನು ಲಕ್ಷಿಸಬೇಕಾಗುತ್ತದೆ. ಇಂದಿಗೂ ಬಹುದೊಡ್ಡ ಮಹಿಳಾ ಸಮುದಾಯ ಇಂಥ ಬಂಧನದಲ್ಲಿರುವುದನ್ನು ನಾವು ಗಮನಿಸಬೇಕು.

ಮುಂದೆ ಬಂದ ಶೃಂಗಾರಮ್ಮ, ಚೆಲುವಾಂಬೆ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ............ಮುಂತಾದವರಿಂದ ವ್ಯಕ್ತಗೊಂಡ ಮಹಿಳಾ ಅಭಿವ್ಯಕ್ತಿ ಹತ್ತೊಂಬತ್ತನೆಯ ಶತಮಾನದ ಬರಹಗಾರ್ತಿಯರವರೆಗೂ ವ್ಯಾಪಿಸಿದೆ. ಈ ಸಂದರ್ಭದ ಮಹಿಳಾ ಅಭಿವ್ಯಕ್ತಿಯನ್ನು ಗಮನಿಸಿದಾಗ ಅವು ಹೆಚ್ಚಾಗಿ ಭಾಗವತ, ಪುರಾಣಗಳಿಂದ ಆಯ್ದ ಕಾವ್ಯಗಳ ರಚನೆ, ಭಕ್ತಿ ಗೀತೆಗಳ ರಚನೆಯನ್ನು ಒಳಗೊಂಡಿರುವುದನ್ನು ಗಮನಿಸುತ್ತೇವೆ. ಒಟ್ಟಾರೆಯಾಗಿ ಈ ಬರಹಗಳ ಧೋರಣೆಗಳನ್ನು ಗಮನಿಸಿದರೆ;

> ‘ಯಾಕೆನ್ನ ಬ್ರಹ್ಮ ಪುಟ್ಟಿಸಿದನೊ ಸೃಷ್ಟಿಸಿದನೊ
> ಮತ್ತಿನ್ಯಾಕೆ ಪಡೆದಳೊ
> ಸಾಕಿನ್ನು ಹೆಣ್ಣುಜನ್ಮದ ಬಾಳ
> ಯಾಕೆ ಹೇಳು ತಾಕಲೆನ್ನಯ ಗೋಳು”[೧೩]

ಎನ್ನುವಂಥ ವೈಯಕ್ತಿಕ ತಲ್ಲಣಗಳನ್ನು ಗಮನಿಸಬಹುದು. ಸುಮಾರು ೪೦ ಕ್ಕೂ ಹೆಚ್ಚು (ಕ್ರಿ.ಶ. ೧೫೦೦-೧೮೯೯ರ ಅವಧಿ) ಬರಹಗಾರ್ತಿಯರಲ್ಲಿ ಹೆಚ್ಚು ಜನ ವಿಧವೆಯರೇ ಎಂಬುದನ್ನು ಗಮನಿಸಬೇಕು. ಹೆಣ್ಣಿನ ಬಾಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡ ಪುರುಷಾಧಿಕಾರ, ಅವಳ ಬದುಕಿನ ಎಲ್ಲ ಹಂತಗಳನ್ನು ದುರ್ಬರ ಮಾಡುತ್ತಾ ನಡೆಯುತ್ತದೆ. ವಿಧವೆಯ ಸ್ಥಿತಿ ಅಂಥದ್ದು. ಭಕ್ತಿಯ ಚೌಕಟ್ಟಿನಲ್ಲಿ ಮಾತ್ರ ಸ್ವಾತಂತ್ರ್ಯ ಪಡೆದಿದ್ದ ಈ ಬರಹಗಾರ್ತಿಯರು, ತಮ್ಮ ಬದುಕಿನ ಬವಣೆಗೆ ಹೊರಚಾಚಾಗಿ ಬರವಣಿಗೆಯನ್ನು ಆಯ್ಕೆ ಮಾಡಿಕೊಂಡರು. ಆ ಸೀಮಿತ ಅವಕಾಶದಲ್ಲಿ ಸಾಂಪ್ರದಾಯಕವಾಗಿ ಆದರೂ ಒಂದು ಹಂತದಲ್ಲಿ ಹಗುರಾದರೆನ್ನುವ ಸಂಗತಿಯನ್ನು ನಾವು ಅಲಕ್ಷಿಸುವಂತಿಲ್ಲ. ಅನಿವಾರ್ಯದ ಸಾಮಾಜಿಕತೆ ಅವಳನ್ನು ಆವರಿಸಿರುವುದಕ್ಕೆ, ಬಂಧಿಸಿರುವುದಕ್ಕೆ ಈ ಹಂತದ ಮಹಿಳೆಯರ ಆಭಿವ್ಯಕ್ತಿಗಳು ಕೈಮರಗಳಾಗಿವೆ.

ಈ ಬರಹಗಳ ನಂತರ ನಾವು ೨೦ನೆಯ ಶತಮಾನದ ಪ್ರಾರಂಭದಲ್ಲಿ ಬಂದ ಪ್ರಮುಖ ಬರಹಗಾರರ ಸಂದರ್ಭವನ್ನು ಗಮನಿಸಬಹುದು. ಸುಧಾರಣಾವಾದಿ ಚಳುವಳಿಯನ್ನು ಬೆನ್ನಿಗೆ ಇಟ್ಟುಕೊಂಡ ಸಂದರ್ಭವದು. ಉದಾರವಾದಿ ಚಿಂತನೆ ಇಡೀ

ಸಾಹಿತ್ಯ, ಸಾಂಸ್ಕೃತಿಕ, ರಾಜಕೀಯ ವಲಯಗಳಲ್ಲಿ ತುಂಬಿದ್ದ ಕಾಲ. ಈ ಸಂದರ್ಭದಲ್ಲಿ ಮಹಿಳಾ ಸಾಹಿತ್ಯದ ರಚನೆಯನ್ನು ಗುರುತಿಸಬಹುದು. ನಂಜನಗೂಡು ತಿರುಮಲಾಂಬ ಈ ಸಂದರ್ಭದ ಪ್ರಮುಖ ಬರಹಗಾರ್ತಿ. ಸಾಂಪ್ರದಾಯಕ ಕುಟುಂಬದಲ್ಲಿ ಬೆಳೆದ ತಿರುಮಲಾಂಬಗೆ ೧೦ನೆಯ ವಯಸ್ಸಿಗೆ ಮದುವೆಯಾದರೆ ೧೪ನೆಯ ವಯಸ್ಸಿಗೆ ವೈಧವ್ಯ ಪ್ರಾಪ್ತಿಯಾಯಿತು. ಮುಂದೆ ತಂದೆಯಿಂದ ದೊರೆತ ಪ್ರೋತ್ಸಾಹದೊಂದಿಗೆ ಒಟ್ಟು ೨೮ ಕೃತಿಗಳನ್ನು ರಚಿಸಿ ಅಂದಿನ ಕಾಲದಲ್ಲಿ ಜನಪ್ರಿಯರಾಗಿದ್ದರು. ಇವರ ಒಟ್ಟಾರೆ ಸಾಹಿತ್ಯವನ್ನು ಗಮನಿಸುವುದಾದರೆ; ಶಿಕ್ಷಣ ಹೆಣ್ಣಿಗೆ ಉದ್ಧಾರದ ಹಾದಿ ಕಲ್ಪಿಸುತ್ತದೆ ಎಂಬ ಭಾವವಿದ್ದರೂ, ವಿಧವಾ ವಿವಾಹದ ಕಡೆ ಅವರ ನೆಚ್ಚಿಲ್ಲ, ವಿಧವಾವಿವಾಹವನ್ನು ಸ್ವೈರಾಲಾಪವೆಂದು ಕರೆಯುವ ಸಾಂಪ್ರದಾಯಕತೆ ಅವರದು.

'ಟೆರ್ರಿ ಈಗಲ್‌ಟನ್' ಕಲೆಯನ್ನು ಸಾಮಾಜಿಕ ಕ್ರಿಯಾಚರಣೆ ಎಂದು ಗುರುತಿಸಿರುವ ಸಂಗತಿ ಇಲ್ಲಿ ಉಲ್ಲೇಖಾರ್ಹ. "ಕಲೆಯನ್ನುವುದು ಶೈಕ್ಷಣಿಕವಾಗಿ ಕತ್ತರಿಸಿ ವರ್ಗೀಕರಿಸಬಹುದಾದ ಒಂದು ವಸ್ತುವಲ್ಲ. ಅದು ಒಂದು ಸಾಮಾಜಿಕ ಕ್ರಿಯಾಚರಣೆ. ಕಲೆಯನ್ನು ನಾವು ಸಾಮಾಜಿಕ ಚಟುವಟಿಕೆಯನ್ನಾಗಿ ಕಂಡು ವಿವರಿಸಬೇಕು. ಅದು ಸಮಾಜದ ಇತರ ಅನೇಕ ಸಂರಚನೆಗಳೊಡನೆ ಕಡಿದುಕೊಳ್ಳಲಾಗದ ನಂಟನ್ನು ಹೊಂದಿದೆ".[೧೪] ಆದ್ದರಿಂದಲೇ ಮಹಿಳಾ ಸಾಹಿತ್ಯ ರಚನೆಯನ್ನು ಸಾಮಾಜಿಕ ಸಂಗತಿಯಾಗಿಯೇ ಗುರುತಿಸಬೇಕು.

ತಿರುಮಲಾಂಬ ಅವರ ಕೃತಿಗಳ ರಚನೆಗೆ ಹಿನ್ನಲೆಯಾಗಿ ಇದ್ದುದು ಸುಧಾರಣಾವಾದಿ ಚಳುವಳಿ. ಆ ಸಂದರ್ಭದಲ್ಲಿ ವಿಧವಾ ಸಮಸ್ಯೆ, ಸ್ತ್ರೀ ಶಿಕ್ಷಣ, ಪುನರುತ್ಥಾನ ವಾದಗಳನ್ನೇ ಕೇಂದ್ರವಾಗಿಟ್ಟುಕೊಂಡೇ ಸಾಹಿತ್ಯ ರಚನೆಯಾಗುತ್ತಿತ್ತು. ಎಷ್ಟೋ ಕಾಲದ ಶೂನ್ಯದ ನಂತರ ತಮ್ಮ ಬರವಣಿಗೆಯನ್ನು, ಬೌದ್ಧಿಕ ಕಸರತ್ತನ್ನು ಮಾಡುವಂಥ ಸಂದರ್ಭದಲ್ಲಿ ಬರೆಯುವವರಿಗೆ ಒಂದು ಮಾದರಿ ಬೇಕು. ಪ್ರಾರಂಭದ ಬರಹದಲ್ಲಿ ಅನುಕರಣೆ ಸಹಜ. ತಿರುಮಲಾಂಬ ಮಹಿಳೆಯರ ಬಗ್ಗೆ ಯೋಚನೆ ಮಾಡಿ ಬರೆಯಬೇಕೆಂದಾಗ ಕೂಡಾ, ಅವರ ಎದುರಿಗಿದ್ದ ಮಾದರಿ ಸುಧಾರಣಾವಾದಿ ಸಂದರ್ಭ. ಸುಧಾರಣಾವಾದಿ ಚಿಂತನೆ ಎನ್ನುವುದು ಎಲ್ಲವನ್ನು ಸಹಿಸುತ್ತದೆ. ಉದಾರವಾಗಿ ನೋಡುವುದರಿಂದ ಅದರಲ್ಲಿನ ಸಮಸ್ಯೆಗಳ ತಾರತಮ್ಯ ವ್ಯತ್ಯಾಸವೆನ್ನುವುದು ಮುಖ್ಯವಲ್ಲ. ಹಾಗಾಗಿಯೇ ವಿವಾಹ, ಬಾಲ್ಯವಿವಾಹ, ಮರುವಿವಾಹ ಇವುಗಳ ಬಗ್ಗೆ ತಿರುಮಲಾಂಬ ಆಲೋಚನೆ ಸಾಂಪ್ರದಾಯಿಕವಾಗಿಯೇ

ಇತ್ತು. ತಾವಿರುವ ವಾಸ್ತವತೆಯಲ್ಲಿ ಅವರಿಗೆ ಮರುವಿವಾಹದ ಪ್ರಸ್ತಾಪ ಸುಲಭ ಸಾಧ್ಯವಾಗಿರಲಿಲ್ಲ ಎಂಬ ಸಾಮಾಜಿಕ ವಾಸ್ತವವನ್ನು ನಾವು ಗ್ರಹಿಸಿಕೊಳ್ಳಬೇಕಾಗುತ್ತದೆ.

ಇದೆಲ್ಲಕ್ಕಿಂತ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ತಮ್ಮ ಕಾಲದಲ್ಲಿ ಕೆಲವು ಅವರ ಪುಸ್ತಕಗಳು ಎರಡು ಮೂರು ಸಾವಿರ ಪ್ರತಿಗಳಲ್ಲಿ ೨-೩ ಮುದ್ರಣಗಳಲ್ಲಿ ಪ್ರಕಟಗೊಂಡ ಸಂಗತಿ. ಇಷ್ಟು ಜನಪ್ರಿಯತೆಯನ್ನು ಹೊಂದಿದ ಬರಹಗಾರ್ತಿ ಮುಂದೆ ಏಕಾಏಕಿ ತಮ್ಮ ಬರಹವನ್ನು ಏಕೆ ನಿಲ್ಲಿಸಿಬಿಟ್ಟರು, ತಮ್ಮ ಇಡೀ ಅಸ್ತಿತ್ವವನ್ನು ಏಕೆ ಇಲ್ಲವಾಗಿಸಿಕೊಂಡು ಬಿಟ್ಟರು, ಬದುಕಿರುವಾಗಲೇ 'ಸತ್ತು ಹೋಗಿದ್ದಾರೆ' ಎಂಬ ಸುದ್ಧಿ ಪ್ರಚಾರಕ್ಕೆ ಬಂದದ್ದು ಹೇಗೆ, ಹೆಣ್ಣಾದ ಕಾರಣದಿಂದಲೇ ತಿರುಮಲಾಂಬ ಸಮಾಜದ ಅವಜ್ಞೆಗೆ ಒಳಗಾದರೆ, ಹೀಗೆ ಪ್ರಶ್ನೆಗಳ ಸರಮಾಲೆಯೇ ಏಳುತ್ತದೆ. (ಈ ಬಗ್ಗೆ ವಿದ್ವಾಂಸರು ಸಾಕಷ್ಟು ಚರ್ಚಿಸಿದ್ದಾರೆ). 'ಎಲ್.ಜಿ. ಮೀರಾ'ರವರು ಈ ರೀತಿ ಲೇಖಕಿಯೊಬ್ಬಳನ್ನು ನಿರ್ಲಕ್ಷಿಸಿ ಬಿಡುವ ಸಂಗತಿಯನ್ನು ಕುರಿತು ಸರಿಯಾಗಿ ಪ್ರತಿಕ್ರಿಯಿಸಿದ್ದಾರೆ. "ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಲೇಖಕಿಯಾಗಿ, ಪ್ರಕಾಶಕಿಯಾಗಿ ಬೆಳೆದು ನಿಂತು ವಿಧವಾ ಜೀವನದ ಎಲ್ಲ ಕಷ್ಟಗಳನ್ನು ಅನುಭವಿಸಿ, ಸಾಹಿತ್ಯ ಚರಿತೆಕಾರರ ಅವಜ್ಞೆಗೂ ಒಳಗಾದ ತಿರುಮಲಾಂಬ ಒಂದು ಅರ್ಥದಲ್ಲಿ, ಈ ನಾಡಿನಲ್ಲಿ ಲೇಖಕಿಗೆ, ಅಷ್ಟೇ ಏಕೆ ಮಹಿಳೆಗೆ ಸಿಕ್ಕಿದ ಸ್ಥಾನಮಾನಗಳಿಗೆ ಒಂದು ರೂಪಕದಂತಿದ್ದಾರೆ.......... ತಿರುಮಲಾಂಬ ಅವರ ಚರಿತ್ರೆಯು ಮಹಿಳೆಯರ ಮೌನ ಮತ್ತು ಮಾತಿನ ಹಿಂದಿನ ನೋವುಗಳನ್ನು ಹೊರಚೆಲ್ಲುತ್ತದೆ".[೧೫]

ತಿರುಮಲಾಂಬ ಅವರಿಂದ ಮೊದಲುಗೊಂಡು ಬೆಳಗೆರೆ ಜಾನಕಮ್ಮ, ಲೀಲಾ ಕಾರಂತ, ಆರ್. ಕಲ್ಯಾಣಮ್ಮ ಜಯದೇವಿತಾಯಿ ಲಿಗಾಡೆ, ಹೆಚ್.ವಿ. ಸಾವಿತ್ರಮ್ಮ, ಶಾಂತಾದೇವಿ ಮಾಳವಾಡ, ವಾಸಂತಿಬಾಯಿ ಪಡುಕೋಣೆ, ಸರಸ್ವತಿಬಾಯಿ ರಾಜವಾಡೆ........... ಇನ್ನು ಮುಂತಾದವರಿಂದ ಅಭಿವ್ಯಕ್ತಿಗೊಂಡ ಸಾಹಿತ್ಯದ ಮೂಲಕ ಅಂದಿನ ಹೆಣ್ಣಿನ ಬದುಕಿನ ಸ್ಥಿತಿ-ಗತಿಗಳನ್ನು ಅವಲೋಕಿಸಬಹುದು. ಸ್ವಯಂ ವಿಧವೆಯಾದ ಲೇಖಕಿಯರು, ಬರೆಯಲು ಪ್ರೋತ್ಸಾಹವೇ ದೊರಕದ ಸ್ಥಿತಿ, ವಿದ್ಯಾಭ್ಯಾಸವಿಲ್ಲದ ಹಿನ್ನಲೆ, ಧಾರ್ಮಿಕ ಕಟ್ಟುಪಾಡುಗಳು, ಬಾಲ್ಯ ವಿವಾಹ, ಗೃಹಿಣಿತ್ವದ ಜವಾಬ್ದಾರಿ – ಈ ಮಿತಿಗಳು ಮತ್ತು ಕೆಲವರಿಗೆ ದೊರಕಿದ ಇಂಗ್ಲೀಷ್ ವಿದ್ಯಾಭ್ಯಾಸ, ಮನೆಯಲ್ಲಿ ತಂದೆ, ಗಂಡನಿಂದ ಬರವಣಿಗೆಗೆ ದೊರಕಿದ ಪ್ರೋತ್ಸಾಹ, ಸುಧಾರಣಾವಾದಿ ಚಳುವಳಿಯ ಹಿನ್ನಲೆ- ಈ ಎರಡೂ ಅಂಶಗಳಿಂದ ಮಿಳಿತಗೊಂಡು ಮಹಿಳಾ ಬರಹ ಸೃಷ್ಟಿಯಾಯ್ತು. ಒಟ್ಟಾರೆಯಾಗಿ ಈ

ಸಂದರ್ಭದ ಬರಹ; "ಮುಂದೆ ವಿಸ್ತೃತವಾಗಿ ಬೆಳೆಯಲಿದ್ದ ಆಧುನಿಕ ಮಹಿಳಾ ಸಾಹಿತ್ಯಕ್ಕೆ ಒಂದು ಮನ್ಸೂಚನೆಯಾಯಿತು. ಈ ಲೇಖಕಿಯರು ತಮ್ಮ ಸ್ತ್ರೀಪರ ಚಿಂತನೆಯಿಂದಾಗಿ ತಮ್ಮ ಸೀಮಿತ ಚೌಕಟ್ಟಿನಲ್ಲೇ ಸ್ವಂತಿಕೆಯನ್ನು ಮೆರೆದರು........... ತಮ್ಮ ಸಮಕಾಲೀನ ಲೇಖಕರಿಗಿದ್ದ ಸ್ವಾತಂತ್ರ್ಯ ಮತ್ತು ಸವಲತ್ತುಗಳನ್ನು ಪಡೆಯದೆಯೇ ಬರಹವೆಂಬ ಚಟುವಟಿಕೆಗೆ ನೀರೆರೆಯುತ್ತಾ ಬಂದ ಲೇಖಕಿಯರು ಕನ್ನಡಕ್ಕೆ ನವೋದಯ ಸ್ತ್ರೀ ಬರವಣಿಗೆಯನ್ನು ಕೊಟ್ಟಿದ್ದಾರೆ. ಅವರ ಬರಹದ ಶಕ್ತಿ ಮಿತಿಗಳೆರಡೂ ಭಾಗಶಃ ನಮ್ಮ ಸಂಸ್ಕೃತಿಯ ಶಕ್ತಿ ಮಿತಿಗಳನ್ನು ತೋರಿಸುತ್ತದೆ.[೧೨]

ಎರಡನೆಯ ತಲೆಮಾರಿನ ಮಹಿಳಾ ಬರಹಗಳನ್ನು ಗುರುತಿಸುವ ಸಂದರ್ಭದಲ್ಲಿ, ಆ ಸಂದರ್ಭದಲ್ಲಿ ಸಾಮಾಜಿಕವಾಗಿ ಆದ ಪಲ್ಲಟಗಳನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ದೊರಕಿದ ಶಿಕ್ಷಣ, ಕೈಗಾರೀಕರಣದಿಂದಾಗಿ ಒದಗಿದ ಉದ್ಯೋಗಾವಕಾಶಗಳು ಮಹಿಳೆಯ ಆಲೋಚನಾ ಕ್ರಮಗಳಿಗೆ ಒಂದಿಷ್ಟು ಬದಲಾವಣೆಯನ್ನು ತಂದವು. ಸಾಹಿತ್ಯದ ವಸ್ತು ಮತ್ತು ರೂಪ ನಿರ್ದಿಷ್ಟ ಸಾಮಾಜಿಕ ಪರಿಸರಕ್ಕೆ ಅನುಗುಣವಾಗಿ ಬದಲಾಗುತ್ತಾ ಹೋಗುತ್ತದೆ. 'ಸಾಮಾಜಿಕ ಅಭಿವೃದ್ಧಿಯಾಗುತ್ತಿರುವಂತೆಯೇ ಸಾಮಾಜಿಕ ಸಂರಚನೆಯು ಬದಲಾಗುತ್ತದೆ' ಎನ್ನುವ ಮಾರ್ಕ್ಸ್‌ವಾದಿ ಆಲೋಚನೆಯನ್ನು ಇಲ್ಲಿ ಗಮನಿಸಬಹುದು. ಇದೆಲ್ಲದರ ಜೊತೆಯಲ್ಲಿಯೇ ಪ್ರಗತಿಶೀಲ ಚಳುವಳಿಯು ಸ್ವಾತಂತ್ರ್ಯದ ನಂತರ ಸಾಮಾಜಿಕ, ಸಾಂಸ್ಕೃತಿಕ ಜಗತ್ತು ಭಗ್ನಗೊಂಡುದರ ನಿರಾಶೆ ಮತ್ತು ಆಕ್ರೋಶಗಳೊಂದಿಗೆ ತನ್ನ ಬರಹಗಳನ್ನು ಪ್ರಾರಂಭಿಸಿತು. ಮಾರ್ಕ್ಸವಾದ ಈ ಚಳುವಳಿಯ ಬೆನ್ನೆಲುಬಾಗಿತ್ತು. ಇದನ್ನೇ 'ಮಂಗಳಾ ಪ್ರಿಯದರ್ಶಿನಿ'ಯವರು "ಪ್ರಗತಿಶೀಲ ಚಳುವಳಿ ತನ್ನೊಳಗಿನ ಒತ್ತಡಗಳು, ಅದನ್ನು ಕಾರಿಕೊಳ್ಳುವ ಆವೇಶಯುತ ಬರವಣಿಗೆ, ತೀವ್ರತೆ, ಪ್ರಖರತೆ, ಅತಿಯಾದ ಅಬ್ಬರ, ಘೋಷಣೆ – ಇವುಗಳ ಹಿನ್ನಲೆಯಲ್ಲಿ ವಿಶೇಷವಾಗಿ ಲೇಖಕಿಯರು ತಮ್ಮನ್ನು ತಾವು ಗುರುತಿಸಿಕೊಳ್ಳದಿದ್ದರೂ, ಈ ಯುಗದಲ್ಲಿ ಬರೆವ ಲೇಖಕಿಯರು ತಮಗೇ ತಿಳಿಯದಂತೆ ಕೆಲವು ಅಂಶಗಳಿಗೆ ಬದ್ಧರು"[೧೨] ಎನ್ನುತ್ತಾ ಅಂದಿನ ಕಾಲದಲ್ಲಿ ಬಂದ ಮಹಿಳಾ ಬರವಣಿಗೆಯ ಹಿನ್ನಲೆಯನ್ನು ಗುರುತಿಸುತ್ತಾರೆ.

ಮೊದಲನೆಯ ತಲೆಮಾರಿನ ಲೇಖಕಿಯರಾದ ಎಚ್.ವಿ. ಸಾವಿತ್ರಮ್ಮ, ಸರಸ್ವತೀಬಾಯಿ ರಾಜವಾಡೆ ಜಯದೇವಿತಾಯಿ ಲಿಗಾಡೆ, ಎರಡನೆಯ ತಲೆಮಾರಿನ ಬರಹದ ಸಂದರ್ಭದಲ್ಲಿ ತಮ್ಮ ಬರಹಗಳನ್ನು ಹೊಸ ಎಚ್ಚರದೊಂದಿಗೆ ಅಭಿವ್ಯಕ್ತಿಸಿದರು.

ಇವರೊಂದಿಗೆ ಎರಡನೆಯ ತಲೆಮಾರಿನ ಲೇಖಕಿಯರಾದ ತ್ರಿವೇಣಿ, ವಾಣಿ, ಅನುಪಮಾ ನಿರಂಜನ, ಎಂ.ಕೆ. ಇಂದಿರಾ, ರಾಜಲಕ್ಷ್ಮಿ, ಎನ್.ರಾವ್, ವೀಣಾ ಶಾಂತೇಶ್ವರ, ಸುಶೀಲಾ ಕೊಪ್ಪರ........... ಇವರನ್ನು (ಹೀಗೆ ೧೫೪ ಜನರನ್ನು ೧೯೫೦ ರಿಂದ ೧೯೭೫ರವರೆಗೆ ಬಂದ ಲೇಖಕಿಯರು) ಲೇಖಕಿಯರ ಅನುಬಂಧದಲ್ಲಿ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಮಂಗಳಾ ಪ್ರಿಯದರ್ಶಿನಿಯವರು ಗುರುತಿಸುತ್ತಾರೆ.

ಮೊದಲನೆಯ ತಲೆಮಾರಿನ ಲೇಖಕಿಯರಿಗೆ ದಕ್ಕದ ಶಿಕ್ಷಣದ ಸೌಲಭ್ಯ, ಸುಧಾರಿತ ಬದುಕಿನ ಹಿನ್ನೆಲೆ ಈ ಎರಡನೆಯ ತಲೆಮಾರಿನ ಲೇಖಕಿಯರಿಗಿದೆ. ಆದರೂ ಸಾಹಿತ್ಯಿಕವಾಗಿ ಈ ತಲೆಮಾರಿನ ಲೇಖಕಿಯರ ಬರಹಗಳನ್ನು ಗಮನಿಸಿದಾಗ ನಿರಾಶೆಯಾಗುತ್ತದೆ. ತಳಮಟ್ಟದ ಯಾವುದೇ ಬದಲಾವಣೆಗಳನ್ನು "ಇವರ ಬರಹಗಳು ಕಟ್ಟಿಕೊಡಲಿಲ್ಲ. ಬದಲಾಗಿ ಇವರ ಕೃತಿಗಳಲ್ಲಿ ಸಂಸಾರವೇ ಕೇಂದ್ರ. ಸಂಸಾರದಾಚೆಗಿನ ಬದುಕಿನ ಬಗೆಗೆ ಕಣ್ಣಾಡಿಸುವ ಪ್ರಯತ್ನವಿಲ್ಲ. ಇವರಿಗೆ ಬದುಕಿನ ಆದರ್ಶಗಳಷ್ಟೇ ಮುಖ್ಯವಾಗುತ್ತದೆ, ಹೊರತು ಗತಿತರ್ಕತೆ ಅಲ್ಲ. ಹೃದಯವನ್ನು ತಾಕುವ, ಕಲಕುವ, ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ ಎಂಬ ವಸ್ತು ಘಟನೆಗಳು ಇವರಿಗೆ ಬೇಡವಾಗುತ್ತದೆ........ ಪುರುಷ ಪಾತ್ರ ಮಾದರಿಗಳನ್ನೇ ಅನುಕರಣೆ ಮಾಡುವುದು ಇವರ ಗುಣವಾಯಿತು".[೧೮] ಎಂದು ಹೇಳುವ ಮಂಗಳಾ ಪ್ರಿಯದರ್ಶಿನಿಯವರ ಮಾತುಗಳು ಸಾಹಿತ್ಯ ವಿಮರ್ಶೆಗಳನ್ನೇ ಒಪ್ಪಿಡುವಂತಿವೆ. ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಖಂಡಿತವಾಗಿಯೂ ಆ ಕಾಲದ ಬಹುತೇಕ ಮಹಿಳೆಯರ ಬರಹಗಳನ್ನು ಗಮನಿಸಿದರೆ ಸಿಕ್ಕುವ ಮಾದರಿಗಳು ಇವೇ. ಆದರೆ ಈ ರೀತಿಯ ಮಾದರಿಗಳ ಹಿಂದಿರುವ ಸಾಮಾಜಿಕತೆಯನ್ನು ನಾವು ಲಕ್ಷಿಸದಿದ್ದರೆ, ಇಂಥ ಕೃತಿಗಳ ಗ್ರಹಿಕೆ ಅಪೂರ್ಣವಾಗುತ್ತದೆ.

ಎರಡನೆಯ ತಲೆಮಾರಿನ ಬರಹಗಾರ್ತಿಯರಿಗೆ ದೊರಕಿದ ಶಿಕ್ಷಣ ಎಂಥದ್ದು, ಅಲ್ಲಿ ಅವರಿಗೆ ದೊರೆತ ತರಬೇತಿಗಳೇನು ಎಂಬುದನ್ನು ಕೊಂಚ ಲಕ್ಷಗೊಟ್ಟು ಗಮನಿಸಿದರೆ ಕಾಣುವ ಸತ್ಯಗಳು ಬೇರೆಯೇ ಆಗಿರುತ್ತವೆ. ಅಂದಿನ ಕಾಲದಲ್ಲಿ (ಇಂದಿಗೂ) ಸ್ತ್ರೀಗೆ ದೊರಕುತ್ತಿದ್ದ ಶಿಕ್ಷಣ ಪುರುಷ ಬಯಸುತ್ತಿದ್ದಂಥ ನೆಲೆಯದು. ಗೃಹಿಣಿತ್ವದ ತರಬೇತಿ ಕೇಂದ್ರಗಳಾಗಿ ಶಿಕ್ಷಣ ಸಂಸ್ಥೆಗಳು ಕೆಲಸ ಮಾಡುತ್ತಿದ್ದವು. 'ಬೆಟ್ಟಿ ಫ್ರಿಡನ್' ತನ್ನ 'ದ ಫೈಮಿನೈನ್ ಮಿಸ್ಟಿಕ್'ನಲ್ಲಿ ಅಮೇರಿಕಾದ ಗೃಹಿಣಿಯರು ತರಗತಿಗಳಲ್ಲಿ ನಿರ್ಮಾಣವಾಗುತ್ತಿದ್ದರು. ಅಲ್ಲಿನ ವಿದ್ಯಾಭ್ಯಾಸವೆಲ್ಲಾ ಆ ಒಂದು ಮಹತ್ ಸಾಧನೆಗೆ

ಪೂರಕವಾಗಿ ಮಾತ್ರವೇ ಇರುತ್ತಿತ್ತು ಎಂಬುದನ್ನು ಬಹಳ ವಿವರವಾಗಿ ಹೇಳುತ್ತಾಳೆ. ಆಧುನಿಕ ಗಂಡನಿಗೆ ಆಧುನಿಕ ಹೆಂಡತಿ ಬೇಕಾಗಿತ್ತು ಅಷ್ಟೇ. ಮನೆಯಲ್ಲಿ ಮಕ್ಕಳಿಗೆ ಶಿಕ್ಷಣ ಹೇಳುವ ಮಟ್ಟಿಗಾದರೆ ಸಾಕು. ಮತ್ತದೇ ತಾಯಿ, ಹೆಂಡತಿ, ಮಗಳು – ಈ ಸ್ಥಿರ ಮಾದರಿಗಳಲ್ಲೇ ಹೆಣ್ಣನ್ನು ಜಗತ್ತು ಬಯಸುತ್ತಿತ್ತು. ಹೀಗೆ ತನ್ನ ಸುತ್ತ ಇರುವ ಬಂಧನದಿಂದ ಹೊರಬರುವ ಒಂದು ದಾರಿಯಾಗಿ ಬರಹವನ್ನು ಆಯ್ಕೆ ಮಾಡಿಕೊಂಡರೂ, ಯಾವ ಕತೆ, ಯಾರ ಕತೆ, ಎಂಥ ಕತೆ ಎಂಬುದಕ್ಕೆ ಅಂತಿಮವಾಗಿ ಇರುವ ಮಾದರಿಗಳು ಬಳಸಬೇಕಾದ ಭಾಷೆ ಕೂಡಾ ಪುರುಷನದೇ. ತನ್ನ ಕೃತಿಯಲ್ಲಿ ಅವಳೊಂದು ಹೆಣ್ಣು ಜಗತ್ತನ್ನು ಕಟ್ಟಿಕೊಟ್ಟರೂ ಅದು ಪುರುಷ ಬಯಸುವ ಹೆಣ್ಣಿನ ಜಗತ್ತಿನ ಪುನರಾವರ್ತನೆ ಆಗಿರುತ್ತದೆ. ಸಹಜವಾಗಿಯೇ ಅಲ್ಲಿ ಮದುವೆ, ಮರುವಿವಾಹ, ವಿಧವೆಯ ಸಮಸ್ಯೆ, ವರದಕ್ಷಿಣೆಯ ಸಮಸ್ಯೆ, ಉದ್ಯೋಗಸ್ಥ ಮಹಿಳೆಯ ಸಮಸ್ಯೆ, ಅವಿವಾಹಿತ ಮಹಿಳೆಯರ ಸಮಸ್ಯೆ, ವಿದ್ಯಾಭ್ಯಾಸ, ನೌಕರಿ–ಏನೆಲ್ಲ ಚರ್ಚೆಗಳು ನಡೆದರೂ ಅವೆಲ್ಲವೂ ಆಧುನಿಕ ಪುರುಷನ ಚಿಂತನೆಯ ಸಾದರ ರೂಪಗಳಷ್ಟೇ.

ಪ್ರಸ್ತುತ ಅಧ್ಯಯನದ ಆಸಕ್ತಿ ಕೂಡಾ ಈ ಮಾದರಿಯ ಸಾಹಿತ್ಯ ಕೃತಿಗಳನ್ನು ಅವುಗಳ ಸಾಮಾಜಿಕ ಹಿನ್ನಲೆಯಲ್ಲಿ ಗ್ರಹಿಸುವುದೇ ಆಗಿದೆ. 'ಜನಪ್ರಿಯ' ಕಾದಂಬರಿಗಳೆಂದು ಗುರುತಿಸಲ್ಪಡುವ ಮಹಿಳಾ ಅಭಿವ್ಯಕ್ತಿಯನ್ನು ಸಾಹಿತ್ಯೇತರ ಮಾನದಂಡಗಳಿಂದ ಗಮನಿಸಿದರೆ ಅನೇಕ ಅಂಶಗಳು ವಿಧಿತವಾಗುತ್ತವೆ. ಇಂಥ ರಚನೆಗಳ ಹಿಂದೆ ಅವಳು ಪಡೆದುಕೊಂಡ ವಿದ್ಯಾಭ್ಯಾಸ, ಆ ಸಂದರ್ಭದಲ್ಲಿನ ತರಬೇತಿ, ತಲತಲಾಂತರಗಳಿಂದ ಪಡೆದುಕೊಂಡ ಬೌದ್ಧಿಕ, ಮಾನಸಿಕ ಸ್ಥಿತಿಗಳು ಅರ್ಥವಾಗುತ್ತಾ ಹೋಗುತ್ತವೆ. ಇಂಥ ಕೃತಿಗಳನ್ನು ರಚಿಸುವ ಮತ್ತು ಓದುವ ಮಹಿಳೆಯರು ಕೂಡಾ ಈ ಸಾಮಾಜಿಕತೆಯ ಸಿದ್ಧಮಾದರಿಗಳೇ. ಪುರುಷ ಲೋಕದಿಂದ ಒಪ್ಪಿತವಾದ ಚೌಕಟ್ಟಿನೊಳಗೆ ನಿಂತು ಬರಹಗಳನ್ನು ಮಾಡಿದಾಗ ಇಂಥ ಫಲಶೃತಿಗಳೇ ದಕ್ಕುತ್ತವೆ. ಆದರೆ ಇದನ್ನು ಮೀರಿ ನಿಲ್ಲುವ ಶಕ್ತಿ ವೈಯಕ್ತಿಕ ನೆಲೆಯದಕ್ಕಿಂತ ಹೆಚ್ಚಾಗಿ ಸಾಮೂಹಿಕ ನೆಲೆಯದ್ದಾಗಬೇಕಾಗಿರುತ್ತದೆ.

ಮೂರನೆಯ ತಲೆಮಾರಿನ ಲೇಖಕಿಯರನ್ನು ನಾವು ಗಮನಿಸಿದಾಗ ಕೆಲವರಾದರೂ ಒಂದು ಹೊಸ ಎಚ್ಚರದೊಂದಿಗೆ ಸೂಕ್ಷ್ಮವಾದ ನೆಲೆಯಲ್ಲಿ ಅಭಿವ್ಯಕ್ತಿ ಮಾಡುತ್ತಿರುವುದನ್ನು ಗಮನಿಸಬಹುದು. ಕಳೆದೆರಡು ದಶಕಗಳಲ್ಲಿ ಸ್ತ್ರೀವಾದಿ ಚಿಂತನೆಯ ತಾತ್ವಿಕ ಎಚ್ಚರದೊಂದಿಗೆ ಬರೆಯುತ್ತಿರುವ ಬರಹಗಾರ್ತಿಯರಾದ ನೇಮಿಚಂದ್ರ, ಸವಿತಾ ನಾಗಭೂಷಣ, ನಾಗವೇಣಿ,

ವೈದೇಹಿ, ಗೀತಾ ನಾಗಭೂಷಣ................ ಮತ್ತಿತರರು ಇಂದು ಕಾವ್ಯ, ಕಾದಂಬರಿ, ಕತೆ, ವಿಮರ್ಶೆಗಳಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುತ್ತಿದ್ದಾರೆ. ಸ್ತ್ರೀತ್ವದ ಹೊಸ ಎಚ್ಚರ ಅದನ್ನು ಮೀರಲಾಗದ ಅವಳ ಕಟುವಾಸ್ತವತೆ, ಅವನ್ನು ಮೀರಲು ಸಾಧ್ಯ ಮಾಡುವ ಆತ್ಮವಿಶ್ವಾಸದ ಒಗ್ಗೂಡುವಿಕೆ. ತನ್ನತನದ ಅರಿವು, ಹೊಸ ಓದು, ಆರ್ಥಿಕ ಸಬಲತೆ ಈ ಎಲ್ಲ ಅಂಶಗಳು ಅವರ ಬರಹವನ್ನು ರೂಪಿಸಿವೆ. ಲೈಂಗಿಕ ಪ್ರಶ್ನೆಗಳು, ತಾಯ್ತನದ ಬಗೆಗೆ ಚಿಂತನೆ, ಸಮಾನತೆಗಾಗಿ ಹೋರಾಟ, ಪ್ರಜ್ಞಾವಂತ ಮಹಿಳೆಯ ರೂಪುಗೊಳ್ಳುವಿಕೆ – ಇವೆಲ್ಲಾ ಬರಹಗಳಲ್ಲಿ ಕಾಣುತ್ತಿರುವ ಅಂಶಗಳು.

ಈ ಎಲ್ಲ ಬದಲಾವಣೆಗಳೊಂದಿಗೆನೇ ಆಧುನಿಕತೆ, ತಂತ್ರಜ್ಞಾನ, ಪಿತೃಪ್ರಧಾನತೆಯ ಹೊಸ ಹುನ್ನಾರಗಳು, ಅವಳ ಬದುಕನ್ನು ಬೇರೆ, ಬೇರೆ ಹೊಸ ವಿಧಾನಗಳಿಂದ ಬಂಧಿಸಿಡುವಲ್ಲಿ ನಿರಂತರವಾಗಿ ತಮ್ಮ ಅಸ್ತ್ರಗಳನ್ನು ಪ್ರಯೋಗಿಸುತ್ತಲೇ ಇವೆ. ಇವುಗಳ ಎದುರಿಗೆ ಹೇಗಾದರೂ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕೆಂಬ ಮಹಿಳೆಯ ಪ್ರಜ್ಞೆ ಅವಿರತವಾಗಿ ಬರಹದ ಮೂಲಕವೂ ಪ್ರಯತ್ನಪಡುತ್ತಿದೆ.



**ಅಡಿಟಿಪ್ಪಣಿಗಳು**

೧. ಭಾರತೀಯ ಕಾವ್ಯಮೀಮಾಂಸೆ, ತೀ.ನಂ. ಶ್ರೀಕಂಠಯ್ಯ
೨. ಭಾರತೀಯ ಕಾವ್ಯಮೀಮಾಂಸೆ, ತೀ.ನಂ. ಶ್ರೀಕಂಠಯ್ಯ, ಪುಟ ೧೩೪
೩. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ, ಪುಟ ೧೬
೪. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೬೨
೫. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಲೇ. ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ, ವಿಜಯಾದಬ್ಬೆ, ಪುಟ ೮೯
೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೧೧
೭. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೭೬
೮. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೭೩
೯. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೧೦೮
೧೦. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೧೧೮
೧೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೧೭೧
೧೨. ಸ್ತ್ರೀವಾದ, ಎಚ್.ಎಸ್. ಶ್ರೀಮತಿ, ಪುಟ ೪೩
೧೩. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೧೯೪
೧೪. ನಾಡು ನುಡಿಯ ರೂಪಕ: ರಾಷ್ಟ್ರ ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು, ಶಿವರಾಮ ಪಡಿಕ್ಕಲ್, ಪುಟ ೭೬-೭೭

೧೫. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೨೫೬
೧೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೨೮೭
೧೭. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೨೯೯
೧೮. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್.ಎಸ್. ಶ್ರೀಮತಿ (ಸಂ), ಪುಟ ೩೬೬

# ಅಧ್ಯಾಯ – ಮೂರು

# ಅಧ್ಯಾಯ–ಮೂರು

## ೩.೧ ಪ್ರಸ್ತಾವನೆ

ಮಹಿಳಾ ಸೃಜನತೆ, ಅಭಿವ್ಯಕ್ತಿಗೊಂಡು ವಿಮರ್ಶೆಯ ಹಾದಿಯಲ್ಲಿ ಹಾಯುವಾಗ ಸಾಹಿತ್ಯ ಚರಿತ್ರೆಗಳಲ್ಲಿ ದಾಖಲಾಗದೆ ಇರುವುದನ್ನು, ದಾಖಲಾದರೂ ಸೂಕ್ತವಾದ ಮಾನ್ಯತೆ ದೊರಕದಿರುವುದನ್ನು ಹಿಂದಿನ ಅಧ್ಯಾಯಗಳಲ್ಲಿ ಗಮನಿಸಲಾಗಿದೆ. ಕನ್ನಡಕ್ಕೆ ಸಂಬಂಧಿಸಿದ ಚಾರಿತ್ರಿಕ ದಾಖಲೆಯೂ ಮಹಿಳಾ ಬರಹಗಳನ್ನು ಗಮನಿಸಬೇಕಾದ ನೆಲೆಗಳೇ ಬೇರೆ ಎಂಬುದನ್ನು ಸೂಚಿಸುತ್ತವೆ. ಅನ್ಯ ಜ್ಞಾನ ಶಿಸ್ತುಗಳ ಮೂಲಕ, ಸ್ತ್ರೀವಾದಿ ಚಿಂತನೆಗಳ ತಾತ್ವಿಕತೆಯ ಮೂಲಕ ಇಡೀ ಸಾಹಿತ್ಯ ಚರಿತ್ರೆಯನ್ನು, ಮಹಿಳಾ ಸಾಹಿತ್ಯವನ್ನು ಮರುವ್ಯಾಖ್ಯಾನಗೊಳಸಬೇಕಾದ ತುರ್ತು ಇಂದಿನದಾಗಿದೆ. ಹೀಗಾದಾಗ ಮಾತ್ರ ಹೊಸ ತೀರ್ಮಾನಗಳಿಗೆ ಅರ್ಥ ಉಂಟಾಗಲು ಸಾಧ್ಯವಾಗುತ್ತದೆ.

ಹಿಂದೆ ಸಂಕ್ಷಿಪ್ತವಾಗಿ ಚರ್ಚಿತವಾದ ಸಂಗತಿಯನ್ನು ಬೆಳಸಬಹುದಾದರೆ, ಪಿತೃ ಪ್ರಧಾನ ವ್ಯವಸ್ಥೆಯಲ್ಲಿನ ಎಲ್ಲ ಅಂಗವ್ಯವಸ್ಥೆಗಳು ಪುರುಷ ಪ್ರಧಾನ ಧೋರಣೆಗಳನ್ನೇ ಮೈಗೂಡಿಸಿಕೊಂಡಿರುತ್ತವೆ ಎಂಬುದು ಸಿದ್ಧಸಂಗತಿ. ಸಂಸ್ಕೃತಿ ಅಂಥದೊಂದು ಬಹುದೊಡ್ಡ ಕಟ್ಟೋಣ. ಪಾಶ್ಚಾತ್ಯ ಚಿಂತಕರು ಮತ್ತು ದೇಶಿ ಚಿಂತಕರು ಈ ಕುರಿತ ಚರ್ಚೆಯನ್ನು ಬಹಳ ವ್ಯಾಪಕವಾದ ನೆಲೆಯಲ್ಲಿ ಬೆಳೆಸಿದ್ದಾರೆ. "ಸಂಸ್ಕೃತಿ ಎಂಬ ಪದಕ್ಕೆ ಅನೇಕ ಅರ್ಥಗಳಿವೆ. ಸಂಸ್ಕೃತಿ ಎಂಬುದು ಸಂಸ್ಕೃತ ಭಾಷೆಯ ಪದ. 'ಸಮ್ಯಕ್' ಎಂದರೆ ಉತ್ತಮ, ಪವಿತ್ರ, ಶ್ರೇಷ್ಟ ಎಂಬ ಅರ್ಥಗಳಿದ್ದು, 'ಕೃತಿ' ಎಂದರೆ ನಿರ್ವಹಿಸಲಾದ ಕಾರ್ಯ, ನೀಡಿದ ಕೊಡುಗೆ ಎಂದು ಅರ್ಥೈಸಲಾಗಿದೆ. ಈ ಶಬ್ದವನ್ನು ಇಂಗ್ಲೀಷ ಭಾಷೆಯ 'Culture' ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'Cult' ಎಂಬ ಶಬ್ದಕ್ಕೆ ಆರಾಧನಾ ಪದ್ಧತಿ, ವಿಧಿ, ಮತ, ಶ್ರದ್ಧೆ, ಪಂಥ, ಉಪಾಸನೆ, ಭಕ್ತಿ, ಆಸಕ್ತಿ ಮುಂತಾದ ಅರ್ಥಗಳಿವೆ. Culture ಎಂಬುದಕ್ಕೆ ಉಳಿಮೆ, ಕೃಷಿ, ಸಾಗುವಳಿ, ಬೇಸಾಯ ಎಂಬ ಅರ್ಥಗಳ ಜೊತೆಗೆ ಜೇನು ಹುಳ, ಮೀನು ಮುಂತಾದವುಗಳ ಸಾಕಣೆ ಹಾಗೂ ಅಭಿವೃದ್ಧಿಗೊಳಿಸಲಾದ ಜೀವರಾಶಿ, ಬುದ್ಧಿ, ವಿಕಾಸ, ಅಭಿವೃದ್ಧಿ, ಸಂಸ್ಕಾರ, ಸಂಸ್ಕೃತಿ ಇತ್ಯಾದಿ ಅರ್ಥಗಳಿವೆ"[೧]. ಪಾಶ್ಚಾತ್ಯ ಸಂದರ್ಭದಲ್ಲಿನ ಚಿಂತಕನಾದ ಮ್ಯಾಥ್ಯೂ ಅರ್ನಾಲ್ಡ್ (Mathew Arnold) ಸಂಸ್ಕೃತಿ ಎಂಬುದನ್ನು ಹೀಗೆ ವ್ಯಾಖ್ಯಾನಿಸುತ್ತಾನೆ. "Culture(-----) has one great passion for sweetness and light.

It has one even yet greater!- the passion for making them prevail. It is not satisfied till we all come to a perfect man; it knows that the sweetness and light of the few must be imperfect until the row and unkindled masses of humanity are touched with sweetness and light"[೨] ಎಫ್.ಆರ್. ಲೆವೀಸ್ (F.R. Leavis) ರೆಮಾಂಡ್ ವಿಲಿಯಮ್ಸ್ (Raymond Williams) ಮುಂತಾದವರು ಸಂಸ್ಕೃತಿ ಚಿಂತನೆಯನ್ನು ಬೆಳೆಸಿದ್ದಾರೆ. ಈ ಕುರಿತೇ ಹೇಳುವ 'ಇ.ಬಿ. ಟೈಲರ್' ಎಂಬ ಸಮಾಜಶಾಸ್ತ್ರಜ್ಞ ಸಂಸ್ಕೃತಿ ಎಂದರೆ ಜ್ಞಾನ, ನಂಬಿಕೆ, ಕಲೆ, ನೀತಿ, ಕಾನೂನು, ಸಂಪ್ರದಾಯ ಮತ್ತು ಮಾನವನು ಸಮಾಜದ ಸದಸ್ಯನಾಗಿ ಪಡೆದ ಎಲ್ಲ ಸಾಮರ್ಥ್ಯಗಳನ್ನೊಳಗೊಂಡ ಸಂಕೀರ್ಣ ವ್ಯವಸ್ಥೆ ಎಂದಿದ್ದಾನೆ".[೩] ಹೀಗೆ ಸಂಸ್ಕೃತಿ ಎನ್ನುವುದು ಮನುಷ್ಯ ಕಟ್ಟಿಕೊಳ್ಳುವ ಸಂಗತಿಯಾದ್ದರಿಂದ ತನಗೆ ಬೇಕಾದಂತೆ ಅದನ್ನು ಕಟ್ಟುತ್ತಾನೆ. ಅದೇ ಸತ್ಯ ಎಂದು ಶಾಸನ ವಿಧಿಸುತ್ತಾನೆ.

ಈಗಾಗಲೇ ಚರ್ಚಿಸಿದಂತೆ ಮಾನವ ಸಂಸ್ಕೃತಿ ಎಂದರೆ ಪುರುಷ ಸಂಸ್ಕೃತಿ ಎಂದೇ ವಿದಿತ. ಈ ಸಂಸ್ಕೃತಿಯಲ್ಲೇ 'ಸ್ತ್ರೀ' ಮತ್ತು 'ಸ್ತ್ರೀತ್ವ' ಎಂಬ ಪರಿಕಲ್ಪನೆಗಳು ರೂಪಗೊಂಡದ್ದು ಸ್ತ್ರೀ ಜೈವಿಕ ವ್ಯತ್ಯಾಸವನ್ನು ಸೂಚಿಸಿದರೆ 'ಸ್ತ್ರೀತ್ವ' ಎನ್ನುವುದು, ಸಾಮಾಜಿಕವಾಗಿ ನಿರ್ಮಾಣಗೊಂಡ ಒಂದು ಮಿಥ್/ಭ್ರಮೆ. ಇಲ್ಲಿ ಸ್ತ್ರೀ ಗುಣಗಳೆಂದು ದುರ್ಬಲ, ನಾಚಿಕೆ, ಚಂಚಲ, ಅಧೈರ್ಯ............ ಇತ್ಯಾದಿ ನೇತ್ಯಾತ್ಮಕ ಸಂಗತಿಗಳನ್ನು ಹೆಸರಿಸುತ್ತಾರೆ. ಅವಳ ಜೈವಿಕ ರಚನೆಯಿಂದಾಗಿ ನಿರ್ವಹಿಸುವ ಗರ್ಭಧಾರಣೆ, ಹೆರಿಗೆ, ಹಾಲೂಡಿಸುವ ಕೆಲಸಗಳನ್ನೇ ಮುಂದೆ ಮಾಡಿ ಅವೇ ಅವಳ ಚಹರೆಗಳು ಎಂಬ ಚಿಂತನೆಗಳನ್ನು ಹುಟ್ಟು ಹಾಕುತ್ತಾರೆ. 'An Young boy is an young boy But an young girl is an young women' ಎಂಬ ಆಂಗ್ಲ ಗಾದೆ ಈ ಸಂದರ್ಭದಲ್ಲಿ ಅನ್ವಯವಾಗುತ್ತದೆ. ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಅವಳನ್ನು ವಿವಾಹ, ತಾಯ್ತನ, ಮಕ್ಕಳ ಪಾಲನೆ-ಪೋಷಣೆ, ಗೃಹಕೃತ್ಯಗಳು ಇವೇ ಅವಳ ಮುಖ್ಯ ಜವಾಬ್ದಾರಿಗಳು ಎಂಬ ಮಿಥ್‌ಗಳನ್ನು ಹುಟ್ಟುಹಾಕಿ, ಅವಳ ಬದುಕನ್ನು ದುರ್ಭರ ಮಾಡಲಾಗಿದೆ. ಆ ಮೂಲಕ ಮಹಿಳಾ ಅಸ್ಮಿತೆಯನ್ನು, ಪರಂಪರೆಗಳನ್ನು ಅಪಮೌಲ್ಯಗೊಳಿಸಲಾಗಿದೆ. ಸಂಸ್ಕೃತಿಯ ಹೆಸರಿನಲ್ಲಿಯೇ ನಡೆಯುವ ಆಚರಣೆಗಳು ಮಹಿಳಾ ಬದುಕನ್ನು ಉಸಿರುಗಟ್ಟಿಸಿವೆ. ಹೆಣ್ಣಿನ ಭ್ರೂಣಾವಸ್ಥೆಯಿಂದ ಹಿಡಿದು ಸಾವಿನವರೆಗೂ ಸಂಸ್ಕೃತಿಯ ಹೆಸರಿನಲ್ಲಿ ಅವಳ ಶೋಷಣೆ ನಡೆಯುತ್ತಿರುವುದನ್ನು ಗಮನಿಸಬಹುದು.

ಈ ಎಲ್ಲ ಸಂಗತಿಗಳು ಅವಳ ಬುದ್ಧಿ ಭಾವಗಳನ್ನು ಆವರಿಸಿ ಸ್ವತಃ ಅವಳೇ, ಇವಿಷ್ಟೆ ನನ್ನ ಕೆಲಸಗಳು ಎನ್ನುವಂಥ ವಿಸ್ಮೃತಿಗೆ ಹೋಗಿದ್ದಾಳೆ. ಇಂಥ ಸಾಮಾಜೀಕರಣ ಅವಳ ಅರಿವನ್ನು ಖಂಡಿತವಾಗಿಯೂ ಮಬ್ಬು ಮಾಡಿದೆ. ಚರಿತ್ರೆ, ಧರ್ಮ, ಭಾಷೆ, ಮೌಲ್ಯಗಳು, ಸಾಹಿತ್ಯ, ಕಲೆ, ವಿಜ್ಞಾನ – ಎಲ್ಲವೂ ಸಂಸ್ಕೃತಿಯ ಅಂಶಗಳನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುತ್ತವೆ.

ಉದಾರವಾದಿ ಚಿಂತನೆಗಳು 'ಮನುಷ್ಯ'ನಲ್ಲಿ ಸ್ತ್ರೀಯೂ ಸೇರಿರುತ್ತಾಳೆ ಎಂದು ಹೇಳಿದರೂ ಕೂಡಾ ಮಹಿಳೆಯರನ್ನು ಬಿಟ್ಟೇ ಎಲ್ಲ ಚರ್ಚೆಗಳು ನಡೆಯುತ್ತಿರುವುದು ವಾಸ್ತವ. ನಾವು ಬಳಸುವ ಭಾಷೆಯ ಸಂರಚನೆ ನಮ್ಮ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತದೆ ಎಂಬುದಕ್ಕೆ ನಮ್ಮ ಭಾಷೆಯಲ್ಲೇ ಸಾಕಷ್ಟು ಉದಾಹರಣೆಗಳು ಸಿಕ್ಕುತ್ತವೆ. 'ನಗೋ ಹೆಂಗಸರನ್ನ ನಂಬಬಾರದು, ಅಳೋ ಗಂಡಸರನ್ನು ನಂಬಬಾರದು', 'ಸೊಸೆ ಸತ್ತ ಮನಿ ಸೋಬಾನ, ಮಗ ಸತ್ತ ಮನಿ ಸುಡಗಾಡು' ಮುಂತಾದ ಗಾದೆ ಮಾತುಗಳು ನಮ್ಮ ಸಾಂಸ್ಕೃತಿಕ ನಂಬಿಕೆಗಳನ್ನೇ ಹೇಳುತ್ತವೆ. ಅಂಥ ಭಾಷೆಯ ಮೂಲಕವಾಗಿ ರಚಿತವಾಗುವ ಸಾಹಿತ್ಯ ಕೃತಿಗಳಲ್ಲೂ ಆ ಧೋರಣೆಗಳೇ ಇಳಿದು ಬಂದಿರುವುದನ್ನು ಗಮನಿಸಬಹುದು.

ಆದ್ದರಿಂದಲೇ ಸ್ತ್ರೀವಾದಿ ತಾತ್ವಿಕತೆಯು, 'ಸಿದ್ಧಾಂತ'ಗಳ ಹಿಂದೆ ಪುರುಷರ ಸಂಸ್ಥೆಗಳಿರುವುದನ್ನು ಗಮನಿಸಿ ಸಿದ್ಧಾಂತಗಳನ್ನೇ ಪ್ರಶ್ನಿಸಬೇಕೆನ್ನುತ್ತಾರೆ. ಸೈದ್ಧಾಂತಿಕ ಚಿಂತನೆಗಳ ಮೂಲಕ ಯಜಮಾನಿಕೆಯನ್ನು ಸ್ಥಾಪಿಸುವ ಗಂಡಸಿನ ಅಧಿಕಾರವನ್ನು ಅದು ತಿರಸ್ಕರಿಸುತ್ತದೆ. ಸಹಜವಾಗಿಯೇ ಪಿತೃಪ್ರಧಾನತೆಯ ನೆಲೆಯಿಂದ ಬಂದ ಸಾಹಿತ್ಯ ಸಿದ್ಧಾಂತಗಳು, ಪರಿಕರಗಳು ಖಂಡಿತವಾಗಿಯೂ ಸ್ತ್ರೀವಿರೋಧಿ ನೆಲೆಯನ್ನೇ ಹೊಂದಿರುತ್ತವೆ. ಪುರುಷ ಚಿಂತನೆ ಗಂಡಸನ್ನು ಬುದ್ಧಿಪ್ರಬಲನೆಂದೂ ಹೆಂಗಸನ್ನು 'ಭಾವನಾಮಯಿ' ಎಂದೂ ಹೇಳುತ್ತದೆ. ಇದೇ ಚಿಂತನೆಯನ್ನು ಬದುಕಿನ ಎಲ್ಲ ಸಂದರ್ಭಕ್ಕೂ ಎಳೆದು 'ಬೌದ್ಧಿಕ ಚಟುವಟಿಕೆ' ಎಂಬುದನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಪರಿವರ್ತಿಸಿಕೊಂಡು 'ಬುದ್ಧಿ', 'ಬೌದ್ದಿಕತೆ' ಎಂದರೆ ಏನೇನು, ಯಾವುದು ಎಂಬುದನ್ನು ವ್ಯಾಖ್ಯಾನಿಸುತ್ತದೆ. ಹೆಂಗಸು ಮಾಡುವ ಯಾವ ಕೆಲಸಗಳೂ ಈ ಪಟ್ಟಿಗಳಲ್ಲಿ ಸೇರುವುದಿಲ್ಲ. ಬೌದ್ಧಿಕ ಚಟುವಟಿಕೆಗಳಲ್ಲಿ ರಾಜಕೀಯ, ಶಿಕ್ಷಣ, ಕಲೆ, ಸಾಹಿತ್ಯ, ಕ್ರೀಡೆ, ಆರ್ಥಿಕತೆ, ವಿಜ್ಞಾನ, ತತ್ವಶಾಸ್ತ್ರ, ಮುಂತಾದವು ಮಾತ್ರ ಬರುತ್ತವೆ. ಇವೆಲ್ಲಾ ಪುರುಷನ ಕ್ಷೇತ್ರಗಳೇ. ಇಲ್ಲಿ ಹೆಂಗಸು ಇಲ್ಲವೇ ಇಲ್ಲ. ಮುಂದೆ ಶಿಕ್ಷಣ, ಆಧುನಿಕತೆ, ಸುಧಾರಣಾವಾದ ಮುಂತಾದ

ಸಂದರ್ಭಗಳಿಂದ ಮಹಿಳೆಯೂ ಹೊಸ ಅವಕಾಶಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತಾ, ಪುರುಷನ ಕ್ಷೇತ್ರಗಳೊಳಗೆ ಮೆಲ್ಲನೆ ಪ್ರವೇಶಿಸತೊಡಗಿದಾಗ, ಪುರುಷ ಚಿಂತನೆಯ ಮತ್ತೊಂದು ರಾಜಕೀಯ ಪ್ರಾರಂಭವಾಯಿತು. ಮೊದಲನೆಯ ಹಂತದಲ್ಲಿ ಮಹಿಳಾ ಸಂಗತಿಗಳನ್ನೇ ಅದೃಶ್ಯ ಮಾಡಲಾದರೆ, ಎರಡನೆಯ ಹಂತದಲ್ಲಿ ಹೇಗೋ ಏನೋ ಮಾಡಿ ಮಹಿಳೆ ಪುರುಷ ಕ್ಷೇತ್ರದಲ್ಲಿ ಪ್ರವೇಶ ಮಾಡಿದ ತಕ್ಷಣ ಅದನ್ನು ಅಪಮೌಲೀಕರಣ ಮಾಡಿತು.

ಈ ಎಲ್ಲ ಮಾತುಗಳು ಮಹಿಳಾ ಸೃಜನತೆಗೂ ಅವಳ ಅಭಿವ್ಯಕ್ತಿಗೂ ಅನ್ವಯಿಸುತ್ತವೆ. 'ಬುದ್ಧಿ', 'ಬೌದ್ಧಿಕತೆ'ಯನ್ನು ವ್ಯಾಖ್ಯಾನಿಸಿದವರು ಯಾರು, ಅವರು ಹೇಳಿದ್ದು ಮಾತ್ರ ಬುದ್ಧಿ, ಬೌದ್ಧಿಕತೆ ಉಳಿದದ್ದು ಏಕೆ ಅಲ್ಲ. ಮಹಿಳಾ ಸಂಗತಿಗಳು ಏಕೆ ಬುದ್ಧಿಹೀನ – ಎಂಬ ಎಲ್ಲ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೊರಟಾಗ ನಮಗೆ ಶ್ರೇಷ್ಠತೆಯ ರಾಜಕಾರಣದ ಹುನ್ನಾರ ಅರ್ಥವಾಗುತ್ತದೆ. ಸಾಹಿತ್ಯ ಚಿಂತನೆಗಳ ಸಂದರ್ಭದಲ್ಲೂ ಈ ಮಾತು ಸತ್ಯ. ಮಹಿಳಾ ಸೃಜನಶೀಲತೆ ಮತ್ತು ಮಹಿಳಾ ಅಭಿವ್ಯಕ್ತಿ ಇಂಥ ಸವಾಲುಗಳನ್ನು ಎದುರಿಸುತ್ತಿದೆ. ಮಹಿಳೆಯ ಎಲ್ಲ ಅಭಿವ್ಯಕ್ತಿಗಳು ಅಡಿಗೆ, ರಂಗೋಲಿ, ಹೊಲಿಗೆ, ಮನೆಯ ಅಲಂಕಾರ, ಕಸೂತಿ ಅರ್ಥಹೀನವೆನ್ನಿಸಿಕೊಳ್ಳುತ್ತವೆ.

ಇಡೀ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಮಹಿಳೆಯನ್ನು ಗೃಹಿಣಿತ್ವಕ್ಕೆ ಸೀಮಿತಮಾಡಿ, ಅವಳು ಆ ಲೋಕದ ಗ್ರಹಿಕೆಯನ್ನು ತನ್ನ ಸೃಜನತೆಯೊಂದಿಗೆ ಅಭಿವ್ಯಕ್ತಿಸಲು ಹೊರಟಾಗ ಅವಳ ಲೋಕಗ್ರಹಿಕೆ ಅಪಮೌಲ್ಯಗೊಳ್ಳುವುದೇಕೆ ಎನ್ನುವ ಪ್ರಶ್ನೆಗೆ ಉತ್ತರವಾಗಿ ಪಿತೃಪ್ರಧಾನ ವ್ಯವಸ್ಥೆ ಮಹಿಳೆಯ ಲೋಕ ಎಂಥದ್ದು ಎಂದು ವಿವರಿಸುತ್ತದೆ. ಅದರ ಮಿತಿಗಳನ್ನು ಪಟ್ಟಿ ಮಾಡಲು ಹೊರಡುತ್ತದೆ. ಅಲ್ಲದೆ, ಸಹಜವಾಗಿಯೇ ಮಹಿಳೆ ತನ್ನ ಅಧೀನ ಬದುಕಿನಲ್ಲಿ ತಾನು ಕಂಡ ಅನುಭವಗಳನ್ನು ಹಿಡಿದಿಡುವಾಗ ಅದನ್ನು ಬೌದ್ಧಿಕ ಲೋಕ ಒಪ್ಪದೆ, ಅದನ್ನು ದ್ವಿತೀಯ ದರ್ಜೆಯದು ಎಂಬ ಹಣೆಪಟ್ಟಿಯೊಂದಿಗೆ ತಿರಸ್ಕರಿಸುತ್ತದೆ. ಮಹಿಳಾ ಸೃಜನತೆ ತನ್ನೆಲ್ಲಾ ಅಡ್ಡಿ ಆತಂಕಗಳನ್ನು ಮೀರಿ ತನ್ನನ್ನು ಅಭಿವ್ಯಕ್ತಿಸಿಕೊಂಡು ಪುರುಷನಿಗೆ ಸವಾಲುಗಳನ್ನು ಒಡ್ಡಲು ತೊಡಗಿದಾಗ ಉಂಟಾಗುವ ಆತಂಕ, ತಲ್ಲಣಗಳಿಂದ ಅವುಗಳನ್ನು ಹೇಗಾದರೂ ಮಾಡಿ ತಡೆಯಬೇಕೆಂದು ಪ್ರತಿ ಹುನ್ನಾರಗಳನ್ನು ರೂಪಿಸಿಕೊಳ್ಳಲು ತೊಡಗುತ್ತದೆ. ಅಂಥ ತಂತ್ರದ ಒಂದು ಮಾದರಿಯೇ ಜನಪ್ರಿಯ ಸಂಸ್ಕೃತಿ ಮತ್ತು ಜನಪ್ರಿಯ ಸಾಹಿತ್ಯ ಎಂಬ ಚಿಂತನೆ.

ಇಡಿಯಾಗಿ ಸಂಸ್ಕೃತಿ ವ್ಯಾಖ್ಯಾನ, ಜನಪ್ರಿಯ ಸಂಸ್ಕೃತಿ ವ್ಯಾಖ್ಯಾನ, ಜನಪ್ರಿಯ ಸಾಹಿತ್ಯದ ವ್ಯಾಖ್ಯಾನವನ್ನು ಮಾಡುತ್ತಿರುವುದು ಪಿತೃಪ್ರಧಾನ ನೆಲೆಯೇ. ಜನಪ್ರಿಯ ಸಂಸ್ಕೃತಿ ಎಂದರೆ ಜನಪರ ಸಂಸ್ಕೃತಿ ಅಂತ ಹೇಳುತ್ತ, ಅದನ್ನು ಅಂಚಿಗೆ ಸರಿಸುವ ಪ್ರತಿಹುನ್ನಾರಗಳು ನಡೆಯುತ್ತಲೇ ಇವೆ. ಲಿಂಗ ರಾಜಕಾರಣ ಮಹಿಳಾ ಸಂಗತಿಗಳನ್ನು ಎರಡು ನೆಲೆಗಳಿಂದ ಅಂಚಿಗೆ ಸರಿಸುತ್ತದೆ.

೧. ಪುರುಷ ಕ್ಷೇತ್ರದಲ್ಲಿ ನೆಲೆ ನಿಲ್ಲುವ ಸಾಮರ್ಥ್ಯವಿಲ್ಲದ ಕಾರಣ ಪ್ರವೇಶ ಇಲ್ಲ ಎಂದು ಮಹಿಳೆಯ ಪ್ರವೇಶವನ್ನೇ ನಿರಾಕರಿಸುವ ಒಂದು ಹಂತ ಮತ್ತು

೨. ಅಲ್ಲಿ ಮಹಿಳೆ ಕಾಣಿಸಿಕೊಂಡರೆ ಅವಳ ಸಾಮರ್ಥ್ಯ ದ್ವಿತೀಯ ದರ್ಜೆಯದು ಎಂದು ಅಪಮೌಲೀಕರಿಸಿ ಬಿಡುವುದು ಇನ್ನೊಂದು ಹಂತ.

ಹೀಗೆ ಮಹಿಳಾ ಸೃಜನತೆಯಿಂದ ಹಿಡಿದು ಮಹಿಳೆ ನಿರ್ವಹಿಸುವ ಹೆರಿಗೆಯಂತಹ ಸಂಕೀರ್ಣ ಸಂಗತಿಗಳವರೆಗೂ ಎಲ್ಲ ಸಂಗತಿಗಳನ್ನು ನೇತ್ಯಾತ್ಮಕವಾಗಿ ನೋಡುತ್ತಲೋ, ವೈಭವೀಕರಿಸುತ್ತಲೊ (ತಾಯ್ತನ, ಹೆಣ್ತನ) ಅವಳ ಇಡೀ ವ್ಯಕ್ತಿತ್ವವನ್ನು ಸ್ಥಿರಮಾದರಿ ನೆಲೆಯಲ್ಲೇ ಗ್ರಹಿಸಲಾಗುತ್ತದೆ. ಅವಳ ಆಂತರ್ಯದ ಶಕ್ತಿ ವ್ಯಕ್ತವಾಗದೇ, ಪುರುಷ ಚಿಂತನೆಯ ಮಾದರಿಗಳಲ್ಲೇ (ತಾಯಿ, ಹೆಂಡತಿ, ಮಗಳು, ಗೆಳತಿ, ಸೊಸೆ) ಮಹಿಳೆ ಬದುಕಬೇಕಾದದ್ದು ಸಾಮಾಜಿಕರಣ ವ್ಯವಸ್ಥೆಯಿಂದಲೇ.

## ೩.೨ ಜನಪ್ರಿಯ ಪದದ ವ್ಯಾಖ್ಯಾನ

ಅಧ್ಯಾಯದ ಪ್ರಾರಂಭದ ಚರ್ಚೆಗೆ ಪೂರಕವಾಗಿಯೇ 'ಜನಪ್ರಿಯ' ಪದದ ಅರ್ಥವ್ಯಾಖ್ಯಾನವನ್ನು ಬೆಳಸಬಹುದು. ಮಹಿಳಾ ಅಭಿವ್ಯಕ್ತಿಯನ್ನು ಜನಪ್ರಿಯ ಎಂದು ಗುರುತಿಸುವುದೇಕೆ, ಜನಪ್ರಿಯ ಅಂದರೆ ಏನು, ಅದರ ಬಗ್ಗೆ ಚಿಂತಕರ ಅಭಿಪ್ರಾಯಗಳನ್ನು ಇಲ್ಲಿ ಗಮನಿಸಲಾಗಿದೆ.

"ಜನ-ಪ್ರಿಯ" ಎಂದು ಗ್ರಹಿಸಿದಾಗ ಜನರಿಗೆ ಪ್ರಿಯವಾದುದು, ಇಷ್ಟವಾದುದು ಎಂಬ ಅರ್ಥ ಹೊರಡುತ್ತದೆ. 'ಜನ' ಇಲ್ಲಿ ಸಮುದಾಯವನ್ನು ಪ್ರತಿನಿಧಿಸುವ ಪದವಾಗಿ ಬರುತ್ತದೆ. ಕನ್ನಡದಲ್ಲಿ ನವ್ಯ ಚಳುವಳಿಯ ಸಂದರ್ಭದಲ್ಲಿ ಈ ಪದ ರೂಪ ಪಡೆದುಕೊಳ್ಳುತ್ತದೆ. ಜನಪ್ರಿಯ ಸಾಹಿತ್ಯವನ್ನು ಕುರಿತು ಚರ್ಚೆ ಮಾಡುವಾಗ 'ಡಾ. ಕೆ.ವಿ. ನಾರಾಯಣ' ಅವರು ಹೇಳುವ ಮಾತುಗಳನ್ನು ಇಡೀ ಜನಪ್ರಿಯ ಸಂಸ್ಕೃತಿಗೆ, ಕಲೆಗಳಿಗೆ, ವಿಸ್ತರಿಸಿಕೊಳ್ಳಬಹುದು

"ನವ್ಯ ಸಾಹಿತ್ಯ 'ವ್ಯಕ್ತಿ'ಯನ್ನು ಒಪ್ಪುತ್ತದೆಯೇ ಹೊರತು 'ಮನುಷ್ಯ'ನನ್ನಲ್ಲ. ಇವೆರಡೂ ಅಂದರೆ ವ್ಯಕ್ತಿ ಮತ್ತು ಮನುಷ್ಯ ಒಂದೇ ಅಲ್ಲ. ವ್ಯಕ್ತಿಯು ಅವನ ವಿಶಿಷ್ಟತೆಗಳಲ್ಲಿ ಗಮನಕ್ಕೆ ಬರುತ್ತಾನೆ. ಆದರೆ ಮನುಷ್ಯ ತನ್ನ ಸಾಮಾನ್ಯತೆಗಳಲ್ಲಿ ಅಭಿವ್ಯಕ್ತವಾಗುತ್ತಾನೆ".[೪] ಇಲ್ಲಿ ವ್ಯಕ್ತಿ ಎಂದಾಗ ವಿಶಿಷ್ಟತೆಗಳನ್ನು ಹೊಂದಿದ ಎಂಬರ್ಥವನ್ನು ಕೊಡುತ್ತದೆ. ಪಿತೃಪ್ರಧಾನ ಚಿಂತನೆಯಲ್ಲಿ ವ್ಯಕ್ತಿ ಎಂದರೆ ಸ್ತ್ರೀ ಅಲ್ಲ ಪುರುಷ ಮಾತ್ರ. ಹೆಂಗಸರಿಗೆ ತನ್ನದೇ ಆದ ವಿಶಿಷ್ಟತೆ ಇಲ್ಲ, ಇದ್ದರೂ ವಿಸ್ಮೃತಿಯಲ್ಲಿದ್ದಾಳೆ. ಅವಳು ಯಾವಾಗಲೂ ಸಾಹಚರ್ಯದಲ್ಲೇ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವುದು. ಹೀಗೆ 'ವ್ಯಕ್ತಿ' ವಿಶಿಷ್ಟತೆ ಇಲ್ಲದವರಿಗೆ ಸಾಂಪ್ರದಾಯಿಕ ಚಿಂತನೆಗಳು ಮಾನದಂಡಗಳನ್ನು ರೂಪಿಸಿ, ಅದರೊಳಗೆ ಪ್ರವೇಶ ಪಡೆದವರು ಮಾತ್ರ ಶ್ರೇಷ್ಠ ಉಳಿದವರು ಅಲ್ಲ ಎಂಬ ತೀರ್ಮಾನಕ್ಕೆ ಬರುತ್ತವೆ. ವಾಸ್ತವದಲ್ಲಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಈ ಮಾನದಂಡಗಳ ಅಳತೆಗೋಲುಗಳಿಗೆ ಪಕ್ಕಾಗದವರು ಹೆಚ್ಚಾಗಿದ್ದಾರೆ. ಅದರಲ್ಲಿ ಮಹಿಳೆಯರದೇ ಸಿಂಹಪಾಲು.

ಮಹಿಳಾ ಬದುಕು, ಗೃಹಿಣಿತ್ವದ ಆವರಣದೊಳಗೆ ಇರುವುದರಿಂದ ಅವಳ ಚಟುವಟಿಕೆಗಳೆಲ್ಲಾ ಆ ಸಂಗತಿಗಳ ಸುತ್ತಮುತ್ತಲೂ ನಡೆಯುವುದು ಸಹಜ. ಈ ಹಿಂದೆಯೇ ಚರ್ಚಿಸಿದಂತೆ ಅವಳು ಅಡಿಗೆ, ರಂಗೋಲಿ, ಕಸೂತಿ, ಹಾಡು, ಹರಟೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾಳೆ. ಈ ಎಲ್ಲಾ ಸಂಗತಿಗಳು ಅವಳ ಸೃಜನತೆಯ ಅಭಿವ್ಯಕ್ತಿಯ ಬಹುಮುಖ್ಯ ನೆಲೆಗಳಾದ ಅವೆಲ್ಲವೂ 'ಅನುತ್ಪಾದಕ' ನೆಲೆಯವು ಎಂಬ ಅಂಶ ಬಹಳ ಮುಖ್ಯವಾಗುತ್ತದೆ. ಉತ್ಪಾದನೆ ಕ್ರಿಯಾಶೀಲತೆಯಿಂದ ಕೂಡಿದ್ದು, ಬದುಕಿಗೆ ಸ್ವಾವಲಂಬನೆಯನ್ನು ನೀಡುತ್ತದೆ. ಪುರುಷನ ಕಾರ್ಯ ಚಟುವಟಿಕೆಗಳು ಉತ್ಪಾದಕ ನೆಲೆಯಲ್ಲಿರುತ್ತವೆ. ಹೆಣ್ಣಿನ ಸಂದರ್ಭದಲ್ಲಿ ಅದು ಅಸಾಧ್ಯ. 'ಡಾ. ಎಚ್.ಎಸ್. ಶ್ರೀಮತಿಯವರು' ಈ ಸಂಗತಿಯನ್ನು ಸ್ಪಷ್ಟವಾಗಿ ಮಂಡಿಸುತ್ತಾರೆ. "ಉತ್ಪಾದನಾ ಚಟುವಟಿಕೆ ಎಂದರೆ ಕೇವಲ ದೈನಿಕ ಅಗತ್ಯಗಳಿಗೆ, ಭೌತಿಕ ಅನುಕೂಲಗಳಿಗೆ, ಆರ್ಥಿಕತೆಗೆ ಮಾತ್ರ ಸಂಬಂಧಿಸಿದ್ದಲ್ಲ. ಬದುಕು ಸುಸಂಗತವಾಗಿರುವುದಕ್ಕೆ ದೇಹದಂತೆ ಬುದ್ಧಿ ಹಾಗೂ ಮನಸ್ಸುಗಳು ಕೂಡಾ ಕ್ರಿಯಾಶೀಲವಾಗಿ ಸುಸ್ಥಿತಿಯಲ್ಲಿ ಇರಬೇಕಾಗುತ್ತದೆ. ಈ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿನ ಆರ್ಥಿಕತೆಯನ್ನಷ್ಟೇ ಅಲ್ಲದೆ ಅವಳ ಬುದ್ಧಿ ಭಾವಗಳ ಉತ್ಪಾದನಾ ವಲಯಗಳನ್ನು ಕೂಡಾ ಅತಿಕ್ರಮಿಸಿ ದಮನ ಮಾಡಲಾಗುತ್ತಾ ಬರಲಾಗಿದೆ"[೫] ಆ ಮೂಲಕ ಯಜಮಾನ್ಯ ನೆಲೆಯ ಚಿಂತನಾ ಕ್ರಮ ಮಹಿಳೆಯ ಬದುಕು ಕ್ರಿಯಾಶೀಲ ನೆಲೆಯಿಂದ

ದೊರಕಿಸಿಕೊಳ್ಳಬಹುದಾದ ಸ್ವಯಾರ್ಜಿತ ಬದಕನ್ನು ಇಲ್ಲವಾಗಿಸುತ್ತದೆ. ಮತ್ತು ತನ್ನ ಹಕ್ಕುಗಳ ನಿಯಂತ್ರಣದ ನೇರ ಮತ್ತು ಪರೋಕ್ಷ ತಂತ್ರಗಳನ್ನು ರೂಪಿಸಿ ಹೆಂಗಸಿನ ಎಲ್ಲ ಕೆಲಸಗಳನ್ನು 'ಜನಪ್ರಿಯ' ಎಂದು ಗುರುತಿಸುತ್ತದೆ. ಏಕೆಂದರೆ ಅಧೀನ ನೆಲೆಯಲ್ಲಿರುವವರು ಸಮಾನ ಸ್ತರಕ್ಕೆ, ಉತ್ಪಾದಕ ನೆಲೆಗೆ ಬಂದು ತನ್ನ ಹಕ್ಕುಗಳನ್ನು ಸ್ಥಾಪಿಸುವುದು ಯಜಮಾನ್ಯ ನೆಲೆಗೆ ಬೇಡವಾಗಿರುತ್ತದೆ. ಅದನ್ನು ನಿಯಂತ್ರಿಸುವ ಬಹು ದೊಡ್ಡ ರಾಜಕಾರಣವೇ ಅಪಮೌಲೀಕರಣ. ಅಧೀನ ನೆಲೆಯಲ್ಲಿರುವವರ ಚಿಂತನಾ ಕ್ರಮಗಳನ್ನು, ಬದುಕಿನ ಎಲ್ಲ ಸಂಗತಿಗಳನ್ನು 'ದ್ವಿತೀಯ ದರ್ಜೆ'ಯವೆಂದು ಗುರುತಿಸಿ ಅವಕ್ಕೆ 'ಜನಪ್ರಿಯ' ವೆಂದು ಹೆಸರಿಸಿ, ಮೂಲೆಗುಂಪು ಮಾಡುವ ತಂತ್ರವನ್ನು ಅಧಿಕಾರ ನೆಲೆ ಬಹಳ ನಾಜೂಕಾಗಿ ಕಾರ್ಯಗತಗೊಳಿಸಿದೆ. ಇದನ್ನೇ 'ಕೆ.ವಿ. ನಾರಾಯಣ' ಅವರು ಜನಪ್ರಿಯ ಪದಕ್ಕಿರುವ ಅರ್ಥವನ್ನು ವಿವರಿಸುತ್ತಾ "ಹೆಚ್ಚು ಜನರಿಗೆ ಬೇಕಾಗಿರುವುದರಿಂದ ಉತ್ತಮವಾದುದು ಇಲ್ಲವೇ ಉತ್ತಮವಲ್ಲದ್ದು ಎಂಬ ತರತಮ ಭಾವದ, ಮೌಲ್ಯಾತ್ಮಕ ನೆಲೆಯ ಅರ್ಥದ ಬಳಕೆಯೂ ಒಂದಿದೆ"[೩] ಎನ್ನುತ್ತಾರೆ.

ಈ ಎಲ್ಲ ಸಂಗತಿಗಳು ನೇರವಾಗಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅಧೀನ ನೆಲೆಯಲ್ಲಿರುವ ಮಹಿಳೆಯ ಬದುಕನ್ನು ರೂಪಿಸುವ, ಪ್ರಭಾವಿಸುವ ವಿಷಯಗಳಾಗಿರುತ್ತವೆ. ಈ ಹಂತದಲ್ಲಿ 'ಜನಪ್ರಿಯ' ಎಂಬ ಪದ ಕೇವಲ ಸಾಹಿತ್ಯದ, ಕಲೆಯ ಒಂದು ಪಾರಿಭಾಷಿಕ ಪದವಾಗಿ ಮಾತ್ರ ನಿಂತುಕೊಳ್ಳದೆ ಮಹಿಳಾ ಸೃಜನತೆಗೆ, ಅಭಿವ್ಯಕ್ತಿಗೆ, ಒಟ್ಟಾರೆ ಅವಳ ಬದುಕನ್ನು ನಿಯಂತ್ರಿಸುವ ಬಹು ದೊಡ್ಡ ಸಂಗತಿಯಾಗಿ ನಿಲ್ಲುತ್ತದೆ.

ಈ ಎಲ್ಲ ಕಾರಣಗಳಿಂದಲೇ ಅಧ್ಯಯನದಲ್ಲಿ ಜನಪ್ರಿಯ ಕಲೆ, ಸಾಹಿತ್ಯಗಳನ್ನು ಬಹಳ ಮುಖ್ಯವೆಂದು ಭಾವಿಸಿ, ಅವುಗಳು ಮಹಿಳಾ ಬದುಕನ್ನು, ಸೃಜನತೆಯನ್ನು ಹೇಗೆಲ್ಲಾ ನಿಯಂತ್ರಿಸಿವೆ, ಎಂಬುದನ್ನು ಗಮನಿಸಲಾಗಿದೆ. ಜೊತೆಗೆ ಆ ಬಗ್ಗೆ ನಡೆದಿರುವ ಚರ್ಚೆಗಳನ್ನು ಗಮನಿಸಲಾಗಿದೆ.

### ೩.೩ ಜನಪ್ರಿಯ ಸಂಸ್ಕೃತಿ

ಪ್ರಧಾನ ಸಂಸ್ಕೃತಿಯು ಹುಟ್ಟು ಹಾಕಿದ ಸಂಸ್ಕೃತಿಯ ಅಧಿಕಾರ ನೆಲೆಯ ಚಿಂತನೆಗಳು ಶೋಷಿತ ಸಮಾಜದ ಎಲ್ಲ ಶಕ್ತಿಗಳನ್ನು ನಿರಾಕರಿಸಿ, ತನ್ನ ನೆಲೆಯಲ್ಲಿ ಅವರ ಬದುಕನ್ನು ರೂಪಿಸಲು ತೊಡಗುತ್ತದೆ. ಅನೇಕ ಹೊಸ, ಹೊಸ ಪರಿಭಾಷೆಗಳನ್ನು

ಹುಟ್ಟುಹಾಕುತ್ತದೆ. ಈಗಾಗಲೆ ಇಂಥ ಪದಗಳು ಹುಟ್ಟುಹಾಕುವ ವೈರುಧ್ಯಗಳನ್ನು ಸ್ತ್ರೀವಾದಿಗಳು ಚರ್ಚಿಸಿದ್ದಾರೆ.

ಜನಪ್ರಿಯ ಸಂಸ್ಕೃತಿ - ಪ್ರಧಾನ / ಶ್ರೇಷ್ಠ ಸಂಸ್ಕೃತಿ, ಜನಪ್ರಿಯ ಪ್ರೆಸ್ - ಕ್ವಾಲಿಟಿ ಪ್ರೆಸ್, ಜನಪ್ರಿಯ ಸಿನೆಮಾ - ಗಂಭೀರ / ಆರ್ಟ್ ಸಿನೆಮಾ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಪಟ್ಟಿಯ ಪ್ರಾರಂಭದ ಪದಗಳು ಅಷ್ಟೇನೂ 'ಗಂಭೀರವಲ್ಲದ', 'ಮುಖ್ಯವಲ್ಲದ', 'ಎರಡನೆಯ ದರ್ಜೆಯ', 'ಜನಗಳಿಗೆ ಪ್ರಿಯವಾಗುವಂಥ, ಜನಗಳೇ ತಮಗಾಗಿ ಸೃಷ್ಟಿಸಿಕೊಂಡ' ಸಂಗತಿಗಳಾಗಿ ಅರ್ಥೈಸಲ್ಪಡುತ್ತವೆ. ಎರಡನೆಯ ಗುಂಪಿನ ಪದಗಳು 'ಮುಖ್ಯವಾದ', 'ಪ್ರಧಾನ', 'ಗಂಭೀರ', 'ಅರ್ಥವತ್ತಾದ ಸಂಗತಿಗಳು' ಎಂದು ಪರಿಗಣಿತವಾಗುತ್ತವೆ. ಈ ಮಾದರಿಗಳು ಇಡೀ ಮಾನವ (ಸ್ತ್ರೀಯೂ ಸೇರಿದಂತೆ) ಕುಲವನ್ನು ಎರಡಾಗಿ ಒಡೆದು ಪ್ರಧಾನ–ಅಧೀನ, ಆಳುವ –ಆಳಿಸಿಕೊಳ್ಳುವ, ಯಜಮಾನ–ಗುಲಾಮ, ವರ್ಗಗಳ ಹುಟ್ಟಿಗೆ ಕಾರಣವಾಗುತ್ತವೆ.

ಜನಪ್ರಿಯ ಸಂಸ್ಕೃತಿಯಲ್ಲಿ ಸಾಮಾನ್ಯರಿರುತ್ತಾರೆ. ಸಾಮಾನ್ಯರು ಬಯಸುವ ಹಾಡುಗಳು, ನೃತ್ಯ, ನಾಟಕಗಳು, ಸಿನೆಮಾಗಳು, ರೇಡಿಯೋ ಕಾರ್ಯಕ್ರಮಗಳು, ಟಿ.ವಿ. ಕಾರ್ಯಕ್ರಮಗಳು, ಆಹಾರ, ಪತ್ರಿಕೆಗಳು, ಅಲಂಕಾರ, ಹರಟೆ, ಬದುಕಿನ ನಿತ್ಯದ ಸಣ್ಣ ಸಂಗತಿಗಳು ಅಲ್ಪಸಂಖ್ಯಾತ / ಅಧಿಕಾರ ವರ್ಗಕ್ಕೆ ಇಷ್ಟವಾಗುವುದಿಲ್ಲ. ಅಧಿಕಾರ ನೆಲೆಯಲ್ಲಿರುವ ಇವರು ಬಹು ಸಮುದಾಯದ ಆಶೋತ್ತರಗಳನ್ನು ತಿರಸ್ಕಾರದ ದೃಷ್ಟಿಯಿಂದ ಗಮನಿಸುತ್ತಾರೆ. ಅವುಗಳನ್ನು, ಅವುಗಳಲ್ಲಿ ಭಾಗಿಯಾಗಿರುವವರನ್ನು 'ದ್ವಿತೀಯ ದರ್ಜೆ'ಯವರೆಂದು ತಿರಸ್ಕಾರದಿಂದ ನೋಡುತ್ತಾರೆ. ಜನಪ್ರಿಯ –popular ಎಂದರೆ 'ಆಕ್ಸಫರ್ಡ್ ಶಬ್ದಕೋಶ'ದ ಪ್ರಕಾರ 'Generally liked, or admired or prevalent among the general public' ಎಂದೇ ಅರ್ಥ. ಕನ್ನಡದಲ್ಲಿಯೂ 'ಜನಪ್ರಿಯ' ಎಂದರೆ ಜನರಿಗೆ ಪ್ರಿಯವಾದುದು ಎಂಬರ್ಥವೇ. ಆದರೆ ಸಾಹಿತ್ಯ ಮತ್ತು ಸಂಸ್ಕೃತಿ ವಿಮರ್ಶೆಯಲ್ಲಿ 'ರೇಮಾಂಡ್ ವಿಲಿಯಮ್ಸ್' ಗುರುತಿಸುವಂತೆ "Inferior kinds of work or substandard culture"[2] ಎಂದು ವಿಮರ್ಶಿಸಲಾಗುತ್ತದೆ. ಅಧಿಕಾರದ ನೆಲೆಯಲ್ಲಿ ನಿಂತು ಇದನ್ನು ಪ್ರಸ್ತಾಪಿಸಿದಾಗ ಸಹಜವಾಗಿಯೇ ಅಧಿಕಾರರಹಿತ ನೆಲೆಯ ಜನ ಅದನ್ನು ಒಪ್ಪಬೇಕಾದ ಅನಿವಾರ್ಯತೆ ಇರುತ್ತದೆ.

ಪಾಶ್ಚಾತ್ಯ ಸಂದರ್ಭದಲ್ಲಿ ೧೮, ೧೯ನೆಯ ಶತಮಾನದಲ್ಲಿ ಉಂಟಾದ ಕೈಗಾರೀಕರಣ, ಆಧುನಿಕತೆ, ಬಂಡವಾಳಶಾಹಿಯ ಹುಟ್ಟು-ಯುರೋಪ, ಅಮೇರಿಕಾ, ಆಸ್ಟ್ರೇಲಿಯಾ ಮತ್ತಿತರ ಕಡೆಗಳಲ್ಲಿ ಹೊಸ ಅಲೆಯನ್ನು ಉಂಟು ಮಾಡಿತು. ಮುದ್ರಣ ಮಾಧ್ಯಮ ಪುಸ್ತಕ ಕ್ರಾಂತಿಯನ್ನುಂಟುಮಾಡಿತು. ದಿನಪತ್ರಿಕೆಗಳು, ಮಾಸಪತ್ರಿಕೆಗಳು, ಕಾದಂಬರಿಗಳು, ಕಾಮಿಕ್ಸ್, ಗ್ರೀಟಿಂಗ್ ಕಾರ್ಡ್‌ಗಳು ಹುಟ್ಟಿಕೊಂಡವು. ಸಿನೇಮಾ, ಟೆಲಿವಿಜನ್‌ಗಳ ಆವಿಷ್ಕಾರ ಜನರಲ್ಲಿ ಹೊಸ ಸಂಚಲನವನ್ನುಂಟು ಮಾಡಿದವು, ಉದ್ಯೋಗಗಳ ಸೃಷ್ಟಿ, ಉದ್ಯೋಗ ಕ್ಷೇತ್ರದಲ್ಲಿ ಮಹಿಳೆಗೆ ಸಿಕ್ಕ ಅವಕಾಶ, ಮಹಿಳೆಗೆ ದೊರೆತ ವಿದ್ಯಾಭ್ಯಾಸದ ಅವಕಾಶ ಎಲ್ಲವೂ ಮೇಲ್ ಮಧ್ಯಮ, ಮಧ್ಯಮ ವರ್ಗದ ಬದುಕಿನಲ್ಲಿ ಬದಲಾವಣೆಗಳನ್ನು ತಂದವು. ಈ ಜನರಿಗೆ ಬಿಡುವು ದೊರೆಯತೊಡಗಿತು. ಬಿಡುವಿನ ವೇಳೆಯನ್ನು 'ಕಳೆಯುವ ಸಲುವಾಗಿ ಓದುವ -ಬರೆಯುವ ಹವ್ಯಾಸ ಶುರುವಾಯಿತು. ಈ ಹವ್ಯಾಸದಲ್ಲಿ ಗಂಡು-ಹೆಣ್ಣು ಇಬ್ಬರೂ ಭಾಗಿಯಾದರು. ಹೀಗೆ "ಕಾಲ ಕಳೆಯಲೆಂದು" ಸೃಷ್ಟಿಸಿದ ಸಂಗತಿಗಳನ್ನು "ಜನಪ್ರಿಯ ಕಲೆಗಳು" ಎಂದು ಗುರುತಿಸಿದರು.

ಜನಪ್ರಿಯ ಸಂಸ್ಕೃತಿಯ ಬಗ್ಗೆ ಚರ್ಚೆಯನ್ನು ಮಾಡುತ್ತಾ ಮಾರುಕಟ್ಟೆಯ ಪರಿಭಾಷೆಯಲ್ಲಿ ಅದನ್ನು ವ್ಯಾಖ್ಯಾನಿಸಿ 'Commerical Culture' ಎಂದು ಗುರುತಿಸುತ್ತಾರೆ. ಸರಕು ಸಂಸ್ಕೃತಿಯ ಭಾಗವಾಗಿ ಬಿಕರಿಯಾಗುವ ಸಾಮಗ್ರಿಗಳು, ಬರಹಗಳು, ಭಾವಗಳು" ಎಂಬ ನೆಲೆಯಲ್ಲೂ ಚರ್ಚೆ ಇದೆ.

ಮೇಲಿನ ಚರ್ಚೆಗಳು 'ಬಿಡುವು', 'ವಿರಾಮ', 'ಮಧ್ಯಮ ವರ್ಗ', 'ಕಾಲ ಕಳೆಯಲು ಸಹಾಯಕವಾಗುವ', 'ಬಿಕರಿ'-ಎಂದೆಲ್ಲಾ ಬಳಸಿರುವ ಸಂಗತಿಗಳು ಮಹಿಳೆಯ ಬಹುಪಾಲು ಬದುಕಿನ ರೀತಿಗಳಿಗೆ ಅನ್ವಯಿಸುತ್ತವೆ. ಮಹಿಳೆಯ ಸೃಜನತೆ; ಹಾಡು. ಹಸೆ, ಅಡುಗೆ, ಕಸೂತಿ, ರಂಗೋಲಿ, ಬರಹಗಳ ರೂಪು ಪಡೆದುಕೊಂಡಾಗ ಅವುಗಳಿಗೆ ಸಿಕ್ಕ ಮಾನ್ಯತೆ ಏನೂ ದೊಡ್ಡದಲ್ಲ. 'ಅಯ್ಯೋ ಹೆಂಗಸರು ಏನೋ ಬಿಡುವಿನ ಸಮಯದಲ್ಲಿ ಹಾಡು, ಹಸೆ, ಕಸೂತಿ, ಮನೆಯ ಅಲಂಕಾರ ಅಂತ ಮಾಡುತ್ತಾರೆ, ಅದೇನು ಮಹಾ' ಎನ್ನುವ ಮಾತುಗಳೇ ಎದುರು ಆದದ್ದು. ಈ ಹಿಂದೆಯೇ ಚರ್ಚಿಸಿದಂತೆ ಆರ್ಥಿಕವಾಗಿ ಸಬಲಳಲ್ಲದ ಮಹಿಳೆಯ ಎಲ್ಲ ಪ್ರಕ್ರಿಯೆಗಳು ಅನುತ್ಪಾದಕ ನೆಲೆಯಿಂದಲೇ ಬಂದವು. ಈ ಕುರಿತು ಮಾರ್ಕ್ಸ್‌ವಾದಿ ಚಿಂತನೆ ಬಹಳ ವಿವರವಾಗಿ ಚರ್ಚಿಸುತ್ತದೆ. ಕುಟುಂಬವನ್ನು ಹೆಣ್ಣಿನ ಶೋಷಣೆಯ ಕೇಂದ್ರವೆಂದು. ಚಾರಿತ್ರಿಕವಾಗಿ ಹೆಣ್ಣು ಕುಟುಂಬಕ್ಕೆ ಸೀಮಿತವಾದ

ಸಂಗತಿಗಳನ್ನು 'ಮಾರ್ಕ್ಸ್' ಮತ್ತು 'ಏಂಗೆಲ್ಸ್' ವಿವರಿಸುತ್ತಾರೆ. ಹೆಣ್ಣೆಂದರೆ 'ಮನೆಯ ಗುಲಾಮಳು' ಎನ್ನುವುದನ್ನು ಗುರುತಿಸುತ್ತಾರೆ. "ಮಹಿಳೆಯರನ್ನು ಎಲ್ಲಿಯವರೆಗೆ ಸಾಮಾಜಿಕವಾಗಿ ಉತ್ಪಾದಕವಾದ ಕಾರ್ಯದಿಂದ ಹೊರಗಿರಿಸಿ ಖಾಸಗಿಯಾದ ಮನೆಕೆಲಸಗಳಿಗೇ ನಿರ್ಬಂಧಗೊಳಿಸ-ಲಾಗುತ್ತದೆಯೊ, ಅಲ್ಲಿಯವರೆಗೆ ಮಹಿಳೆಯರ ವಿಮೋಚನೆಯಾಗಲಿ, ಪುರುಷರೊಂದಿಗೆ ಅವರ ಸಮಾನತೆಯಾಗಲಿ ಅಸಾಧ್ಯವಾಗಿಯೆ ಉಳಿಯಬೇಕು ಮತ್ತು ಉಳಿಯುತ್ತವೆ ಎಂಬುದನ್ನು ಇಲ್ಲಿ ನಾವಾಗಲೇ ಕಾಣುತ್ತೇವೆ. ಮಹಿಳೆಯರು ದೊಡ್ಡ ಪ್ರಮಾಣದಲ್ಲಿ, ಸಾಮಾಜಿಕ ಉತ್ಪಾದನೆಯಲ್ಲಿ ತೊಡಗಲು ಸಾಧ್ಯ ಮಾಡಿಕೊಟ್ಟಾಗಲಷ್ಟೆ ಮತ್ತು ಗೃಹಕೃತ್ಯ ಕರ್ತವ್ಯಗಳಿಗೆ ಅವರು ಅತ್ಯಲ್ಪ ಪ್ರಮಾಣದಲ್ಲಿ ಗಮನ ನೀಡುವುದು ಸಾಧ್ಯವಾದಗಲಷ್ಟೇ ಮಹಿಳೆಯರ ವಿಮೋಚನೆ ಸಾಧ್ಯವಾಗುತ್ತದೆ".[೮] ಎಂದು ವಿವರಿಸುವ 'ಏಂಗೆಲ್ಸ್' ಮಹಿಳೆಯರ ಕೆಲಸಗಳು ಅನುತ್ಪಾದಕ ನೆಲೆಯವು ಎಂಬುದನ್ನು ಗುರುತಿಸುತ್ತಾನೆ. "ಹೀಗೆ ಮಹಿಳೆಯರ ಕೆಲಸವೆಂದರೆ ಅನುತ್ಪಾದಕ ನೆಲೆಯವು ಎಂದು ಗ್ರಹಿಸಿರುವುದನ್ನು ಮಾರ್ಕ್ಸ್ ಸ್ತ್ರೀವಾದಿಗಳು ತೀವ್ರವಾಗಿ ಪ್ರಶ್ನಿಸುತ್ತಾರೆ. ಮಹಿಳೆಯರು ದೈಹಿಕ ಶ್ರಮವನ್ನು ಅತ್ಯಲ್ಪ ಬೆಲೆಗೆ ನೀಡುವ ಶ್ರಮಿಕ ಶೋಷಿತರು ಮಾತ್ರವಲ್ಲ, ಅವರು ತಾಯಿಯಾಗಿ, ಹೆಣ್ಣಾಗಿ, ಭಾವನಾತ್ಮಕವಾಗಿ ಕೂಡಾ ಮಾನಸಿಕವಾಗಿ ಶೋಷಣೆಗೊಳಗಾಗಿದ್ದಾರೆ".[೯] ಎಂಬ ನಿಲುವನ್ನು ಸ್ತ್ರೀವಾದಿ 'ಅಲೆಗ್ಸಾಂಡ್ರಾ' ತಳೆಯುತ್ತಾಳೆ. ಅಲ್ಲದೆ ಮಾರ್ಕ್ಸ್ ಸ್ತ್ರೀವಾದಿಗಳು ಉತ್ಪಾದಕ-ಬಳಕೆದಾರ ಧೋರಣೆಯನ್ನು ಪ್ರಶ್ನಿಸುತ್ತಾರೆ. ಸಾರ್ವತ್ರಿಕ ವಲಯದಿಂದ ದೂರಮಾಡಿ ಅವಳು ಮಾಡುವ ಕೆಲಸಗಳನ್ನು ಅನುತ್ಪಾದಕ ಎಂದು ಪರಿಗಣಿಸಿರುವುದರ ಹಿನ್ನೆಲೆಯನ್ನು ಗುರುತಿಸುತ್ತಾರೆ. ಮನೆಯ ದುಡಿಮೆಯಲ್ಲಿ ಅವಳ ಶ್ರಮವನ್ನೇ ಬಂಡವಾಳವಾಗಿಸಿ ದುಡಿದರೂ ಅದು ಸೇವೆ, ಕರ್ತವ್ಯ ಎನಿಸಿಕೊಳ್ಳುತ್ತದೆಯೇ ವಿನಾಃ ದುಡಿಮೆ ಎಂದು ಪರಿಗಣಿತವಾಗುವುದಿಲ್ಲ. ಗೃಹಕೃತ್ಯಗಳಿಗೆ ಹೊರತಾಗಿ ಕೃಷಿ ಕ್ಷೇತ್ರದಲ್ಲಿ ಆಕೆಯ ದುಡಿತ ಇದ್ದರೂ ಅಲ್ಲೂ ಆಕೆಯ ದುಡಿತ ಅನುತ್ಪಾದಕ ಎನ್ನಿಸಿಕೊಳ್ಳುತ್ತದೆ.

ಇಡೀ ನಮ್ಮ ಸಂಸ್ಕೃತಿ ಹೆಣ್ಣನ್ನು ಕಟ್ಟಿ ಕೊಡುತ್ತಿರುವುದು ಈ ಮಾದರಿಯಲ್ಲೇ. ಸಂಸ್ಕೃತಿಯನ್ನು ಕಟ್ಟುವವನು ಗಂಡಸು. ಅದನ್ನು ಉಳಿಸಿ, ಸಂಗೋಪನ ಮಾಡಬೇಕಾದ ಹೊಣೆಗಾರಿಕೆ ಹೆಂಗಸಿನದು. ಅದರ ಮೇಲಿನ ಹಕ್ಕು ಗಂಡಸಿನದು ಆಗಿರುತ್ತದೆ. ವೀರ್ಯವನ್ನು ಸ್ವೀಕರಿಸಿ, ಮಹಿಳೆ ತನ್ನ ಗರ್ಭದಲ್ಲಿ ಅದನ್ನು ಉಳಿಸಿ, ಹೆತ್ತು ಸಂಗೋಪನ ಮಾಡಿದರೂ

ಮಕ್ಕಳ ಮೇಲಿನ ಹಕ್ಕು, ಅಧಿಕಾರ ಗಂಡಸಿನದು ಆಗಿರುತ್ತದೆ. ಹೀಗೆ ಎಲ್ಲೆಲ್ಲಿ ಹಕ್ಕು, ಅಧಿಕಾರ, ಸಂಪತ್ತು ಇದೆಯೊ ಅವೆಲ್ಲ ಗಂಡಸಿನ ಕೆಲಸಗಳೆಂದು ಪರಿಗಣಿತವಾಗುತ್ತವೆ. ಎಲ್ಲೆಲ್ಲಿ ಕರ್ತವ್ಯ, ಸೇವೆಯ ಸಂದರ್ಭಗಳಿವೆಯೊ ಅವೆಲ್ಲ ಹೆಂಗಸಿನ ಕೆಲಸಗಳಾಗಿ ಪರಿಗಣಿತವಾಗುತ್ತವೆ. ಮಹಿಳೆಯ ಕೆಲಸಗಳು ಎಂದೂ ಅಧಿಕಾರದ ನೆಲೆಯಲ್ಲಿ ಮಾನ್ಯತೆಯನ್ನು ಪಡೆಯುವದೇ ಇಲ್ಲ. ಅವನ್ನು ಕೀಳುದರ್ಜೆಯ ಕೆಲಸಗಳೆಂದು ಭಾವಿಸಲಾಗುತ್ತದೆ. ಜನಪ್ರಿಯ ಸಂಸ್ಕೃತಿಯಲ್ಲಿ ಭಾಗಿಯಾಗುವ ಜನಸಮುದಾಯಕ್ಕೆ ಮೆಚ್ಚುಗೆಯಾಗುವ ಸಂಗತಿಗಳು ಕೀಳುದರ್ಜೆಯವು ಎಂದು ಕರೆಸಿಕೊಳ್ಳುತ್ತವೆ. ಮಹಿಳೆಗೆ ಮೊದಲನೆಯದಾಗಿ ಅವಳದೇ ಆದ ಆಯ್ಕೆಯ ಕೆಲಸಗಳಿಲ್ಲ, ಹವ್ಯಾಸಗಳಿಲ್ಲ, ನಿಗದಿತವಾದ ಎಲ್ಲ ಕೆಲಸಗಳು ನಿರ್ದೇಶಿತವಾದವುಗಳೇ. ಅವುಗಳಲ್ಲಿ ಆಕೆಯ ಸೃಜನತೆ, ಜಾಣ್ಮೆ ಪ್ರಕಟಗೊಂಡರೆ 'ಏನು ಮಹಾ' ಎಂಬ ತಿರಸ್ಕಾರ ಇದ್ದದ್ದೇ. ಇವೆಲ್ಲಾ ಮಾತುಗಳು ಅವಳ ಸೃಜನತೆ ಎಲ್ಲೆಲ್ಲಿ ಪ್ರಕಟಗೊಳ್ಳುತ್ತದೋ ಆ ಎಲ್ಲ ಜನಪ್ರಿಯ ಕಲೆಗಳಿಗೂ ಅನ್ವಯಿಸುತ್ತವೆ.

**೩.೪ ಜನಪ್ರಿಯ ಕಲೆಗಳು**

ಸಂಸ್ಕೃತಿಯ ಭಾಗಗಳಾಗಿ ಕಲೆ, ಸಾಹಿತ್ಯಗಳು ಮೂಡಿ ಬರುತ್ತವೆ. ಭಾಷೆ, ಭಾಷೇತರ ಮಾಧ್ಯಮಗಳಲ್ಲಿ ವ್ಯಕ್ತವಾಗುವ ಕಲೆಗಳಲ್ಲೂ ಮಹಿಳೆ ಮತ್ತು ಪುರುಷರ ಭಾಗವಹಿಸುವಿಕೆಗಳು ಭಿನ್ನವಾಗಿರುತ್ತವೆ. ಎಲ್ಲೆಲ್ಲಿ ಮಹಿಳಾ ಅಭಿವ್ಯಕ್ತಿ ಕಾಣಿಸಿಕೊಳ್ಳುತ್ತದೆಯೋ, ಅಲ್ಲೆಲ್ಲಾ ಮಹಿಳಾ ಸೃಜನತೆ ದ್ವಿತೀಯ ದರ್ಜೆಯದು ಎನ್ನಿಸಿಕೊಳ್ಳುತ್ತದೆ. ಗಮನಸಬೇಕಾದ ವಿಷಯ ಎಂದರೆ, ಅದೇ ಸೃಜನತೆ ಪುರುಷ ಲೋಕದ ಲೋಲುಪತೆಗೆ ಬೇಕಾದರೆ ಮಾನ್ಯತೆಯನ್ನು ಪಡೆದುಕೊಳ್ಳುತ್ತದೆ ಎಂಬ ಅಂಶವನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಸಂಗೀತ, ನೃತ್ಯ, ಅಭಿನಯ, ರೂಪದರ್ಶಿ– ಈ ಕ್ಷೇತ್ರಗಳಲ್ಲಿ ಹೆಣ್ಣನ್ನು ತೊಡಗುವಂತೆ ಹುರಿದುಂಬಿಸಿ ಅವಳ ದೇಹವನ್ನು ಬಳಸಿಕೊಳ್ಳುವುದು ಪಿತೃ ಪ್ರಧಾನತೆಯ ಮತ್ತೊಂದು ಹುನ್ನಾರ. ಜಾತ್ರೆಗಳಲ್ಲಿ, ದೇವಾಲಯಗಳಲ್ಲಿ, ನೃತ್ಯ ಮಾಡುವವರನ್ನು, ಸಂಗೀತ ಹೇಳುವವರನ್ನು, ನಾಚ್ ಮಾಡುವವರನ್ನು ಹಿಂದೆ ದೇವದಾಸಿಯರೆಂದು ಗುರುತಿಸಿ, ಅಲ್ಲಿ ಅವರ ಕಲೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಆ ಸಂದರ್ಭದಲ್ಲಿ ಈ ಕಲೆಗಳು ಕೆಲವರ ಕುಲಕಸಬು ಆಗಿತ್ತು. ಅಲ್ಲಿ ಉಳಿದ ಹೆಣ್ಣುಗಳಿಗೆ ಪ್ರವೇಶ ಇರಲಿಲ್ಲ ಮತ್ತು ಅಲ್ಲಿ ಶೀಲ, ಅಶ್ಲೀಲತೆಗಳ ಪ್ರಶ್ನೆ ಇರಲಿಲ್ಲ. ಅದೇ ಕಲೆಗಳಿಗೆ ಇತರ ಹೆಣ್ಣುಮಕ್ಕಳ ಪ್ರವೇಶ ಪ್ರಾರಂಭವಾದ ನಂತರ ನೀತಿಸಂಹಿತೆಗಳು ಹುಟ್ಟಿಕೊಂಡಿದ್ದು ಚರಿತ್ರೆ.

ಅಂದಿನಿಂದ ಇಂದಿನವರೆಗೆ ಸಿನೆಮಾಗಳಲ್ಲಿ, ಇನ್ನಿತರ ಜನಪ್ರಿಯ ಕಲೆಗಳಲ್ಲಿ ಹೆಣ್ಣು ಸಾಮಾಜಿಕವಾಗಿ ನಿಗದಿತವಾದ ಮಾದರಿಗಳಲ್ಲೇ ಮೂಡಿಬಂದಿರುವುದನ್ನು ನೋಡಬಹುದು. ಹೆಣ್ಣಿನ ಬದುಕನ್ನು ಹೊಸ ಅರಿವಿನೊಂದಿಗೆ ನೋಡುವುದನ್ನು, ನೋಡಬೇಕಾದ ಅನಿವಾರ್ಯತೆಯನ್ನು ಸ್ತ್ರೀವಾದಿ ಚಿಂತನಾ ಕ್ರಮ ಒದಗಿಸಿಕೊಡುತ್ತದೆ. ಸಿನೆಮಾ ಟಿ.ವಿ. ಧಾರಾವಾಹಿಗಳನ್ನು ಉದಾಹರಣೆಯಾಗಿ ಕೊಟ್ಟು ಈ ಅಧ್ಯಯನದಲ್ಲಿ ಜನಪ್ರಿಯ ಕಲೆಗಳಲ್ಲಿ ಹೇಗೆ ಹೆಣ್ಣು ಬಿಂಬಿತವಾಗಿದ್ದಾಳೆ, ಮತ್ತು ಅದಕ್ಕೆ ಮೂಲ ಕಾರಣ ಅವರುಗಳಿರುವ ಸಾಮಾಜಿಕ ವಾತಾವರಣ ಎಂಬುದನ್ನು ಚರ್ಚಿಸಲಾಗಿದೆ.

**೩.೪.೧ ಜನಪ್ರಿಯ ಕಲೆಯಾಗಿ ಸಿನೆಮಾ**

ಸಿನೆಮಾ ಎಂಬುದು ಒಂದು ದೃಶ್ಯಮಾಧ್ಯಮ, ಬರಹದ ಮಾಧ್ಯಮಕ್ಕಿಂತಲೂ ಪ್ರಭಾವಶಾಲಿಯಾಗಿ ಜನರನ್ನು ತಲುಪಬಲ್ಲ ಶಕ್ತಿಯುಳ್ಳದ್ದು. ಸಿನೆಮಾದಲ್ಲೂ ಕೂಡಾ ಜನಪ್ರಿಯ ಸಿನೆಮಾ – ಗಂಭೀರ ಸಿನೆಮಾ ಎಂಬ ಭಿನ್ನತೆಗಳಿವೆ. ಸಮಕಾಲೀನ ಸಮಸ್ಯೆಗಳನ್ನು ಗಂಭೀರವಾಗಿ ಶೋಧಿಸಿ ಚಿತ್ರಮಾಧ್ಯಮದ ಮೂಲಕ ಇಡುವ ಸಿನೆಮಾಗಳು ಗಂಭೀರ ಸಿನೆಮಾಗಳು. ಇವು ಪ್ರಶಸ್ತಿಯನ್ನು ಗಳಿಸಿಕೊಳ್ಳುತ್ತವೆ. ಇವುಗಳಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಅಲ್ಪ ಪ್ರಮಾಣದ್ದು. ಆದರೆ ಬಹುಸಮುದಾಯವನ್ನು ಇವು ತಲುಪುವುದೇ ಇಲ್ಲ. ಬಹು ಸಮುದಾಯ ನೋಡಬಯಸುವ, ಖುಶಿಪಡುವ ಚಿತ್ರಗಳು ಇವಲ್ಲ. ತಮ್ಮ ಸದ್ಯದ ಸಮಸ್ಯೆಗಳನ್ನು ಕೆಲವು ಗಂಟೆಗಳ ಕಾಲವಾದರೂ ಮರೆತು, ಕಾಲ ಕಳೆಯಲು ಬಹುಸಂಖ್ಯಾತರು ಬಯಸುತ್ತಾರೆ. ಇದನ್ನು ಸಮಸ್ಯೆಗಳಿಂದ ತಪ್ಪಿಸಿಕೊಂಡು ಓಡುವ ಮುಖೇಡಿತನ ಎಂದು ಗ್ರಹಿಸದೆ, ತಮ್ಮ ಸುತ್ತು ಆವರಿಸಿರುವ ವಾಸ್ತವದ ಘೋರದಿಂದ ಕೊಂಚ ಕಾಲವಾದರೂ ಬಿಡುಗಡೆಯನ್ನು ಬಯಸುವ ಮನಸ್ಥಿತಿ ಎಂದು ಗ್ರಹಿಸಬೇಕು.

'ಜನಪ್ರಿಯ' ಸಿನೆಮಾಗಳು ಸಮಾಜದ ಮುಖವಾಣಿಯಾಗಿರುತ್ತವೆ. ಅಲ್ಲಿ ಬರುವ ಗಂಡು–ಹೆಣ್ಣುಗಳು ಒಂದಿಷ್ಟು ಕಲ್ಪನೆಗಳೊಂದಿಗೆ ಸಾಮಾಜಿಕ ನಂಬಿಕೆಗಳನ್ನು ಬಿಂಬಿಸುತ್ತಿರುತ್ತವೆ. ಅವು ಸಿನೆಮಾದ ಕತೆಗಳ ಮೂಲಕ, ಹಾಡುಗಳ ಮೂಲಕ, ಮತ್ತೇ ಮತ್ತೆ ಹೇಳುವುದು 'ಹೆಣ್ಣು ಎಂದರೆ ಹೀಗಿರಬೇಕು, 'ಹಣೆಯಲ್ಲಿ ಕುಂಕುಮ ನಗುತಿರಬೇಕು', 'ಕುಂಕುಮವಿರುವುದೆ ಹಣೆಗಾಗಿ, ಅರಳಿದ ಹೂವು ಮುಡಿಗಾಗಿ', 'ತನವು ನಿನ್ನದು ಮನವು ನಿನ್ನದು' 'ನೀನೇ ವೀಣೆ ನಾನೇ ತಂತಿ, ಅವನೇ ವೈಣಿಕ', 'ಹೂವೊಂದು ಬೇಕು ಬಳ್ಳಿಗೆ,

ಮಗುವೊಂದು ಬೇಕು ಹೆಣ್ಣಿಗೆ', 'ಬಾಳ ಬಂಗಾರ ನೀನು, ಹಣೆಯ ಸಿಂಗಾರ ನೀನು, ನಿನ್ನ ಕೈಲಾಡೋ ಗೊಂಬೆ ನಾನಯ್ಯ'- ಹೀಗೆ ಮರಬಳ್ಳಿಯ ಸಂಬಂಧದ ನೆಲೆಯಲ್ಲಿಯೇ ಇಡೀ ಗಂಡು-ಹೆಣ್ಣಿನ ನೆಲೆಗಳು ಬಿಂಬಿತವಾಗುತ್ತಿರುತ್ತವೆ. ಹೆಣ್ಣಿನ ಸ್ಥಿರ ಮಾದರಿಗಳಾದ ತಾಯಿ, ಮಡದಿ, ಪ್ರಿಯತಮೆ, ಗೆಳತಿ, ಮಗಳು, ತಂಗಿ, ವ್ಯಾಂಪ್ ಪಾತ್ರಗಳೇ ಇಡೀ ತೆರೆಯಲ್ಲಿ ವ್ಯಾಪಿಸಿರುತ್ತವೆ. ಹೆಣ್ಣಿನ ಸಾಮಾಜಿಕ ಪಾತ್ರ ನಿರ್ವಹಣೆಯನ್ನು ಮಾಡುತ್ತಿರುವ ಈ ಪಾತ್ರಗಳಲ್ಲಿ ಹೆಣ್ಣು ವಿನಯೆ, ಗುಣಶೀಲೆ, ಶೀಲವಂತೆ, ವಿದ್ಯಾವಂತೆ, ಸಂಸ್ಕಾರವಂತೆಯಾಗಿರುತ್ತಾಳೆ.

ಜನಪ್ರಿಯ ಕಾದಂಬರಿಗಳು ಮತ್ತು ಜನಪ್ರಿಯ ಸಿನೆಮಾಗಳು ಒಂದೇ ನಾಣ್ಯದ ಎರಡು ಮುಖಗಳಾಗಿರುತ್ತವೆ. ಒಂದು ಓದುವ, ಇನ್ನೊಂದು ನೋಡುವ ಮಾಧ್ಯಮ ಅಷ್ಟೇ. ಅನೇಕ ಕಾದಂಬರಿಗಳು ಸಿನೆಮಾಗಳಾಗುತ್ತವೆ, ಆಗಿವೆ. ಎರಡರಲ್ಲೂ ಬಿಂಬಿತಳಾಗುವ ಹೆಣ್ಣು ತನ್ನ ಅಧೀನ ಸ್ಥಿತಿಯನ್ನು ಬಿಂಬಿಸುತ್ತಿರುತ್ತಾಳೆ. ಜೊತೆಗೆ ಪುರುಷಾಧಿಕಾರದ ಬಂಧನದಲ್ಲಿ ತನ್ನ ಬುದ್ಧಿ-ಭಾವಗಳ ವಿಸ್ಮೃತಿ ಹೊಂದಿದ ಅವಳು ತಾನು ಬಂಧನದಲ್ಲಿರುವೆ ಎಂಬುದನ್ನು ಅರಿಯದಷ್ಟು ಪ್ರಜ್ಞೆಯನ್ನು ಕಳೆದುಕೊಂಡಿರುತ್ತಾಳೆ, ಹೀಗೆ ಇರುವುದೇ ತನ್ನ ಕರ್ತವ್ಯ ಎಂದೂ ಭಾವಿಸಿರುತ್ತಾಳೆ. ಆದ್ದರಿಂದಲೇ ಅವಳು ಬಯಸುವುದು ಕೇವಲ ಪ್ರೇಮಮಯಿ ಗಂಡ, ಮುದ್ದಾದ ಮಕ್ಕಳು, ಆದರ್ಶ ಕುಟುಂಬವನ್ನು. ಇಂಥ ಕಾದಂಬರಿ ಮತ್ತು ಸಿನೆಮಾಗಳಲ್ಲಿ ಹೀಗಿದ್ದರೆ ಚೆನ್ನ ಎನ್ನುವ ಬದುಕು ಇಲ್ಲ. ಕ್ರಾಂತಿಕಾರಿ ಮಹಿಳೆಯನ್ನು ಇವು ರೂಪಿಸುವುದೇ ಇಲ್ಲ. ರೂಪಿಸಿದರೂ ಅಂತಿಮವಾಗಿ ಆಕೆ ತನ್ನ ಸೊಕ್ಕನ್ನು ಕಳೆದುಕೊಂಡು (ಬಹದ್ದೂರ್ ಗಂಡು) ತನ್ನತನದ ಪೊಳ್ಳನ್ನು ಬಿಟ್ಟು (ಅಮ್ಮಪ್ರ ಗಂಡ) ವಿದ್ಯಾಭ್ಯಾಸದ ಹಮ್ಮನ್ನು ಬಿಟ್ಟು (ಸೂರ್ಯವಂಶ) ಗಂಡಿಗೆ, ಅವನ ಪ್ರೀತಿಗೆ ಶರಣಾಗತಳಾಗುವ ಚಿತ್ರಗಳನ್ನು ಕಟ್ಟಿಕೊಡುತ್ತವೆ. ಹೀಗಾಗದೇ ಅವಳಿಗೆ ಅನ್ಯಥಾ ಮಾರ್ಗವೇ ಇಲ್ಲ. ಶರಣಾಗತ ಆದಾಗಲಾದರೂ ಈ ಸೌಖ್ಯ, ನೆಮ್ಮದಿಯ ಬದುಕು ಸಿಗಬಹುದಾ ಎಂಬ ಪ್ರಶ್ನೆಯೂ ಇಲ್ಲಿ ಕಾಣುತ್ತೆ. ಹೀಗೆ ತಾನು ತಗ್ಗಿ-ಬಗ್ಗಿ ನಡೆದಾಗಲಾದರೂ, ಗಂಡು/ಗಂಡ ತನ್ನನ್ನು ಅರ್ಥಮಾಡಿಕೊಂಡು ಬದುಕಬಹುದು ಎಂಬ ಭಾವವಿರುತ್ತದೆ. ಸಿನೆಮಾಗಳಲ್ಲಿ ಇಂಥ ಪುನರಾವರ್ತಿತ ಪಾತ್ರಗಳನ್ನು ನಿರ್ವಹಿಸುವುದರ ಮುಖಾಂತರ ಹೀಗೆಲ್ಲಾ ಇದ್ದರೆ ಸೌಖ್ಯ ಎಂಬುದನ್ನು ಬಿಂಬಿಸುತ್ತಲೇ, ಹೀಗಿಲ್ಲದ ಸಾಮಾಜಿಕ ವಾಸ್ತವಗಳ ಬಗ್ಗೆ ಅಪರೋಕ್ಷವಾಗಿ ಪ್ರಶ್ನೆಗಳನ್ನು ಎತ್ತುತ್ತಿರುತ್ತಾಳೆ.

'ಜನಪ್ರಿಯ' ಸಿನೆಮಾಗಳನ್ನು ಅದರಲ್ಲೂ ಕೆಲವನ್ನಂತೂ, ಹೆಂಗಸರಿಗಾಗಿಯೇ ಎಂಬಂತೆ ಬಿಂಬಿಸಲಾಗುತ್ತದೆ. 'ಆ ಪಿಚ್ಚರ್ ಎರಡು ಟವಲ್ ಒದ್ದೆಯಾಗುವಷ್ಟು ಕಣ್ಣೀರು ಬರಿಸುತ್ತೆ', ತಾಳಿ, ಕುಂಕುಮ, ತಾಯ್ತನ, ಮುತ್ತೈದೆತನ ಇತ್ಯಾದಿಗಳು ಹೆಂಗಸರಿಗೇ ಸಲ್ಲುವ ಸಿನೆಮಾಗಳು ಎಂದು ಪ್ರಚಾರ ಮಾಡಲಾಗುತ್ತದೆ. ಅವಿಭಕ್ತ ಕುಟುಂಬದ ವೈಭವೀಕರಣ, ತಾಯಂಥ ವಾತ್ಸಲ್ಯಮಯಿ ಅತ್ತಿಗೆಯರು, ಅಣ್ಣನಿಗಾಗಿ ತನ್ನನ್ನೇ ಅರ್ಪಿಸಿಕೊಳ್ಳುವ ತಂಗಿ, ತಂಗಿಗಾಗಿ ಸರ್ವಸ್ವವನ್ನು ತ್ಯಾಗ ಮಾಡುವ ಅಣ್ಣ, ಗಂಡನ ಎಲ್ಲ ತಪ್ಪುಗಳನ್ನು ಉಡಿಗೆ ಹಾಕಿಕೊಳ್ಳುವ ಕ್ಷಮೆಯ ಸಾಕಾರಮೂರ್ತಿಯಾದ ಹೆಂಡತಿ, ತಮ್ಮ ಪ್ರೀತಿಯನ್ನೇ ತ್ಯಾಗ ಮಾಡುವ ಪ್ರಿಯತಮೆಯರು ಒಂದು ಕಡೆ ಚಿತ್ರಿತವಾಗುತ್ತಾರೆ. ಇವಕ್ಕೆ ಸಂಪೂರ್ಣ ವಿರುದ್ಧವಾಗಿ ತಮಗಾದ ಅನ್ಯಾಯವನ್ನು ಎದುರಿಸಲು ಗಂಡನ ವಿರುದ್ಧವೇ ಛಲ ತೀರಿಸಿಕೊಳ್ಳುವ ಹೆಂಡತಿಯಾಗಿ ಪಾತ್ರ ನಿರ್ವಹಿಸುತ್ತಾರೆ. ತನ್ನ ಪ್ರೀತಿಯನ್ನು ತಿರಸ್ಕರಿಸಿದಾಗ ಆತ್ಮಹತ್ಯೆ ಮಾಡಿಕೊಂಡು ಮೋಹಿನಿಯರಾಗಿ ದೈವಭಕ್ತೆ, ಪತಿವ್ರತೆ ಹೆಂಡತಿಯ ವಿರುದ್ಧ ಸೆಣಸಾಡಿ ಈ ಜನ್ಮದಲ್ಲೂ ದುರಂತವನ್ನು ಅಪ್ಪುವ ದುಷ್ಟಶಕ್ತಿಯ ಮಾದರಿಗಳು (ನಾ ನಿನ್ನ ಬಿಡಲಾರೆ, ದುರ್ಗಾಷ್ಟಮಿ) ಹೀಗೆ ಈ ರೀತಿಯಲ್ಲಿ ಸಾಮಾಜಿಕರಣದ ಪ್ರಕ್ರಿಯೆಯಲ್ಲಿ ರೂಪಿತಗೊಂಡ ವ್ಯಕ್ತಿತ್ವಗಳು, ಬದುಕಿನಲ್ಲಿ ನಿರ್ವಹಣೆಯಾಗುವ ಪಾತ್ರಗಳು ಮತ್ತೆ, ಮತ್ತೆ ಚಲನಚಿತ್ರಗಳಲ್ಲೂ ಪುನರಾವರ್ತಿತವಾಗುತ್ತವೆ. ಎಲ್ಲಾ ಸಿನೆಮಾಗಳಲ್ಲಿಯೂ ಹೆಚ್ಚು ಕಡಿಮೆ ಇಂಥದ್ದೇ ಮಾದರಿಗಳು ಕಾಣಿಸಿಕೊಳ್ಳುತ್ತವೆ. ಇವೇ ಸಿದ್ಧಮಾದರಿಗಳನ್ನು ಪ್ರೇಕ್ಷಕರು ಬಹಳ ಪ್ರೀತಿಯಿಂದಲೇ ಸ್ವೀಕರಿಸುತ್ತಾರೆ. ಅವುಗಳೊಂದಿಗೆ ತಾದಾತ್ಮವನ್ನು ಅನುಭವಿಸುತ್ತಾರೆ. ಯಾಕೆಂದರೆ ಅವರೂ, ಸಮಾನವಾದ ಸಾಮಾಜಿಕ ಪಾತಳಿಯಲ್ಲಿ ಬದುಕುತ್ತಿರುತ್ತಾರೆ. ಖಳನಾಯಕನ ವಿರುದ್ಧ ನಾಯಕ ಗೆಲ್ಲುವುದು ಎಲ್ಲಾ ಸಿನೆಮಾಗಳ ಖಚಿತ ಫಾರ್ಮುಲಾ. ಆದರೂ, ನಾಯಕ ಗೆದ್ದಾಗ ತಾವೇ ಗೆದ್ದಂತೆ ಸಂಭ್ರಮಿಸುತ್ತಾರೆ, ಸಿಳ್ಳು ಹಾಕುತ್ತಾರೆ, ಚಿಲ್ಲರೆ ಕಾಸು ಎಸೆಯುತ್ತಾರೆ, ಹರ್ಷ ವ್ಯಕ್ತಪಡಿಸುತ್ತಾರೆ. ಹೆಣ್ಣು ಗಂಡಿಗೆ ಶರಣಾಗತಳಾದಾಗಲೂ ಇದೇ ಸ್ಥಿತಿಯೇ ಮತ್ತು ಹಾಗೇ ಆದಾಗಲೇ ಸಿನೆಮಾ ಓಡುವುದು. ಹೆಣ್ಣಿನ ವೇಷಭೂಷಣಗಳಿಂದ ಹಿಡಿದು ಅವರ ನಡಾವಳಿಯವರೆಗೂ ಸಿನೆಮಾದಲ್ಲಿ ನಿರ್ದೇಶನಗಳಿರುತ್ತವೆ. ಅಲ್ಲಿನ ಗಂಡು ಮಾರ್ಡನ್ ಆಗಿದ್ದರೆ, ಹೆಣ್ಣು ಅವನು ಬಯಸುವಂಥ

ಉಡುಗೆಗಳನ್ನು ತೊಡಬೇಕು, ತೊಡುತ್ತಾಳೆ. ಆತ ಸೀರೆಯಲ್ಲೇ ಆಕೆಯನ್ನು ಇಷ್ಟಪಟ್ಟರೆ ಆ ಉಡುಪಿನಲ್ಲೇ ಇರುತ್ತಾಳೆ.

ಇಲ್ಲಿನ ನಾಯಕರು ಸರ್ವಗುಣಸಂಪನ್ನರು. ಅವರು ವೀರರು, ಬೆಂಕಿಯಂಥವರು, ಗಾಳಿಯಂಥವರು, ಸುಂಟರಗಾಳಿಯ ಗುಣವುಳ್ಳವರು, ಸಿಂಹದ ಶಕ್ತಿ ಇರುವವರು, ಮದ್ದಾನೆಯ ಶಕ್ತಿ, ಗಾಂಭಿರ್ಯವನ್ನು ಹೊಂದಿದವರು ಉದಾತ್ತ ಭಾವದವರು ಆಗಿರುತ್ತಾರೆ. ಸ್ನೇಹ ಪ್ರೀತಿಗೆ ಬಗ್ಗುವ ಎದುರಾಳಿಗಳಿಗೆ ಸಿಂಹಸ್ವಪ್ನವಾಗುವ ಗುಣ ಎಲ್ಲವೂ ಏಕವ್ಯಕ್ತಿಯಲ್ಲೇ ಮಿಳಿತ. ಇಂಥ ಗಂಡಿನ ಆಸರೆಯಲ್ಲಿ ಹೆಣ್ಣು ಸುಖಿ, ಪರಮಸುಖಿ. ಆಸರೆಯಿಲ್ಲದ ಹೆಣ್ಣು ಬೇಲಿ ಇಲ್ಲದ ಹೊಲವಿದ್ದಂತೆ, ಯಾರೂ ಬೇಕಾದರೂ ಮೇಯಬಹುದು. ಅಂಥ ಹೆಣ್ಣು ನಾಯಿ ಮುಟ್ಟಿದ ಮಡಕೆ ಇದ್ದಂತೆ. ಶೀಲವನ್ನು ಕಳೆದುಕೊಂಡ ಮೇಲೆ ಪ್ರೀತಿಸುವವನಿಗೆ ಆ ಮಲೀನ ದೇಹವನ್ನು ಅರ್ಪಿಸಲಾರದ ನಾಯಕಿಯರು. (ಚಲಿಸುವ ಮೋಡಗಳು) ಯೌವ್ವನದ ಹೊಳೆಯಲ್ಲಿ ಈಜಾಟವಾಡಿದರೆ ಸೋಲು ಹೆಣ್ಣಿಗೆ. ಆದ್ದರಿಂದ ಅವಳು ತನ್ನ ಶೀಲವನ್ನು ಮದುವೆಯ ಮೊದಲ ರಾತ್ರಿ ತನ್ನ ಗಂಡನಿಗೆ ಅರ್ಪಿಸಬೇಕು. ಇಲ್ಲದಿದ್ದರೆ ಅಂಥ ಮಕ್ಕಳು ಅನಾಥ ಎನ್ನಿಸಿಕೊಂಡು ಸಮಾಜದಲ್ಲಿ ಛೀ, ಥೂ ಎಂದು ಬದುಕಬೇಕಾಗುತ್ತದೆ............. ಹೀಗೆ ಈ ಮಾದರಿಯ ಚೌಕಟ್ಟುಗಳೊಳಗೆ ಚಲನಚಿತ್ರಗಳು ನಿರ್ಮಾಣವಾಗುತ್ತವೆ.

ಇವುಗಳಲ್ಲಿ ಬರುವ ಕತೆ, ಹಾಡುಗಳೆಲ್ಲಾ ಚರ್ವಿತಚರ್ವಣ. ಆದರೂ ಬಹುಸಮುದಾಯ ಇವುಗಳಿಗೆ ಮುಗಿಬೀಳುವುದೇಕೆ ಎಂಬ ಪ್ರಶ್ನೆಗೆ ಉತ್ತರವನ್ನು ನಾವು ಮನುಷ್ಯರ ಮನಸ್ಸಿನ ಹಿನ್ನೆಲೆಯಲ್ಲಿ ಹುಡುಕಬೇಕಾಗುತ್ತದೆ. ಎಲ್ಲ ಪ್ರಾಣಿಗಳಿಗಿಂತಲೂ ಭಿನ್ನವಾದ ಮನುಷ್ಯ ಪ್ರಾಣಿಗೆ ಮಾತ್ರ ನೆನಪಿಸಿಕೊಳ್ಳುವ ಸಾಮರ್ಥ್ಯವಿರುವುದು. ಹಾಗೆಯೇ ತನಗೆ ಒಲ್ಲದ ಸಂಗತಿಗಳನ್ನು ಮರೆತುಬಿಡಬೇಕು ಎನ್ನುವ ಇಚ್ಛೆಯಿರುವುದು. ಸಾಮಾನ್ಯವಾಗಿ ನಾವು ಬೆಳೆಸಿಕೊಳ್ಳುವ ಚಟಗಳ ಹಿನ್ನಲೆಯೂ ಕೂಡಾ, ತಾತ್ಕಾಲಿಕವಾಗಿ ಒಂದು ಸಂಗತಿಯಿಂದ ದೂರವಿರುವುದೇ ಆಗಿರುತ್ತದೆ. ಕುಡಿತಕ್ಕೆ ಶರಣಾಗುವವರು, ಗಾಂಜಾ, ಚರಸ್‌ಗಳಿಗೆ ಈಡಾಗುವವರು, ಸಿಗರೇಟ್, ಗುಟಕಾಗಳಿಗೆ ಶರಣಾಗುವವರು. ಸಿನೆಮಾ ನೋಡುವ ಗೀಳನ್ನು ಬೆಳೆಸಿಕೊಂಡವರು – ಈ ಎಲ್ಲರೂ ತಾತ್ಕಾಲಿಕವಾಗಿ ತಮ್ಮ ಸದ್ಯದ ಕಟು ವಾಸ್ತವವನ್ನು ಮರೆತು, ಕೆಲಕಾಲವಾದರೂ ಬಿಡುಗಡೆಯನ್ನು ಬಯಸುವವರು. ಓದು ಎಂಬುದು, ಸಿನೆಮಾಗಳ ವೀಕ್ಷಣೆ, ಕುಡಿತ, ಮಾದಕ ವಸ್ತುಗಳ

ತರಹ ತೀವ್ರವಾದ ಆಘಾತವನ್ನುಂಟು ಮಾಡದಿದ್ದರೂ ಭ್ರಮೆಯ ಬದುಕನ್ನು ಕಟ್ಟಿಕೊಡುತ್ತದೆ. ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ, ಇಂಥ ಸಂಗತಿಗಳಿಗೆಲ್ಲಾ ಪಕ್ಕಾಗುವವರು, ಬಹುಸಂಖ್ಯಾತರು ಮತ್ತು ಸಾಮಾಜಿಕವಾಗಿ ಅಧೀನ ನೆಲೆಯಲ್ಲಿರುವವರು. ಮಹಿಳೆಯರದು ಯಾವಾಗಲೂ ಪರತಂತ್ರದ ಬದುಕೇ ಆಗಿರುವುದರಿಂದ ತನ್ನ ಬದುಕನ್ನು ಆವರಿಸಿರುವ ಸ್ತ್ರೀತ್ವ ಎಂಬ ಭ್ರಾಮಕತೆಯ ಬಿಡುಗಡೆಗಾಗಿ ತಾತ್ಕಾಲಿಕ ನಿಲ್ದಾಣಗಳನ್ನು ನಿರ್ಮಿಸಿಕೊಳ್ಳುತ್ತಾಳೆ. ತನ್ನನ್ನು ಮರೆಯುವ, ಮರೆಸುವ ಸಂಗತಿಗಳನ್ನು ಸುತ್ತಲೂ ಆವಾಹಿಸಿಕೊಳ್ಳುತ್ತಾಳೆ. ಸಿನೆಮಾಗಳಲ್ಲಿ ತನ್ನ ಪ್ರತಿಬಿಂಬಗಳನ್ನೇ ಕಾಣುತ್ತಾ ಅಂಥದೊಂದು ಖುಶಿಯ ಬದುಕನ್ನು ಬಯಸುತ್ತಿರುತ್ತಾಳೆ. ಮಹಿಳೆ ನಿರ್ಮಾಣಮಾಡಿಕೊಂಡು ಬದುಕುತ್ತಿರುವ ರೀತಿ ಸರಿಯೇ, ಈ ಸತ್ಯವೇ ಖಾಯಂ ಆಗಬೇಕೇ ಎಂದರೆ ಅಲ್ಲ ಎಂಬುದು ಉತ್ತರವಾಗುತ್ತದೆ. ಅದೊಂದು ಪರಿಮಿತ ಸತ್ಯ. ಇದು ಲೋಕದ ಸತ್ಯವಾಗಿ ಪರಿವರ್ತಿತಗೊಂಡಾಗ ಮಾತ್ರ ನಿಜವಾಗಿ ಹೆಣ್ಣಿನ ಬದುಕಿನ ಬಿಡುಗಡೆ ಸಾಧ್ಯವಾಗುವುದು. ಇಲ್ಲದಿದ್ದರೆ ಇಂಥದ್ದೊಂದು ಬಹುದೊಡ್ಡ ಸಮುದಾಯ ನಿರಂತರವಾಗಿ ಎಲ್ಲ ಭಾಷೆಗಳ ಗಡಿಯನ್ನು ಮೀರಿ ಭ್ರಮಾಲೋಕವನ್ನು ನಿರ್ಮಾಣ ಮಾಡುತ್ತಲೇ ಇರುತ್ತದೆ. ಇಂಥದ್ದೊಂದು ಭ್ರಮಾಲೋಕದ ಹಿನ್ನೆಲೆಯಲ್ಲಿ ಸಮಾಜ ಭಾಗಿಯಾಗಿದೆಯೆಂದರೆ, ಅದರ ಒಡೆಯುವಿಕೆಗೂ ಅದೇ ಕಾರಣವಾಗಬೇಕು. ಆಗ ಮಾತ್ರ ಆಮೂಲಾಗ್ರ ಬದಲಾವಣೆ ಸಾಧ್ಯ ಎಂಬುದು ಅಧ್ಯಯನದ ತಿಳುವಳಿಕೆ.

**೩.೪.೨.ಜನಪ್ರಿಯ ಧಾರಾವಾಹಿಗಳು**

ಚಲನಚಿತ್ರ ಬೃಹತ್ ತೆರೆಯ ಮೇಲೆ ಪ್ರದರ್ಶಿತವಾದರೆ ದೂರದರ್ಶನದಲ್ಲಿ ನಿತ್ಯವೂ ಧಾರಾವಾಹಿಗಳದೇ ಸುಗ್ಗಿ. ಅಂಗೈನಲ್ಲಿ ಜಗತ್ತನ್ನು ತೋರಿಸುವ ವಿಸ್ಮಯಕಾರಿ ತಂತ್ರಜ್ಞಾನ. ಜಗತ್ತಿನ ಜ್ಞಾನವನ್ನು ಬಿತ್ತರಿಸುವುದರ, ಜೊತೆಗೆನೇ ನಿತ್ಯವೂ ಚಲನಚಿತ್ರಗಳಿಗೆ ಸಂಬಂಧಪಟ್ಟ ಸಂಗತಿಗಳನ್ನು, ಧಾರಾವಾಹಿಗಳನ್ನು ಬಿತ್ತರಿಸುತ್ತದೆ. ಪತ್ರಿಕೆಗಳಲ್ಲಿ ಕೆಲವು ಪತ್ರಿಕೆಗಳು ನಿತ್ಯವೂ ಧಾರಾವಾಹಿಗಳನ್ನು ಪ್ರಕಟಿಸಿದರೆ, ಹೆಚ್ಚಿನವು ವಾರಕ್ಕೆ ಒಮ್ಮೆ ಪ್ರಕಟಿಸುತ್ತವೆ. ದೂರದರ್ಶನಗಳಲ್ಲಿ ಬಿಡುವೇ ಇಲ್ಲದ ಹಾಗೇ ಪ್ರತಿ ಚಾನಲ್‌ಗಳಲ್ಲೂ ಧಾರಾವಾಹಿಗಳು ಪ್ರಸಾರವಾಗುತ್ತಿರುತ್ತವೆ. ಅತ್ಯಂತ ಜನಪ್ರಿಯತೆ ಮತ್ತು ಬೇಡಿಕೆಯುಳ್ಳ ಚಾನಲ್ ಸ್ಟಾರ್ ಪ್ಲಸ್ (ಕೇಬಲ್ ಆಪರೇಟರ್‌ಗಳನ್ನು, ವೀಕ್ಷಕರನ್ನು ಮೌಖಿಕವಾಗಿ ಪ್ರಶ್ನಿಸಿ ತಿಳಿದುಕೊಂಡ ಮಾಹಿತಿ)ನಲ್ಲಿ ಪ್ರದರ್ಶನಗೊಳ್ಳುವ ಧಾರಾವಾಹಿಗಳು ಬಹು ಬೇಡಿಕೆಯನ್ನು

ಹೊಂದಿದವು. 'ಬಿದಾಯಿ', 'ಎ ರಿಸ್ತಾ ಕ್ಯಾ ಕೆಹಲಾತಾ ಹೈ', - ಎರಡು ಹಿಂದಿ ಧಾರಾವಾಹಿಗಳನ್ನು ಅಧ್ಯಯನದಲ್ಲಿ ಉದಾಹರಣೆಯಾಗಿ ಬಳಸಿಕೊಳ್ಳಲಾಗಿದೆ. ಈ ಎರಡೂ ಧಾರಾವಾಹಿಗಳು ಬಹು ಜನಪ್ರಿಯತೆಯನ್ನು ಹೊಂದಿದವು. ಸ್ಟಾರ್ ಅವಾರ್ಡ್‌ಗಳನ್ನು ಪಡೆದುಕೊಂಡವು. ಈ ಧಾರಾವಾಹಿಗಳನ್ನು ಗಮನಿಸಿದಾಗ ಸಿನೆಮಾವೊಂದು ತುಣುಕು, ತುಣುಕಾಗಿ ಮೂಡಿ ಬಂದಿರುವಂತೆ ಭಾಸವಾಗುತ್ತದೆ. ಅದೇ ಕೌಟುಂಬಿಕ ಚಿತ್ರಣ, ತಂದೆ-ಮಗಳ ಬಾಂಧವ್ಯ ವಾರಗಿತ್ತಿಯರ ಕಲಹ, ಅಕ್ಕ-ತಂಗಿಯರ ಪ್ರೀತಿ, ಅತಿ ಒಳ್ಳೆಯ ಹೆಂಡತಿ, ಅತ್ಯಂತ ಪ್ರೀತಿಸುವ ಗಂಡ-ಇವೆಲ್ಲಾ 'ಬಿದಾಯಿ' ಧಾರಾವಾಹಿಯಲ್ಲಿ ಮೂಡಿ ಬರುತ್ತವೆ. ಈ ಧಾರವಾಹಿಯಲ್ಲಿ ಮಧ್ಯಮ ವರ್ಗದ ಒಂದೆ ಕುಟುಂಬದ ಇಬ್ಬರು ಹುಡುಗಿಯರು ಶ್ರೀಮಂತ ಮನೆತನದ ಅಣ್ಣ-ತಮ್ಮಂದಿರನ್ನು ವಿವಾಹವಾಗುವ ಕಥಾನಕವಿದು. ಅಣ್ಣನನ್ನು ಮದುವೆಯಾಗುವ ಹುಡುಗಿಯದು ಸ್ಥಿರಮಾದರಿ ಪಾತ್ರ ನಿರ್ವಹಣೆ. ತನ್ನ ಗಂಡ ಮಾನಸಿಕವಾಗಿ ಅಸ್ವಸ್ಥನಾದರೂ ಬಹಳ ಸಹನೆಯಿಂದ ಬಂದ ಸಮಸ್ಯೆಗಳನ್ನೆಲ್ಲಾ ನಿಭಾಯಿಸುತ್ತಾಳೆ. ಅವಳ ಹೆಸರೂ ಸಹನಾ! ತಂಗಿ ರಾಗಿಣಿಯ ಪಾತ್ರವೂ ಮಾದರಿಯ ಸೊಸೆಯದೇ. ಹೀಗೆ ಧಾರಾವಾಹಿ ನಿತ್ಯವೂ ಸಾಗುತ್ತದೆ. ಈಗ 'ಎ ರಿಸ್ತಾ ಕ್ಯಾ ಕೆಹಲಾತಾ ಹೈ'ದಲ್ಲಿ ಎರಡು ಸಂಪ್ರದಾಯಸ್ಥ ಅವಿಭಕ್ತ ಕುಟುಂಬಗಳ ನಡುವೆ ನಡೆಯುವ ಮದುವೆಯ ಚಿತ್ರಣವಿದೆ. ನಾಯಕಿ ಅಕ್ಷರಾ ನೈತಿಕ್‌ನನ್ನು ಮದುವೆಯಾಗುವ ನಡುವಿನ ಕಥಾನಕವೇ ಧಾರಾವಾಹಿ. ಅದಕ್ಕೆ ಪೂರಕವಾಗಿ ಅಕ್ಷರಾಳ ಅಣ್ಣನ ಪ್ರೇಮವಿವಾಹ, ಪ್ರೀತಿ ವಾತ್ಸಲ್ಯದಿಂದಿರುವ ವಾರಗಿತ್ತಿಯರು, ಅತ್ತೆ ಸೊಸೆಯರ ಚಿತ್ರಣಗಳಿವೆ. ಮದುವೆಯ ನಿಶ್ಚಿತಾರ್ಥ ಆದಾಗಿನಿಂದ ಅಕ್ಷರಾಳಿಗೆ ಕೊಡ ಮಾಡುವ ತರಬೇತಿ ಇದೆಯಲ್ಲ, ಅದು ಅತ್ತೆಮಾವರಿಗಂಜಿ........... ದ ಮಾರ್ಡನ್ ಮಾದರಿಯದೇ. ಹೆಣ್ಣು ಇಂದು ಶಿಕ್ಷಣ ಪಡೆದು ಕಾನೂನುಗಳನ್ನು ಅರಿತು, ದೊಡ್ಡ ಹುದ್ದೆಗಳನ್ನು ನಿರ್ವಹಿಸುತ್ತಿರುವ ೨೧ನೆಯ ಶತಮಾನದಲ್ಲೂ ಮನೆಯಲ್ಲಿ ಕೂತು ದೂರದರ್ಶನವನ್ನು ವಿಕ್ಷಿಸುವವರಿಗೆ ಪ್ರದರ್ಶಿತವಾಗುವ ಧಾರಾವಾಹಿಗಳು ೩-೪ನೆಯ ಶತಮಾನದ್ದೇ. ತಮ್ಮ ಬಿಡುವಲ್ಲದ ಬಿಡುವನ್ನು ಕಳೆಯಲು ಬಹು ದೊಡ್ಡ ಮಹಿಳಾ ಸಮುದಾಯ ಮತ್ತು ಹೆಣ್ಣು ಮಕ್ಕಳು (ಹರೆಯದ ಯುವತಿಯರು) ಆಕರ್ಷಿತರಾಗುವುದು ಇಂಥ ಧಾರಾವಾಹಿಗಳಿಂದಲೇ. ನಿಶ್ಚಿತಾರ್ಥವಾದ ಮೇಲೆ ಅತ್ತೆಯ ಮನೆಗೆ ಹೋಗಲು ನಡೆಸುವ ತಯಾರಿಗಳು ಗೃಹಿಣಿತ್ವವನ್ನು ನಿಭಾಯಿಸುವಂಥವೇ. ಹೊಸ ವಿಧಾನಗಳ ವಿನ್ಯಾಸದಲ್ಲಷ್ಟೇ. (ಟ್ರೈನಿಂಗ್

ಟೇಬಲ್ ಮೇಲೆ ಅಂದವಾಗಿ ಸಲಾಡ್‌ಗಳನ್ನು ಮಾಡಿ ಅಲಂಕರಿಸುವುದು ಇತ್ಯಾದಿ) ಹುಡುಗಿಯೊಬ್ಬಳು, ಹುಡುಗನೊಂದಿಗೆ ನಿಶ್ಚಿತಾರ್ಥವಾದ ಮೇಲೆ ಹೇಗೆ ಮಾತನಾಡಬೇಕು, ಏನು ಮಾತನಾಡಬೇಕು ಎಲ್ಲದರ ಚಿತ್ರಣ ಬಹು ನವುರಾದ ಪ್ರೀತಿ, ಪ್ರೇಮಗಳೊಂದಿಗೆ ಚಿತ್ರಣಗೊಂಡು ಜನಪ್ರಿಯವಾಗಿದೆ. ಇಲ್ಲಿನ ನಾಯಕಿ ಅಕ್ಷರಾಳೂ ಸುಂದರಿ, ನಯವಂತೆ, ನಾಚಿಕೆಸ್ವಭಾವದವಳು, ಬೋಳೆ ಸ್ವಭಾವದವಳು, ತಿಳುವಳಿಕಸ್ಥೆ, ಬಳ್ಳಿಯ ಹಾಗೇ ನಾಜೂಕಾಗಿರುವವಳು ಇದನ್ನೇ ಸ್ತ್ರೀಗುಣಗಳೆಂದು ಹೇಳಿ ಹೀಗೆ ಇರಬೇಕು ಎಂದು ಪಾರಂಪರಿಕ ಚಿಂತನೆಗಳು ನಿರ್ಬಂಧಿಸುತ್ತವೆ. ಇದೇ ಮಾದರಿಯ ಹಿಂದಿ ಚಲನಚಿತ್ರ 'ವಿವಾಹ್'ವನ್ನಲ್ಲಿ ನೆನಪಿಸಿಕೊಳ್ಳಬಹುದು.

ಈ ಮಾದರಿಯ ಧಾರಾವಾಹಿಗಳು ಕನ್ನಡದಲ್ಲಿ ಮತ್ತು ಇತರ ಭಾಷೆಗಳಲ್ಲಿ ಚಿತ್ತರಗೊಳ್ಳುತ್ತಿರುತ್ತವೆ. ಭಾಷೆ ಬೇರೆ ಭಾವ ಒಂದೇ. ಮಾಂಗಲ್ಯ, ರಂಗೋಲಿ, ಸುಕನ್ಯಾ........... ಎಲ್ಲ ಧಾರಾವಾಹಿಗಳದು ಅದೇ ರಾಗ, ಅದೇ ಹಾಡು ಮಾದರಿಯವೆ. ವಿಭಿನ್ನ ಮಾದರಿಯ ಧಾರಾವಾಹಿಗಳು ಪ್ರಸಾರವಾಗುತ್ತವೆ, ಆದರೂ ಹೆಣ್ಣಿನ ಸಮಸ್ಯೆಗಳು ಚಿತ್ತರಗೊಳ್ಳುವಾಗ ಮತ್ತದೇ ಹಳೆಯ ಧಾಟಿಯೇ ಹೆಚ್ಚಾಗಿ ಪ್ರಸ್ತಾಪವಾಗುತ್ತವೆ. 'ಮುಕ್ತ ಮುಕ್ತ' ಧಾರಾವಾಹಿಯ ಕುರಿತ ಸಂವಾದದಲ್ಲಿ ಅನೇಕರ ಪ್ರಶ್ನೆ ಶಾಂಭವಿ ಮಿಸ್ ಮದುವೆಯಾಗದಿರುವ ಬಗ್ಗೆ ಮಾಡಿಕೊಳ್ಳುವ ಹಳವಂಡಿಕೆಯ ಬಗ್ಗೆನೇ. ತೀರಾ ಇತ್ತೀಚೆಗೆ ಬೆರಳೆಣಿಕೆಯಷ್ಟು ಸ್ತ್ರೀಯರು ಈ ದೃಶ್ಯಮಾಧ್ಯಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪುರುಷ ಜಗತ್ತಿನ ನಡುವೆ ತೀರಾ ಸಣ್ಣ ಸಣ್ಣ ಬದಲಾವಣೆಯ ಎಳೆಗಳು ಕಾಣುತ್ತಿವೆ. ಇದು ಮುಂದುವರೆಯುವ ಆಶಾಭವವನ್ನು ಹೊಂದಬಹುದು.

ಈ ಧಾರಾವಾಹಿಗಳು ಮಹಿಳಾ ಧಾರಾವಾಹಿಗಳೆಂದೇ ಹೆಸರುವಾಸಿಯಾದವು, ಸಮಾಜದಲ್ಲಿ ಇರುವ ವಾಸ್ತವ ಸಂಗತಿಗಳನ್ನು ಮತ್ತಷ್ಟು ವಿಜೃಂಭಿಸುತ್ತಾ ದೂರದರ್ಶನದ ಧಾರಾವಾಹಿಗಳು ಸಿದ್ಧಮಾದರಿಗಳನ್ನು ಕಟ್ಟಿಕೊಡುತ್ತವೆ. ಇವು ಒಂದು ಚೌಕಟ್ಟಿಗೆ ಒಗ್ಗದೆ, ಸಮಕಾಲೀನ ಸಮಸ್ಯೆಗಳನ್ನು ತಮ್ಮ ಕಥಾಹಂದರದೊಳಗೆ ಸೇರಿಸಿಕೊಂಡು ಬೆಳೆಯುತ್ತಾ ಹೋಗುವ ಮಾದರಿಯವು. ಸಾಮಾಜಿಕ ಸತ್ಯಗಳನ್ನು ಹೆಣ್ಣಿನ ನಿಗದಿತ ಮಾದರಿಗಳನ್ನು ಚಿತ್ರಿಸುತ್ತವೆ. ಅವುಗಳನ್ನು ನೋಡುತ್ತಾ ಅದರಲ್ಲಿ ತಲ್ಲೀನರಾಗುವವರು ಈ ಸಾಮಾಜಿಕ ವಾಸ್ತವದ ಕಟುತ್ವವನ್ನು ಎದುರಿಸಲಾರದವರು. ತಮ್ಮದಲ್ಲದ' ಬದುಕನ್ನು ಬದುಕುವ, ವಾಸ್ತವ ಬದುಕಿನ ನಿಸ್ಸಾರತೆಯನ್ನು ಕ್ಷಣ ಕಾಲವಾದರೂ ಮರೆಯುವುದಕ್ಕಾಗಿಯೇ ಮೈ

ಮರೆಯಿಸುವ ಇಂಥ ಪ್ರೇಮ ಕಥಾನಕಗಳಲ್ಲಿ ತಲ್ಲೀನರಾಗುತ್ತಾರೆ ಮತ್ತು ತಮ್ಮ ಅಸ್ತಿತ್ವವನ್ನು ಉತ್ತಮ ಗೃಹಿಣಿ, ತಾಯಿ, ಹೆಂಡತಿ, ಮಗಳು, ಸೊಸೆ, ಪ್ರಿಯತಮೆ, ಗೆಳತಿಯಾಗುವುದರಲ್ಲಿ ಕಂಡುಕೊಂಡು ತೃಪ್ತರಾಗುತ್ತಾರೆ. ಈ ನೆಲೆ ಇಟ್ಟಂಗ ಇರಬೇಕಾದ ಅನಿವಾರ್ಯದ ನೆಲೆಯದು. ಈ ಚೌಕಟ್ಟಿನಾಚೆ ಸಂಘರ್ಷಕ್ಕೆ ಇಳಿಯುವವರು ಹೋರಾಟದ ಹಾದಿಯನ್ನು ತಮ್ಮದನ್ನಾಗಿ ಕೊಳ್ಳಬೇಕಾಗಿರುವುದರಿಂದ ಬಹು ಸಮುದಾಯ ಈ ಮೌಲ್ಯಗಳನ್ನೇ ಸ್ವೀಕರಿಸಿ ಬದುಕುತ್ತವೆ. ಅಸ್ತಿತ್ವವಾದಿಯಾದ ಸಿಮಾನ್-ದ-ಬೋವಾ ನಮ್ಮ ಬಂಧನ ಮತ್ತು ಬಿಡುಗಡೆಗೆ ನಾವೇ ಕಾರಣರೆಂದು ಹೇಳಿದ್ದು ಸತ್ಯದ ಸಂಗತಿಯಾದರೂ, ಬಂಧನಕ್ಕೆ ಕಾರಣ ಸಾಮಾಜಿಕವಾಗಿದ್ದಾಗ, ಬಿಡುಗಡೆ ಕೂಡಾ ಸಾಮಾಜಿಕವಾಗಿಯೇ ಆದಾಗ ಮಾತ್ರ ಬಹು ಸಮುದಾಯದಲ್ಲಿ ಸಂಚಲನ ಸಾಧ್ಯ.

**೩.೫ ಜನಪ್ರಿಯ ಸಾಹಿತ್ಯ**

ಸಾಹಿತ್ಯ ವಲಯ ಕೂಡಾ ಮಹಿಳಾ ಅಸ್ತಿತ್ವವನ್ನು ಶೋಧಿಸುವ ಬಹುಮುಖ್ಯ ನೆಲೆ. ಸಾಹಿತ್ಯ ಏಕಕಾಲಕ್ಕೆ ಏಕವ್ಯಕ್ತಿಯ ಅಭಿವ್ಯಕ್ತಿ ಮಾಧ್ಯಮ ಮತ್ತು ಲೋಕದ ಸಂಗತಿಗಳನ್ನು ಬಿಂಬಿಸುವ ಪರಿಕರವಾಗಿ ಬಳಕೆಯಾಗುತ್ತದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಚಾರಿತ್ರಿಕವಾಗಿ ಅಧೀನ ನೆಲೆಯಲ್ಲಿರುವ ಮಹಿಳೆ ಸಾಹಿತ್ಯ ವಲಯದಲ್ಲೂ ಲಿಂಗ ರಾಜಕಾರಣಕ್ಕೆ ಒಳಗಾಗಿದ್ದಾಳೆ ಎಂಬುದನ್ನು ಸ್ತ್ರೀವಾದಿಗಳು ಹೇಳಿದ್ದಾರೆ. ಇಡೀ ಸಾಹಿತ್ಯ ಚರಿತ್ರೆಯುದ್ದಕ್ಕೂ ಮಹಿಳಾ ಬರವಣಿಗೆಯನ್ನು ಅಂಚಿಗೆ ಸರಿಸಿರುವುದು ಕಂಡುಬಂದರೆ, ಅದರ ಮುಂದುವರಿಕೆಯಾಗಿ ವಿಮರ್ಶೆಯ ವಿಧಿವಿಧಾನಗಳು ಅವಳ ಸೃಜನತೆಯನ್ನು, ಸಾಹಿತ್ಯವನ್ನು ದ್ವಿತೀಯ ದರ್ಜೆಯದೆಂದು ತಿರಸ್ಕರಿಸಿ ಅವರನ್ನು ಮೂಲೆಗೊತ್ತರಿಸಿದೆ. ಮಹಿಳಾ ಸಾಹಿತ್ಯವು ಎದುರಿಸುತ್ತಿರುವ ಸವಾಲುಗಳನ್ನು ಎರಡು ನೆಲೆಗಳಲ್ಲಿ ನೋಡುವ ಅಗತ್ಯ ಇದೆಯೆಂದು 'ಡಾ. ಎಚ್.ಎಸ್. ಶ್ರೀಮತಿ'ಯವರು ಸರಿಯಾಗಿ ಗುರುತಿಸಿದ್ದಾರೆ.

೧. "ಇಡೀ ಸಾಹಿತ್ಯ ಚರಿತ್ರೆಯ ವಾಹಿನಿಯಲ್ಲಿ ಕಳೆದು ಹೋಗಿರುವ ಮಹಿಳಾ ಸಾಹಿತ್ಯದ ಎಳೆಗಳನ್ನು ಶೋಧಿಸುವುದು.

೨. ಒಟ್ಟು ಸಾಹಿತ್ಯ ಸಂದರ್ಭದಲ್ಲಿ ಮಹಿಳಾ ಸಾಹಿತ್ಯದ ಬಲಾಬಲಗಳನ್ನು ನಿರ್ಧರಿಸುವ ಅಂಶಗಳಾವುವು ಎಂಬುದನ್ನು ಗ್ರಹಿಸುವುದು."[೧೦]

ಅವನ ಚರಿತ್ರೆಯಲ್ಲಿ ಅವಳಿಲ್ಲದಿರುವುದನ್ನು ಅನೇಕ ಸಾಕ್ಷಾಧಾರಗಳ ಮುಖಾಂತರ ಸ್ತ್ರೀವಾದಿಗಳು ಚರ್ಚಿಸಿದ್ದಾರೆ. ಕನ್ನಡ ಸಂದರ್ಭದಲ್ಲಿ ಹಿಂದಿನ ಅಧ್ಯಾಯದಲ್ಲಿ ಮಾಡಿದ ಚಾರಿತ್ರಿಕ ಸಮೀಕ್ಷೆ ಈ ಅಂಶವನ್ನು ಬಹಳ ಸ್ಪಷ್ಟವಾಗಿ ನಿರೂಪಿಸುತ್ತದೆ. ಮಹಿಳೆಯ ಸೃಜನತೆ ಬರಹದ ರೂಪ ಪಡೆದುಕೊಂಡು ಸಾಹಿತ್ಯವಾಗಿ ಹೊರಬಂದಾಗ ಅದು ಕತೆಯಾಗಲಿ, ಕಾವ್ಯವಾಗಲಿ, ಕಾದಂಬರಿಯಾಗಲಿ ವಿಮರ್ಶೆಯ ಮಾನದಂಡಗಳಿಂದ ತಿರಸ್ಕೃತಗೊಳ್ಳುತ್ತದೆ. ಪಿತೃಪ್ರಧಾನಧಾರೆಯ ವಿಮರ್ಶೆ ವಸ್ತು, ವಿನ್ಯಾಸ, ತಂತ್ರ, ಭಾಷೆಗಳೆಂಬ ದಂಡಗಳನ್ನು ಹಿಡಿದು ಮಹಿಳೆಯ ಅಭಿವ್ಯಕ್ತಿಯನ್ನು ಮಾಪನ ಮಾಡಲು ತೊಡಗುತ್ತದೆ.

ಪ್ರಾರಂಭದಲ್ಲಿ ವಸ್ತು ವೈವಿಧ್ಯಮಯವಾಗಿರಬೇಕು, ಏಕಾಕಾರದಲ್ಲಿ ಪುನರಾವರ್ತಿತ ಆಗುತ್ತಿರಬಾರದು ಎಂಬ ಶಾಸನ ವಿಧಿಸುತ್ತದೆ. ಈ ಸಂದರ್ಭದಲ್ಲಿ ನಾವು ಮಹಿಳೆಯು ಏಕೆ ತನ್ನ ಅಭಿವ್ಯಕ್ತಿಗೆ ಕುಟುಂಬ, ಅದನ್ನು ಸುತ್ತುವರಿದ ವಸ್ತುಗಳನ್ನೇ ಆಯ್ಕೆಮಾಡಿಕೊಳ್ಳುತ್ತಾಳೆ ಎಂಬುದಕ್ಕೆ ಕಾರಣಗಳನ್ನು ಅವಳಿರುವ ಸಾಮಾಜಿಕತೆಯ ಹಿನ್ನೆಲೆಯಲ್ಲಿ ಹುಡುಕಬೇಕು. ಮಹಿಳೆಯ ಲೋಕಗ್ರಹಿಕೆ ಖಂಡಿತವಾಗಿಯೂ ಪುರುಷನ ಲೋಕಗ್ರಹಿಕೆಗಿಂತ ಭಿನ್ನ. ಏಕೆಂದರೆ ಪಿತೃಪ್ರಧಾನ ಸಮಾಜದಲ್ಲಿ ಗಂಡು ಅವಕಾಶಗಳನ್ನು, ಸವಲತ್ತುಗಳನ್ನು, ಹಕ್ಕುಗಳನ್ನು ತನಗೆ ಬೇಕಾದಂತೆ ರೂಪಿಸಿಕೊಂಡಿರುತ್ತಾನೆ. ಅವನದೇ ಲೋಕದಲ್ಲಿರುವ ಹೆಣ್ಣು ಅವನಿಗಿಂತ ಭಿನ್ನವಾದ ಅಧೀನ ನೆಲೆಯಲ್ಲಿ ಬದುಕುತ್ತಿರುತ್ತಾಳೆ. ಸೇವೆಯನ್ನು ಬಯಸುವಂಥ ಎಲ್ಲ ಕೆಲಸಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಮಹಿಳೆಯ ಲೋಕ ಅಡುಗೆಮನೆ ಮತ್ತು ಹಿತ್ತಲಿಗೆ ಸಂಬಂಧಪಟ್ಟಿದ್ದು. ಅವುಗಳಲ್ಲೇ ಅವಳ ಹೊತ್ತು ಹೊರಡುತ್ತದೆ. ವರ್ತಮಾನದ ಬದುಕಿನ ಸತ್ಯಗಳು ಆ ಕ್ಷಣಗಳಲ್ಲಿ ಬದುಕುತ್ತಿರುವ ಮಹಿಳೆಗೆ ಮುಖ್ಯವಾಗುತ್ತವೆ. ಆ ಕ್ಷಣದ ಬದುಕನ್ನು ಬದುಕುವುದಕ್ಕಿಂತ ಅದನ್ನು ಅರ್ಥೈಸಲು ಹೊರಡುವ ಪುರುಷಲೋಕಕ್ಕೆ ಬದುಕಿನ ಎಲ್ಲ ಸಂಗತಿಗಳು ಕೇವಲ ಸಾಧನಗಳಾಗುತ್ತವೆ. ಆದರೆ ಮಹಿಳೆಗೆ ಆ ಎಲ್ಲ ಪ್ರಕ್ರಿಯೆಗಳು ಓದು, ಬರಹ, ಸೃಷ್ಟಿ........ ಗಳೂ ಸೇರಿದಂತೆ ಪರಿಪೂರ್ಣ ನೆಲೆಯವಾಗಿರುತ್ತವೆ. ಹೀಗೆ ಸದಾಕಾಲ ಭಿನ್ನ ಲೋಕದಲ್ಲೇ ಇರುವ ಅವಳ ಲೋಕಗ್ರಹಿಕೆ ಸಹಜವಾಗಿ ಇವುಗಳಿಗೆ ಸಂಬಂಧಿಸಿದ್ದೇ ಆಗಿರುತ್ತದೆ. ಅವಳ ವಸ್ತು ಮತ್ತು ಭಾವ ಜಗತ್ತು ಈ ಪರಿಧಿಯನ್ನೇ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಹಾಗೆ ಅವಳು ತನ್ನ ಜಗತ್ತನ್ನು ತನ್ನ ಅಭಿವ್ಯಕ್ತಿಯಲ್ಲಿ ಮೂಡಿಸಿದಾಗ ಅದು ಯಾಕೆ 'ಅಡುಗೆಮನೆ ಸಾಹಿತ್ಯ'ವಾಗಿ

ಪರಿಗಣಿತವಾಗುತ್ತದೆ. 'ದ್ವಿತೀಯ ದರ್ಜೆಯ ಸಾಹಿತ್ಯ' ಎಂದು ಗುರುತಿಸಲ್ಪಡುತ್ತದೆ ಎಂಬುದರ ಹಿನ್ನೆಲೆಯನ್ನು ಈಗಾಗಲೇ ಚರ್ಚಿಸಲಾಗಿದೆ.

ತನ್ನ ಧ್ಯಾನಸ್ಥ ಸ್ಥಿತಿಯಲ್ಲಿ, ತನ್ನದೇ ಲೋಕದ ಅನುಭವಗಳನ್ನು ವಿಸ್ತಾರವಾದ ವ್ಯಾಪ್ತಿಯಲ್ಲಿ ಸೃಜಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲವೇ, ಪುರುಷ ಜಗತ್ತಿಗಿಂತ ಭಿನ್ನವಾದ ಮಹಿಳಾ ಜಗತ್ತಿನ ಅನುಭವಗಳ ಅನಾವರಣ ಸಾಧ್ಯವೇ ಇಲ್ಲವೇ ಎಂಬ ಪ್ರಶ್ನೆಗಳು ಈ ಸಂದರ್ಭದಲ್ಲಿ ಹುಟ್ಟುತ್ತವೆ. ಖಂಡಿತವಾಗಿಯೂ ಇದು ಸಾಧ್ಯ, 'ವರ್ಡ್ಸ್‌ವರ್ತ್' ಹೇಳುವಂತೆ 'Emotions recollected in tranquility' ಭಾವಗಳು ಶಾಂತವಾದ, ಏಕಾಂತವಾದ, ಒತ್ತಡಗಳಿಲ್ಲದ ವಾತಾವರಣದಲ್ಲಿ ಧ್ಯಾನಸ್ಥವಾಗಲು ಸಾಧ್ಯವಾದರೆ ಖಂಡಿತವಾಗಿಯೂ ವ್ಯಕ್ತಿ ವಿಶಿಷ್ಠ ಅಭಿವ್ಯಕ್ತಿ ಮೂಡಿಬರಲು ಸಾಧ್ಯ. ಆದರೆ ಹೊತ್ತು ಮೂಡುವ ಮೊದಲೇ ಎದ್ದು ರಾತ್ರಿ ಎಲ್ಲರೂ ಮಲಗಿದ ಮೇಲೆ ತನ್ನ ಆವರ್ತನ ಕೆಲಸಗಳಿಂದ ಹೆಣ್ಣಿಗೆ ಬಿಡುಗಡೆ ಸಾಧ್ಯವಾಗುವಂಥ ಸಂದರ್ಭದಲ್ಲಿ ಅವಳಿಗೆ ಧ್ಯಾನಸ್ಥವಾಗಲು ಹೇಗೆ ಸಾಧ್ಯ. 'ಬೆಟ್ಟಿ ಫ್ರೀಡನ್' ತನ್ನ 'ದ ಫೈಮಿನೈನ್ ಮಿಸ್ಟಿಕ'ನಲ್ಲಿ ಅಮೇರಿಕಾದ ಮಧ್ಯಮವರ್ಗದ ಇಂಥ ನೀರಸ ಗೃಹಿಣಿತ್ವದ ಬದುಕನ್ನು ಬದುಕುತ್ತಿರುವ ಅನೇಕ ಮಹಿಳೆಯರನ್ನು ಸಂದರ್ಶಿಸುತ್ತಾಳೆ. ಇಂಥ ಬದುಕಿನಿಂದ ಮಹಿಳೆಯ ಮಾನಸಿಕ ಲೋಕದಲ್ಲಿ ನಡೆಯುವ ತಲ್ಲಣಗಳನ್ನು ಆ ಕೃತಿ ಬಹಳ ಸೂಕ್ಷ್ಮವಾಗಿ ಕಟ್ಟಿಕೊಡುತ್ತದೆ. ಇಡೀ ಕೃತಿ ಗೃಹಿಣಿತ್ವ ಎಂಬಂದು ಮಹಿಳೆಯ ಬದುಕನ್ನು ಇನ್ನಿಲ್ಲದಂತೆ ಆವರಿಸಿ ಅವಳ ವ್ಯಕ್ತಿತ್ವವನ್ನು ಹೇಗೆ ಇಲ್ಲವಾಗಿಸಿದೆ ಎಂಬುದನ್ನು ಹೇಳುತ್ತದೆ. ಕೃತಿ ಮಧ್ಯಮವರ್ಗದ ಮಹಿಳೆಯರ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ವಿಶ್ಲೇಷಿಸುತ್ತಿದೆ ಎಂದು ಅನ್ನಿಸಿದರೂ, ಮಹಿಳೆಯ ದುಡಿಮೆ ಮತ್ತು ವಿರಾಮಗಳು ಅವಳವಲ್ಲ ಎನ್ನುವ ವಾಸ್ತವವನ್ನು ಗ್ರಹಿಸಿದಾಗ ಈ ಸಮಸ್ಯೆ ಕೇವಲ ಮಧ್ಯಮವರ್ಗಕ್ಕೆ ಸಂಬಂಧಿಸಿದ್ದು ಮಾತ್ರ ಆಗದೆ, ಇಡೀ ಮಹಿಳಾ ಬದುಕಿನ ಸೃಜನತೆಯನ್ನು, ಅವಳ ಚಲನಶೀಲತೆಯನ್ನು, ಅವಳ ಬುದ್ಧಿ-ಭಾವಗಳನ್ನು ಅಪಹರಿಸಿದೆ ಎನ್ನುವುದು ಅರ್ಥವಾಗುತ್ತದೆ. ಅವಳ ಬದುಕು ಗೃಹಿಣಿತ್ವದ ಕಬಂಧಬಾಹುಗಳೊಳಗೆ, ಆರ್ಥಿಕ ಪರಾವಲಂಬನೆ, ಲೈಂಗಿಕ ಪರಾವಲಂಬನೆಗೆ ಒಳಗಾಗಿ ಗೃಹ ಬಂಧನದೊಳಗೆ ಅವಳ ಚೈತನ್ಯ, ಅಸ್ತಿತ್ವ, ಅಸ್ಮಿತೆ ಎಲ್ಲವೂ ಕಾಣೆಯಾಗಿ ಹೋಗಿವೆ.

ಹೀಗೆ ಗೃಹಿಣಿತ್ವದೊಳಗೆ ಗಾಣದೆತ್ತಿನಂತೆ ತಿರುಗುತ್ತಿರುವ ಅವಳಿಗೆ, ಸೃಜನತೆಯನ್ನು ವೈವಿಧ್ಯ, ವಿಭಿನ್ನ, ವಿಶಿಷ್ಟ ನೆಲೆಗಳಲ್ಲಿ ಹೊರತರಬೇಕೆಂಬ ತುಡಿತವಿದ್ದರೂ ಅದು

ಸಾಧ್ಯವಾಗದ ಶೂನ್ಯವೊಂದು ಅವಳನ್ನು ಆವರಿಸಿದೆ. ಹೀಗಾಗಿಯೇ ಸಾಮರ್ಥ್ಯವಿದ್ದೂ ಶೂನ್ಯವಾದವಳು ಮಹಿಳೆ. ಇಷ್ಟೆಲ್ಲಾ ಕಷ್ಟಗಳ ನಡುವೆಯೂ ತನ್ನೊಳಗಿನ ಚೈತನ್ಯಕ್ಕೆ ಪ್ರತಿಸ್ಪಂದಿಸಿ, ಅವಳ ಪ್ರತಿಭೆ ಅಭಿವ್ಯಕ್ತಿಯನ್ನು ಮಾಡಿದರೂ ತನ್ನ ಸಾಮರ್ಥ್ಯದ ಬಗೆಗೆ ಅವಳು ಕೀಳರಿಮೆಯನ್ನು ಅನುಭವಿಸುವಂತೆ ವಿಮರ್ಶಾ ಲೋಕ ಮಾಡುತ್ತದೆ. ಓದು, ಬರಹ, ಕಲಿಕೆ, ಪ್ರೋತ್ಸಾಹಗಳ ನೆರವಿಲ್ಲದೆಯೂ, ಮಹಿಳಾ ಪ್ರತಿಭೆ ಪ್ರಾರಂಭದ ಹಂತದಲ್ಲಿ ತನ್ನ ಅಭಿವ್ಯಕ್ತಿಗೆ ವಸ್ತುವನ್ನು ಆಯ್ದುಕೊಳ್ಳುವ ಪ್ರಕ್ರಿಯೆಯೇ ಬಹಳ ಕಷ್ಟಕರವಾದಾಗ, ಸೂಕ್ತವಾದ ತರಬೇತಿಯ ಮೂಲಕ ಲಭ್ಯವಾಗುವ ತಂತ್ರ, ವಿನ್ಯಾಸ, ಭಾಷೆಯ ಸಂದರ್ಭಗಳಂತೂ ಅವಳಿಗೆ ದೊಡ್ಡ ಅಗ್ನಿ ಪರೀಕ್ಷೆಗಳೇ. ಬೌದ್ಧಿಕ ಚಟುವಟಿಕೆ ಮೂಲಕ ಲಭ್ಯವಾಗುವ ಈ ಸಂಗತಿಗಳು ಶಿಕ್ಷಣದ ಮೂಲಕ ಸಾಧ್ಯವಾಗುವಂಥ ಕಲಿಕೆಗಳು. ಆದರೆ ಶಿಕ್ಷಣ ಎಂಬ ಸಂಸ್ಥೆ ಕೂಡಾ ಪಿತೃಪ್ರಧಾನ ನೆಲೆಯಿಂದಲೇ ಲಭ್ಯವಾದಾಗ ಮಹಿಳೆಗೆ ವಿದ್ಯಾಭ್ಯಾಸದ ಅವಕಾಶ ಲಭ್ಯವಾದರೂ, ಅಲ್ಲಿ ಸಿಕ್ಕುವ ತರಬೇತಿ ಮತ್ತದೇ ಪಿತೃಪ್ರಧಾನ ನೆಲೆಯದೇ. ಲಿಂಗ ತಾರತಮ್ಯದ ಪಾಠವನ್ನು ಬಹಳ ಚೆನ್ನಾಗಿ ಬೋಧಿಸಿ ಅವಳ ತನು-ಮನಗಳಲ್ಲಿ ತನ್ನ ಆಲೋಚನೆಗಳನ್ನು ಇಳಿಸಿ, ತನ್ನ ಬಳಕೆಗೆ ಅನುಕೂಲವಾಗುವಂತೆ ಅಧಿಕಾರ ವರ್ಗ, ಅಧೀನ ವರ್ಗವನ್ನು ರೂಪಿಸುತ್ತದೆ.

ನಾವು ನಿತ್ಯ ಆಡುವ ಭಾಷೆಯಿಂದ ಹಿಡಿದು ಸಾಹಿತ್ಯವನ್ನು ವಿಮರ್ಶಿಸುವ ವೈಧಾನಿಕತೆಯವರೆಗೆ ರೂಪಗೊಂಡಿರುವ ಭಾಷೆ ಪುರುಷಾಧಿಕಾರದ್ದು. ಪಠ್ಯ ಪುಸ್ತಕಗಳು, ಶಿಕ್ಷಣ ಕ್ರಮವಿಡೀ ಪುರುಷನನ್ನಷ್ಟೇ ಮನುಷ್ಯ ಎಂದು ಗ್ರಹಿಸುತ್ತದೆ. ಮಹಿಳೆ ತನ್ನ ವಿಶಿಷ್ಟ ಅನುಭವಗಳನ್ನು ಹೇಳಲು ಹೊರಟಾಗಲೂ, ತನ್ನದಲ್ಲದ ಭಾಷೆಯಲ್ಲಿ ಅದನ್ನು ಅಭಿವ್ಯಕ್ತಿಸಬೇಕಾಗುತ್ತದೆ. ಈ ಹಂತದಲ್ಲಿ ಖಂಡಿತವಾಗಿಯೂ, ಮಹಿಳೆಯ ಧ್ವನಿ ಕುಗ್ಗುತ್ತದೆ. ತನ್ನವಲ್ಲದ ಅಳತೆಯ ಬಟ್ಟೆಯೊಳಗೆ ತನ್ನನ್ನು ಹೊಂದಿಸಿಕೊಳ್ಳಬೇಕಾದ ಅನಿವಾರ್ಯತೆ ಅವಳನ್ನು ಅಸಹಾಯಕ ಸ್ಥಿತಿಗೆ ತರುತ್ತದೆ. ಆಗ ಸಹಜವಾಗಿಯೇ ಅವಳ ಭಾಷೆ ಪುನರಾವರ್ತಿತ ನೆಲೆಯಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುತ್ತದೆ. ಇನ್ನು ತಂತ್ರ, ವಿನ್ಯಾಸಗಳು ಕಲಿಕೆಯಿಂದಲೇ ಪ್ರಾಪ್ತವಾಗುವ ಸಂಗತಿಗಳಾಗಿರುವುದರಿಂದ ಸಹಜವಾಗಿಯೇ ಇದು ಮಹಿಳೆಗೆ ಲಭ್ಯವಾಗದ ಸನ್ನಿವೇಶವಾದ್ದರಿಂದ ಇಲ್ಲೂ ಅವಳು ಅನುಕರಣೆಯನ್ನು ಮಾಡಬೇಕಾದ ಅನಿವಾರ್ಯತೆ ಉಂಟಾಗುತ್ತದೆ.

ಮೇಲಿನ ಎಲ್ಲಾ ಚರ್ಚೆ ಮಹಿಳಾ ಅಭಿವ್ಯಕ್ತಿಗೆ ಕಾಲು ತೊಡಕಾಗಿ ಇರುವ ಅಂಶಗಳನ್ನು ವಿವರಿಸುತ್ತದೆ. ಸ್ತ್ರೀವಾದಿ ಚಿಂತನೆ, ಮಹಿಳಾ ಸಂಬಂಧಿತ ವಿಷಯಗಳನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳುವುದರಿಂದ ಈ ಎಲ್ಲದರ ಹಿಂದೆ ಇರುವ ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಅಂಶಗಳನ್ನು ಮುಖ್ಯವೆಂದು ಪರಿಗಣಿಸುತ್ತದೆ. ಮಹಿಳೆಯ ಅಭಿವ್ಯಕ್ತಿಯ ನೆಲೆಗಳನ್ನು ವೈಯಕ್ತಿಕವಾಗಿ ಗಮನಿಸದೆ, ಸಾಮಾಜಿಕವಾಗಿ ಗಮನಿಸಬೇಕೆಂಬ ಒತ್ತಡವನ್ನು ತರುತ್ತದೆ. ಪಿತೃಪ್ರಧಾನ ತಾತ್ವಿಕತೆಯನ್ನು ಅದರ ಚಿಂತನೆಗಳನ್ನು ವಿಧಿವಿಧಾನಗಳನ್ನು ಮರು ವ್ಯಾಖ್ಯಾನಿಸಿದಾಗ ಮಹಿಳಾ ಬದುಕಿನ ಬುದ್ಧಿಯ, ಭಾವದ ಸಂಗತಿಗಳು ಮರು ಪರಿಶೀಲನೆಗೆ ಒಳಗಾಗಿ ಹೊಸ ಸಂಗತಿಗಳು, ನೋಟಗಳು ಪ್ರಾಪ್ತವಾಗುವ ಸಾಧ್ಯತೆಗಳಿವೆ.

ಈ ಹಿನ್ನೆಲೆಯಲ್ಲೇ ನಾವು 'ಜನಪ್ರಿಯ ಸಾಹಿತ್ಯ'ವನ್ನು ಗ್ರಹಿಸಬೇಕು. ಅದಕ್ಕೆ ಮೊದಲು ಜನಪ್ರಿಯ ಸಾಹಿತ್ಯದ ಬಗ್ಗೆ ನಡೆದಿರುವ ಚರ್ಚೆಯನ್ನು ಸ್ಥೂಲವಾಗಿ ಗಮನಿಸಬಹುದು. ಜನಪ್ರಿಯ ಸಂಸ್ಕೃತಿಯಾಗಲಿ ಸಾಹಿತ್ಯವಾಗಲಿ ಖಚಿತವಾದ ಚಹರೆಯನ್ನು ಹೊಂದಿಲ್ಲದ್ದು. ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುವ ವಿಚಾರ. ಸಾಹಿತ್ಯ ವಿಮರ್ಶೆ ಹುಟ್ಟು ಹಾಕಿರುವ ವಿಷಯವಾಗಿ ಇದು ಇಂದು ಅಸ್ತಿತ್ವದಲ್ಲಿದೆ. ಆದ್ದರಿಂದ ಸ್ಪಷ್ಟವಾಗಿ 'ಇದಮಿದಂ' ಎಂದು ಜನಪ್ರಿಯ ಸಾಹಿತ್ಯದ ಲಕ್ಷಣಗಳನ್ನು ಕಟ್ಟಿಕೊಳ್ಳುವುದು ಸಾಧ್ಯವಾಗದ ಸಂಗತಿ. ಆದರೂ ಸಾಹಿತ್ಯ ವಿಮರ್ಶೆ ಅದಕ್ಕೊಂದಿಷ್ಟು ರೂಪರೇಷೆಗಳನ್ನು ಕಟ್ಟಿ ಚರ್ಚೆಮಾಡುತ್ತದೆ. 'ಕೆ.ವಿ. ನಾರಾಯಣ' ಅವರು ಈ ವಿಷಯವಾಗಿ ಕನ್ನಡದಲ್ಲಿ ನಡೆದ ಚರ್ಚೆಗಳನ್ನು 'ಜನಪ್ರಿಯ ಸಾಹಿತ್ಯವನ್ನು ಕುರಿತು' ಎಂಬ ಲೇಖನದಲ್ಲಿ ಮೂರು ದಿಕ್ಕುಗಳಾಗಿ ಗುರುತಿಸುತ್ತಾರೆ.

**ನಿರಾಕರಣೆಯ ವಿಧಾನ** : ಈ ವಿಧಾನದಲ್ಲಿ 'ಜನಪ್ರಿಯ' ಎಂದು ಹೆಸರಿಸಿದ ಕೃತಿಗಳನ್ನು ಸಾಹಿತ್ಯ ಚರ್ಚೆಯೊಳಕ್ಕೆ ತರದೆ ನಿರಾಕರಿಸಿ, ಇವುಗಳು ಅಗ್ಗ ಮತ್ತು ಜನರಂಜನೆಯ ಕೃತಿಗಳೆಂದು ಗುರುತಿಸಲಾಗುತ್ತದೆ. ಇವು ಓದುಗರನ್ನು ತಮ್ಮ ಓದಿನಿಂದ ಬೆಳಸದೆ, ಕೇವಲ ಅಗ್ಗದ ಮನರಂಜನೆಯನ್ನೊದಗಿಸಿ, ಭ್ರಮೆಯಲ್ಲಿಡುತ್ತವೆ. ಆದ್ದರಿಂದ ಇವುಗಳು ಸಲ್ಲದ ಸಂಗತಿಗಳೆಂದು ವಿಮರ್ಶಿಸುತ್ತವೆ. ಇವುಗಳಲ್ಲಿ ಭಾಗಿಯಾದವರನ್ನ ಸಹಿತ ಒಂದು ಬಗೆಯ ತಿರಸ್ಕಾರದ ದೃಷ್ಟಿಯಿಂದ ನೋಡುತ್ತವೆ.

**ವಿವರಣೆಯ ವಿಧಾನ** : ಗ್ರಾಹಕ ಸಂಸ್ಕೃತಿಯ ಭಾಗವೆಂದೋ, ವ್ಯಾವಹಾರಿಕ ಸಂಗತಿ ಎಂದೋ, ಬಿಕರಿಯಾಗುವ ಸರಕೆಂದೋ ಇಲ್ಲಿ ಸಾಹಿತ್ಯ ಕೃತಿಗಳನ್ನು ಪರಿಗಣಿಸಲಾಗುತ್ತದೆ. 'ಜನಪ್ರಿಯ' ಎಂಬ ಪದವನ್ನು ಮರು ವ್ಯಾಖ್ಯಾನಿಸುತ್ತ ಚಿಂತಕ 'ಸ್ಟಾರ್ವಟ್ ಹಾಲ್' (Stvart hall) popular ಪದವನ್ನು ಹೀಗೆ ".......... the things which are said to be popular because masses of people, listen to them and seem to enjoy, them to the full" ಅರ್ಥೈಸುತ್ತಾನೆ. ಇದನ್ನೇ ಕನ್ನಡದ ಸಂದರ್ಭದಲ್ಲಿ ಚರ್ಚಿಸುತ್ತಾ. 'ಕೆ.ವಿ. ನಾರಾಯಣ'ರವರು, "ಗ್ರಾಹಕ ಸಂಸ್ಕೃತಿಯ ಭಾಗವೆಂದು ಸಾಹಿತ್ಯ ಕೃತಿಯನ್ನು ಪರಿಗಣಿಸುತ್ತಾ, ಮಾರುಕಟ್ಟೆಯಲ್ಲಿ ಬೇಡಿಕೆಯನ್ನು ಅವಲಂಬಿಸಿ ಸರಕು ಉತ್ಪಾದಿತವಾಗುತ್ತದೆ. ಬೇರೊಂದು ಸರಕಿಗೆ ಬೇಗನೆ ಅವಕಾಶವನ್ನು ಮಾಡಿಕೊಟ್ಟು ತಾನು ದೂರ ಸರಿಯುತ್ತದೆ. ಈ ಮಾದರಿಯನ್ನು ಸಾಹಿತ್ಯ ಕೃತಿಗಳಿಗೂ ಅನ್ವಯಿಸಿ ಜನಪ್ರಿಯ ಕೃತಿಗಳನ್ನು ಗುರುತಿಸುವ ಮಾರ್ಗವನ್ನು ಈ ಮಾದರಿಯು ಅನುಸರಿಸುತ್ತದೆ"[೧೧] ಎನ್ನುವ ಚರ್ಚೆಯಿದೆಯೆಂದು ಗುರುತಿಸುತ್ತಾರೆ.

**ವಿಶ್ಲೇಷಣೆಯ ವಿಧಾನ** : ಈ ಬಗೆಯ ವಿಧಾನದಲ್ಲಿ ಜನಪ್ರಿಯ ಸಾಹಿತ್ಯ ಸಾಂಸ್ಕೃತಿಕ ಅಂಶಗಳನ್ನು ತಿಳಿಯಪಡಿಸುವ ಕೃತಿಗಳಾಗಿ ಮುಖ್ಯವಾಗುತ್ತವೆಯೇ ಹೊರತು ತಾನೇ ತಾನಾಗಿ ಜನಪ್ರಿಯ ಸಾಹಿತ್ಯವಾಗಿ ಅಲ್ಲ. ಒಟ್ಟಾರೆ ಸಾಂಸ್ಕೃತಿಕ, ಒಳ ವಿನ್ಯಾಸಗಳನ್ನು ಕಟ್ಟಿಕೊಡುವ ಕಾರಣಕ್ಕಾಗಿ ಇವುಗಳನ್ನು ಗಮನಿಸಲಾಗುತ್ತದೆ.

ಈ ಮೂರು ನೆಲೆಗಳಲ್ಲಿ ನಡೆದಿರುವ ಚರ್ಚೆಗಳು ಜನಪ್ರಿಯ ಸಾಹಿತ್ಯವನ್ನು ಗಂಭೀರವಾದ, ಚರ್ಚೆಗೆ ಅರ್ಹವಾದ ವಿಷಯವೆಂದು ಪರಿಗಣಿಸದೇ ತಮ್ಮ ಮೂಗಿನ ನೇರಕ್ಕೆ ವಿಮರ್ಶಿಸಿ ತೂಕ ಕಟ್ಟಿವೆ. ಹೀಗೆ ಬಹುಸಮುದಾಯಗಳು ತೊಡಗಿಸಿಕೊಂಡಿರುವ ಅದರಲ್ಲೂ, ಮಹಿಳೆಯರೇ ಹೆಚ್ಚಿನ ಪಾಲಿನಲ್ಲಿ ತೊಡಗಿಸಿಕೊಂಡಿರುವ ಈ ಪ್ರಕ್ರಿಯೆಗಳನ್ನು ನಗಣ್ಯ ಮಾಡಿದರೆ, ಬಹುಸಮುದಾಯದ ಆಶೋತ್ತರಗಳನ್ನು ನಿರ್ಲಕ್ಷಿಸಿದಂತಾಗುವ ಅಪಾಯವಿದೆ. ಈ ಬಗೆಗಿನ ನಿರ್ಲಕ್ಷ ಸಾಹಿತ್ಯ ವಿಮರ್ಶೆಯಲ್ಲಡಗಿರುವ ಬಹುದೊಡ್ಡ ಲಿಂಗ ರಾಜಕಾರಣವನ್ನು ಹೇಳುತ್ತದೆ. ಶ್ರೇಷ್ಠತೆಯ ರಾಜಕಾರಣದಲ್ಲಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಿಂದುಳಿದವರು ಬಲಿಪಶುಗಳಷ್ಟೇ. ಈವರೆಗಿನ ಸಾಹಿತ್ಯ ವಿಮರ್ಶೆಗಿಂತಲೂ ಭಿನ್ನವಾಗಿ ಇಡೀ ಚರ್ಚೆಯನ್ನು ಸ್ತ್ರೀವಾದಿ ತಾತ್ವಿಕತೆಯ ನೆಲೆಯಿಂದ ಚರ್ಚಿಸ ಹೊರಟಾಗ ಜನಪ್ರಿಯ ಸಾಹಿತ್ಯದ ನೆಲೆ-ಬೆಲೆಗಳು ಅರ್ಥವಾಗಬಹುದು.

ಜನಪ್ರಿಯ ಸಾಹಿತ್ಯ ಎಂದರೇನು, ಯಾವುದು 'ಜನಪ್ರಿಯ', ಏಕೆ 'ಜನಪ್ರಿಯ' ಎಂಬೆಲ್ಲಾ ಪ್ರಶ್ನೆಗಳಿಗೆ ಖಚಿತವಾದ ಉತ್ತರಗಳನ್ನು ದೊರಕಿಸಿಕೊಳ್ಳುವುದು ಸುಲಭ ಸಾಧ್ಯವಲ್ಲ. ಈಗಾಗಲೇ ಚರ್ಚಿಸಿರುವಂತೆ 'ಜನಪ್ರಿಯ' ಎನ್ನುವ ಸಂಗತಿಯೇ ಕಾಲವನ್ನು, ಪರಿಸರವನ್ನು, ಆಯಾ ಕಾಲದ ಜನರ ಮನೋಧರ್ಮವನ್ನು ಅವಲಂಬಿಸಿರುವಂಥದ್ದು. ಆದ್ದರಿಂದಲೇ ಒಂದು ಕಾಲದಲ್ಲಿ ಬಹಳ ಜನಪ್ರಿಯ ಸಾಹಿತ್ಯ ಕೃತಿಗಳಾದ 'ಕುಮಾರವ್ಯಾಸ ಭಾರತ', 'ಜೈಮಿನಿ ಭಾರತ'ಗಳು ಇಂದು ಜನಪ್ರಿಯವಲ್ಲ. ಪ್ರಗತಿಶೀಲ ಸಾಹಿತ್ಯ ರಚನೆಯ ಕಾಲದಲ್ಲಿ ಮುಗಿಬಿದ್ದು ಓದುತ್ತಿದ್ದ ಅನಕೃ, ತರಾಸು ಕೃತಿಗಳನ್ನು ಇಂದು ಓದುತ್ತಿಲ್ಲ. ಯುವತಿಯರನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತಿದ್ದ ತ್ರಿವೇಣಿ, ಎಂ.ಕೆ. ಇಂದಿರಾ, ಉಷಾ ನವರತ್ನರಾಮ್, ಸಾಯಿಸುತೆ ಹೆಚ್.ಜಿ. ರಾಧಾದೇವಿ ಕೃತಿಗಳ ಜಾಗದಲ್ಲಿ ಇಂದು ಬೇರೆಯ ವಿಚಾರಗಳು, ಆವರಿಸಿಕೊಂಡಿವೆ. 'ಮನಸ್ಸೇ ರಿಲಾಕ್ಸ್ ಪ್ಲೀಸ್', 'ಅಗ್ನಿಯ ರೆಕ್ಕೆಗಳು' ರವಿಬೆಳಗೆರೆ ಬರಹಗಳು ಮುಂತಾದವು ಮಾರಾಟಗಾರರ ಪ್ರಕಾರ ಇಂದಿನ ಜನಪ್ರಿಯ ಕೃತಿಗಳು. ಇದೇ ಪರಿಸ್ಥಿತಿ ಜನಪ್ರಿಯ ಸಿನೆಮಾದ್ದು ಹೌದು. ಅಂದು ದುಂಡಗೆ ಚೆಂದವಾಗಿರುವ ನಟಿಯರು ಜನಪ್ರಿಯರೆನ್ನಿಸಿಕೊಂಡರೆ, ತೆಳ್ಳಗೆ, ಮಿಡಿ, ಮಿನಿ, ಬಿಕಿನಿ ತೊಟ್ಟು, ಲೈಂಗಿಕ ದೃಶ್ಯಗಳಲ್ಲಿ ಬೋಲ್ಡಾಗಿ ಅಭಿನಯಿಸುವವರು ಇಂದು ಜನಪ್ರಿಯ. ಇದೇ ಸಂದರ್ಭ ಹಾಡು, ನಾಟಕ ಎಲ್ಲ ಸಂದರ್ಭಗಳಲ್ಲೂ. ಜನಪ್ರಿಯ ಸಾಹಿತ್ಯ ಎಂದರೆ 'ಹೆಚ್ಚು ಜನರನ್ನು ತಲುಪುವ ಕೃತಿಗಳು' ಎಂದು ಗುರುತಿಸುವುದಾದರೆ, ಕುವೆಂಪು, ಕಾರಂತ, ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ, ತೇಜಸ್ವಿ, ಹೆಚ್ಚು ಜನರನ್ನು ತಲುಪಿದವರೇ. ಆದರೆ ಸಾಹಿತ್ಯ ವಿಮರ್ಶೆ ಅವರ ಕೃತಿಗಳನ್ನು 'ಜನಪ್ರಿಯ ಸಾಹಿತ್ಯ'ದಡಿಯಲ್ಲಿ ಗುರುತಿಸುವುದಿಲ್ಲ. ಅಂದಾಗ ಹೆಚ್ಚು ಜನರನ್ನು ತಲುಪಿದ್ದು ಜನಪ್ರಿಯ ಸಾಹಿತ್ಯ ಅಲ್ಲವೆಂದಾಯಿತು. ಹಾಗಾದರೆ ದೂರದರ್ಶನದಲ್ಲಿ ಪ್ರಸಾರಗೊಳ್ಳುವುದು, ರಂಗಪ್ರದರ್ಶನಗೊಳ್ಳುವುದು, ಹೆಚ್ಚು ಬಾರಿ ಮರು ಮುದ್ರಣಗೊಳ್ಳುವುದು ಜನಪ್ರಿಯತೆಯ ಲಕ್ಷಣವೇ ಮತ್ತು ಯಾಕಾಗಿ, ಯಾವ ಕಾರಣದಿಂದ ಇವು ಜನಪ್ರಿಯಗೊಳ್ಳುತ್ತವೆ ಎಂಬೆಲ್ಲಾ ಪ್ರಶ್ನೆಗಳು ಉದ್ದಕ್ಕೂ ಹುಟ್ಟಿಕೊಳ್ಳುತ್ತವೆ.

ಈ ಕುರಿತು ಕನ್ನಡದಲ್ಲಿ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಜನಪ್ರಿಯ ಸಾಹಿತ್ಯವನ್ನು ಕುರಿತಂತೆ ಚರ್ಚೆ ಮಾಡುವ 'ಎಚ್.ಎಸ್. ರಾಘವೇಂದ್ರರಾವ್' ಅವರು "ಸುಶಿಕ್ಷಿತರಾದ ಸಾಕಷ್ಟು ಬಿಡುವಿನ ವೇಳೆಯನ್ನೇ ಪಡೆದಿರುವ, ಮನರಂಜನೆಯ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸುತ್ತಿರುವ ಜನರು ತಮಗಿರುವ ಬಿಡುವಿನ ಒಂದು

ಭಾಗವನ್ನು ಕತೆ, ಕಾದಂಬರಿಗಳ ಓದಿಗಾಗಿ ಉಪಯೋಗಿಸಿಕೊಳ್ಳುತ್ತಾರೆ. ಇಂತಹ ವಾಚಕ ವರ್ಗದ ಆಶಯವನ್ನು ವಿಫುಲವಾಗಿ ದೊರಕಿಸಿಕೊಳ್ಳುವ ಬರವಣಿಗೆಯನ್ನು 'ಜನಪ್ರಿಯ ಸಾಹಿತ್ಯ' ಎಂದು ನಿರ್ದೇಶಿಸಬಹುದು"[೧೨] ಎನ್ನುತ್ತಾರೆ. ಹೀಗೆಂದಾಗ ಜನಪ್ರಿಯ ಸಾಹಿತ್ಯ ಎಂಬುದು ಸೃಜನಶೀಲತೆಯಿದ್ದು ಅದನ್ನು ಬರಹದ ಮೂಲಕ ಅಭಿವ್ಯಕ್ತಿಸ ಹೊರಟ ಜನಸಮುದಾಯದ ಜಗತ್ತು. ಈ ಜಗತ್ತು ಜನಸಾಮಾನ್ಯರ ಅಭಿರುಚಿ, ಕನಸುಗಳು, ಜೀವನ ಮೌಲ್ಯಗಳು, ಬದುಕಿನಲ್ಲಿನ ಆದರ್ಶಗಳು, ಸಂಭ್ರಮಗಳು – ಎಲ್ಲವನ್ನು ಒಳಗೊಂಡಿರುತ್ತದೆ. ಇವುಗಳಲ್ಲಿ ಅಂದಂದಿನ ಸಾಮಾಜಿಕ ಬದುಕು ಅನಾವರಣಗೊಂಡಿರುತ್ತದೆ. ಇವು ಒಂದು ಅರ್ಥದಲ್ಲಿ ಸಾಮಾಜಿಕ ಬದುಕಿನ ಕೈಪಿಡಿಗಳು ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ.

"ಜನಪ್ರಿಯ ಸಾಹಿತ್ಯವೆಂದರೆ ಮಹಿಳೆಯರು ರಚಿಸುವ ಸಾಹಿತ್ಯ ಎಂಬ ತಪ್ಪು ಸಮೀಕರಣವನ್ನು ಮಾಡಬಾರದು. ಸಾಹಸಮಯವಾದ ಪತ್ತೇದಾರಿ ಕಾದಂಬರಿಗಳಿಂದ ಹಿಡಿದು ಕಿರಿಯಾಳದ ಸಾಮಾಜಿಕ ಕಾದಂಬರಿಗಳ ವರೆಗೆ ಈ ಬರವಣಿಗೆಯ ವ್ಯಾಪ್ತಿ ಇದೆ. ಕನ್ನಡ ಸಂದರ್ಭದಲ್ಲಿ ಕೇವಲ ಕಥಾ ಸಾಹಿತ್ಯ (Fiction)ಕ್ಕೆ ಅನ್ವಯಿಸುವ ಈ ಮಾತು ಇಂಗ್ಲೀಷನಲ್ಲಿ ಇನ್ನೂ ಹಲವು ರೀತಿಯ ಬರವಣಿಗೆಗೆ ಅನ್ವಯಿಸುತ್ತದೆ. ಈಚೆಗೆ ಪತ್ರಿಕೆಗಳಲ್ಲಿ ಹೇರಳವಾಗಿ ಕಾಣಿಸಿಕೊಳ್ಳುತ್ತಿರುವ ಹನಿಗವಿತೆಗಳೂ ಈ ಬಗೆಯ ಜನಪ್ರಿಯತೆಯನ್ನು ಪಡೆಯುತ್ತಿರುವುದನ್ನು ಗಮನಿಸಬಹುದು"[೧೩] ಎಂದು ಎಚ್.ಎಸ್. ರಾಘವೇಂದ್ರರಾವ್ ಅವರು ಮಹಿಳಾ ಸಾಹಿತ್ಯವನ್ನು ಜನಪ್ರಿಯ ಎಂದು ಗುರುತಿಸಬಾರದು ಎಂದರೂ ಕೆಲವೇ ಕೆಲವು ಬರಹಗಾರ್ತಿಯರನ್ನು ಹೊರತುಪಡಿಸಿ ಬಹುತೇಕ ಮಹಿಳಾ ಸಾಹಿತ್ಯವನ್ನು 'ಜನಪ್ರಿಯ ಸಾಹಿತ್ಯ' ಎಂದು ಗುರುತಿಸಲಾಗಿದೆ.

ಪಿತೃಪ್ರಧಾನತೆಯಡಿಯಲ್ಲಿ ಅಧೀನ ಬದುಕನ್ನು ಬದುಕುತ್ತಿರುವ ಮಹಿಳೆಯ ಸೃಜನತೆ ಹೊರಚಾಚುಗಳನ್ನು ಪಡೆದುಕೊಳ್ಳುವುದು ಸುಲಭಸಾಧ್ಯ ಅಲ್ಲ ಎಂಬುದನ್ನು ಈಗಾಗಲೇ ಚರ್ಚಿಸಲಾಗಿದೆ. ಹಾಗೇ ಪಡೆದುಕೊಂಡಾಗಲೂ ಅದಕ್ಕೆ ಎದುರಾದದ್ದು ಆತ್ಮ ವಿಶ್ವಾಸವನ್ನು ಕುಗ್ಗಿಸುವ ಕಟುವಿಮರ್ಶೆಯ ಲೋಕ. ಪಾರಂಪರಿಕ ವಿಮರ್ಶೆ 'ಅಡುಗೆಮನೆ ಸಾಹಿತ್ಯ', 'ಟೈಂಪಾಸ್ ಕಾದಂಬರಿಗಳು', 'ಹೆಂಗಸರು ಬರೆದಿದ್ದು', 'ಅಪ್ರಯೋಜಕ ಸಂಗತಿಗಳು' – ಎಂದು ಹೇಳುವುದರ ಜೊತೆಗೆನೇ 'ಜನಪ್ರಿಯ ಸಾಹಿತ್ಯ'ವೆಂದು ಗುರುತಿಸಿ, ಕಾಡೋದೇವರ ಕಾಟಾಚಾರಕ್ಕೆ ಎಂಬಂತೆ ಅಲ್ಲಿ ಇಲ್ಲಿ ವ್ಯಂಗ್ಯದ ಮಾತುಗಳನ್ನಾಡಿತು. ನನ್ನ

ಎತ್ತರಕ್ಕೆ ನೀ ಏರಬಲ್ಲೆಯಾ ಎಂದು ಪ್ರಶ್ನಿಸಿ, ಆಗ ತಾನೇ ಸಾಹಿತ್ಯ ಬರಹದಲ್ಲಿ ತೊಡಗಿಸಿಕೊಂಡವರ ಚೈತನ್ಯವನ್ನು ಕುಗ್ಗಿಸಿತು.

'ಜನಪ್ರಿಯ ಸಾಹಿತ್ಯ' ವಿಶೇಷವಾಗಿ ಮಹಿಳಾ ಸಾಹಿತ್ಯವನ್ನು ಜನಪ್ರಿಯ ಎಂದು ಗುರುತಿಸಿರುವ ಸಂದರ್ಭದಲ್ಲಿ ಮಹಿಳಾ ಬರಹವು, ಹೇಗೆ 'ಜನಪ್ರಿಯ' ಎಂದು ಗುರುತಿಸಿರುವ ಇತರ ಬರಹಗಳಿಗಿಂತ ಭಿನ್ನ ಎಂಬುದನ್ನು ಈ ಸಂದರ್ಭದಲ್ಲಿಯೇ ಗಮನಿಸಬೇಕು. ಅಶ್ಲೀಲ ಸಾಹಿತ್ಯ, ಹಿಂಸೆ, ವಾಮಾಚಾರ, ತರ್ಕ, ಪತ್ತೇದಾರಿ (ಕೆಲವು ಬರಹಗಾರ್ತಿಯರು ಪತ್ತೇದಾರಿ ಕಾದಂಬರಿಗಳನ್ನು ಬರೆದಿದ್ದಾರೆ. ಆದರೆ ಪುರುಷರ ಹಾಗೇ ಅದರಲ್ಲೇ ತಮ್ಮನ್ನು ತೊಡಗಿಸಿಕೊಂಡಿಲ್ಲ) ಇವುಗಳನ್ನು ಹೊರತಾಗಿಸಿದ ವಸ್ತುವನ್ನು ಮಹಿಳಾ ಸಾಹಿತ್ಯ ಒಳಗೊಂಡಿದೆ. ಇಡೀ ಮಹಿಳಾ ಬರಹಗಳು ರಚನೆಯಾಗುವುದು ಕುಟುಂಬದ ಆವರಣದಲ್ಲಿ. ತಮ್ಮ ಸೀಮಿತ ಲೋಕಗ್ರಹಿಕೆಯಲ್ಲೆ ಆದರ್ಶ ಕುಟುಂಬವೊಂದನ್ನು ಕಟ್ಟಿಕೊಡುತ್ತಾರೆ. **ಇಲ್ಲದ, ಇರಬೇಕಾದ, ಇರಬಯಸುವ** ಲೋಕವೊಂದನ್ನು ಮಹಿಳಾ ಬರಹಗಾರ್ತಿಯರು ಪದೇ ಪದೇ ಕಟ್ಟಿಕೊಡುತ್ತಾ ಹೋಗುತ್ತಾರೆ. ಸಮಾನಮನಸ್ಕ ಓದುಗರು ಅವುಗಳಲ್ಲಿ ವಿಹರಿಸುತ್ತಾ ಹೋಗುತ್ತಾರೆ. ಈ ಮಾತು ಸಾಹಿತ್ಯವೂ ಸೇರಿದಂತೆ ಸಿನೆಮಾ, ದೂರದರ್ಶನದ, ಧಾರಾವಾಹಿಗಳು, ನಾಟಕಗಳು, ಹಾಡುಗಳು ಎಲ್ಲಕ್ಕೂ ಅನ್ವಯಿಸುತ್ತದೆ. ಇಂಥ ಒಂದು ಭ್ರಮಾಲೋಕದ ಅವಶ್ಯಕತೆ ಯಾಕೆ ಉಂಟಾಗುತ್ತದೆ ಎಂಬ ಆಲೋಚನೆ ಮೂಡಲು ಸಾಧ್ಯವಾಗುವದು ಸ್ತ್ರೀವಾದಿ ಚಿಂತನೆಗೆ ಮಾತ್ರ. ವಾಸ್ತವದ ಕಟುತ್ವದಿಂದ ಹೊರಬರಲು ತಾತ್ಕಾಲಿಕ ಬಿಡುಗಡೆಯ ತಾಣಗಳವು. ಈ ಅಭಿಪ್ರಾಯಗಳನ್ನು ಅನೇಕ ಚಿಂತಕರು ಅನುಮೋದಿಸುತ್ತಾರೆ. ಚಿಂತಕ 'ಜಾನ್ ಸ್ಟೋರಿ' (John Storey) ತನ್ನ ಕೃತಿ 'An Introduction to cultural theory and popular culture'ನಲ್ಲಿ "The texts and practices of popular culture are seen as forms of public fantacy. Popular culture is understood as collective dream world"[೧೪] ಎಂದು ಜನಪ್ರಿಯ ಕಾದಂಬರಿಗಳಲ್ಲಿರುವ ಕನಸುಗಾರಿಕೆಯ ಜಗತ್ತನ್ನು ವಿವರಿಸುತ್ತಾನೆ. ಅದೇ ಕೃತಿಯಲ್ಲಿ ಇನ್ನೊಬ್ಬ ಚಿಂತಕ ರಿಚರ್ಡ್ ಮ್ಯಾಲ್ಟಬೆ (Richard Maltby) ಕೃತಿಗಳಲ್ಲಿನ ಕನಸುಗಾರಿಕೆಯ ಲೋಕದ ನಿರ್ಮಾಣಕ್ಕೆ ಕಾರಣಗಳನ್ನು ಹೀಗೆ "escapism that is not an escape from or to anywhere, but an escape of our utopian selves"[೧೫] ಎಂದು ವಿವರಿಸುತ್ತಾನೆ. ಗೃಹಿಣಿತ್ವದಲ್ಲಿ ತನ್ನ

ಅಸ್ತಿತ್ವವನ್ನೇ ಕಳೆದುಕೊಂಡಿರುವ ಮಹಿಳೆ ಭ್ರಮೆಯದಾದರೂ ಸರಿ, ಒಂದಿಷ್ಟು ಕಾಲವಾದರೂ ತನ್ನ ಏಕತಾನದ ಬದುಕಿನಿಂದ ಬಿಡುಗಡೆ ಹೊಂದಲು ಬಯಸುತ್ತಾಳೆ. ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವವರು ಅಂಥದೊಂದು ಲೋಕವನ್ನು ಸೃಷ್ಟಿಸುತ್ತಾರೆ. ಬರಹ ಸಾಫಲ್ಯಗೊಳ್ಳುವುದೇ ಓದುಗರಿಂದ. ಬಹುಸಂಖ್ಯಾತ ಮಹಿಳಾ ಸಮುದಾಯ ಈ ಬಗೆಯ ರಚನೆಗಳ ಓದಿನಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತದೆ. ಏಕೆಂದರೆ ಅವರೂ ಕೂಡಾ ಸಮಾನ ಸಾಮಾಜೀಕರಣಕ್ಕೆ ಒಳಗಾದವರಾಗಿರುತ್ತಾರೆ. ಅವರಿಗೂ ತಮ್ಮ ವಾಸ್ತವತೆಯಿಂದ ದೂರವಾಗಲೂ ತಾತ್ಕಾಲಿಕವಾದರೂ ಸರಿ ತಂಗುದಾಣಗಳು ಅವಶ್ಯವಾಗಿರುವುದರಿಂದ ಈ ಸಾಹಿತ್ಯದ ಓದುವಿಕೆಯಲ್ಲಿ ವಿಹರಿಸುತ್ತಾರೆ.

ಯಾವ ಸಂದರ್ಭದಲ್ಲಿ ವಾಸ್ತವ ಸಹ್ಯವಾಗುತ್ತೋ, ಆಗ ಮಹಿಳೆಗೆ ಇಂಥ ಬರಹ–ಓದು ಬೇಕಾಗಿಲ್ಲ. ಬದಲಾವಣೆ ಸಾಧ್ಯವಾಗುವುದು ಪ್ರತಿ ಮಹಿಳೆ ವೈಯಕ್ತಿಕ ನೆಲೆಯಲ್ಲಿ ಸಬಲಳಾಗುತ್ತಾ ಹೋಗುವುದರಿಂದ. ವೈಯಕ್ತಿಕ ಪ್ರಯತ್ನದ ಜೊತೆಗೆನೇ ಸಾಮಾಜಿಕವಾಗಿ ಪರಿವರ್ತನೆ ಆದಾಗ ಸಮಾಜದಲ್ಲಿರುವ ಸ್ತ್ರೀ–ಪುರುಷರಿಬ್ಬರು ಸಾಹಚರ್ಯದ ಆನಂದವನ್ನು ಅನುಭವಿಸಬಹುದು.



**ಅಡಿಟಿಪ್ಪಣಿಗಳು**

೧. ಮಹಿಳಾ ಸಾಮಾಜಿಕತೆ, ಜ್ಯೋತಿ ಶಶಿಕುಮಾರ, ಪುಟ ೧೧೩–೧೧೭
೨. Cultural theory and popular culture: reader, (Ed) John storey, page no.7
೩. ಮಹಿಳಾ ಸಾಮಾಜಿಕತೆ, ಜ್ಯೋತಿ ಶಶಿಕುಮಾರ, ಪುಟ ೧೧೭
೪. ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ, ಲೇ. ಜನಪ್ರಿಯ ಸಾಹಿತ್ಯವನ್ನು ಕುರಿತು, ಕೆ.ವಿ. ನಾರಾಯಣ, ಪುಟ ೫
೫. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ) ಎಚ್.ಎಸ್. ಶ್ರೀಮತಿ, ಪುಟ ೩.
೬. ಬೇರು ಕಾಂಡ ಚಿಗುರು, ಕೆ.ವಿ. ನಾರಾಯಣ, ಪುಟ ೨೭೧
೭. An Introduction to cultural theory and popular culture, John Storey, page no. 7
೮. ಎಂಗೆಲ್ಸ್ : ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ ಮಾಸ್ಕೋ, ಪುಟ ೨೩೦
೯. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೫೪
೧೦. ಸೇರಿಕೊಂಡ ಎಳೆಗಳು, ಲೇ. ಸ್ತ್ರೀವಾದಿ ಓದು, ಎಚ್.ಎಸ್.ಶ್ರೀಮತಿ, ಪುಟ ೧

೧೧. ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ, ಲೇ. ಜನಪ್ರಿಯ ಸಾಹಿತ್ಯವನ್ನು ಕುರಿತು, ಕೆ.ವಿ. ನಾರಾಯಣ, ಪುಟ ೨

೧೨. ನಿಲುವು, ಹೆಚ್.ಎಸ್. ರಾಘವೇಂದ್ರರಾವ್, ಪುಟ ೩೮

೧೩. ನಿಲುವು, ಹೆಚ್.ಎಸ್. ರಾಘವೇಂದ್ರರಾವ್, ಪುಟ ೩೮–೩೯

೧೪. An Introduction to cultural theory and popular culture, John Storey, page no.12

೧೫. An Introduction to cultural theory and popular culture, John Storey, page no.12

## ಅಧ್ಯಾಯ – ನಾಲ್ಕು

# ಅಧ್ಯಾಯ–ನಾಲ್ಕು

## ೪.೧ ಪ್ರಧಾನಧಾರೆಯ ವಿಮರ್ಶೆ ಮತ್ತು ಜನಪ್ರಿಯ ಕಾದಂಬರಿಗಳು

ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದಂತೆ ಸಾಹಿತ್ಯದ ಚರ್ಚೆಗಳು, ಸಾಹಿತ್ಯ ವಿಮರ್ಶೆಯ ನೆಲೆಗಳು ಪುರುಷಕೇಂದ್ರಿತ ಆದವೇ. ಇಡೀ ವಿಮರ್ಶಾ ಸಿದ್ಧಾಂತಗಳು ಪುರುಷ ನಿರ್ಮಿತ ನೆಲೆಯಿಂದಲೇ ಗ್ರಹಿತಗೊಳ್ಳುವಾಗ ಸಹಜವಾಗಿ ಪುರುಷ ಚಿಂತನೆಗಳಿಗೆ ಸಹಕಾರಿಯಾದ, ಪೂರಕವಾದ ಸಂಗತಿಗಳನ್ನು ಮಾತ್ರ ಅದು ಒಳಗೊಳ್ಳುತ್ತದೆ.

ಪುರುಷ ಚಿಂತನೆ ಲೋಕದ ಎಲ್ಲ ಸಂಗತಿಗಳನ್ನು ವೈರುಧ್ಯದ ನೆಲೆಯಲ್ಲಿ; ಹಗಲು-ರಾತ್ರಿ, ಬಿಳಿ-ಕಪ್ಪು, ಗಂಡು-ಹೆಣ್ಣು, ಬುದ್ಧಿ-ಭಾವ, ಒಡೆಯ-ಆಳು, ವೈಚಾರಿಕ-ಅವೈಚಾರಿಕ, ಸ್ವ-ಅನ್ಯ ಎಂದು ಗ್ರಹಿಸುತ್ತದೆ. ಪಟ್ಟಿಯಲ್ಲಿನ ಮೊದಲಿನ ಸಂಗತಿಗಳನ್ನೆಲ್ಲಾ ತನಗೆ ಅನ್ವಯಿಸಿಕೊಂಡು, ಎದುರಿಗೆ ಇರುವುದನ್ನು ತನಗೆ ಅಧೀನವಾಗಿರುವ ಮಹಿಳೆಗೆ ಪಿತೃಪ್ರಧಾನತೆ ಅನ್ವಯಿಸುತ್ತದೆ. ಇದನ್ನೇ ಸ್ತ್ರೀವಾದದ ಮಾತೃಚಿಂತಕಿ 'ಸಿಮೋನ್ ದ ಬೋವಾ' 'ಅನ್ಯ' ಎಂದರೆ ಹೆಂಗಸು ಎನ್ನುತ್ತಾಳೆ. ತನ್ನ ಸಹಜೀವಿಯನ್ನು ಎಂದೂ ಸಖ್ಯದ ಭಾವದಿಂದ ಗ್ರಹಿಸದೆ, ಅವಳ ವಿಚಾರ, ಭಾವನೆ, ಸೃಜನತೆ, ಅಭಿವ್ಯಕ್ತಿ – ಎಲ್ಲವನ್ನು ತನ್ನ ಮೂಗಿನ ನೇರಕ್ಕೆ ವಿವರಿಸಿಕೊಳ್ಳುತ್ತದೆ. ಮಹಿಳೆಯರು ಹೆಚ್ಚು ಭಾವುಕರು, ತರ್ಕಹೀನರು ಎನ್ನುತ್ತಾ ಅವರ ಸಾಹಿತ್ಯದಲ್ಲೂ ಆ ಗುಣಗಳನ್ನು ಹುಡುಕಲು ಹೊರಡುತ್ತದೆ. ಇದನ್ನು 'ಇಲೇನ್ ಶೋ ಆಲ್ಟರ್' (Elaine Showalter)ತನ್ನ ಕೃತಿ 'A literature of their own'ದಲ್ಲಿ ಗುರುತಿಸುತ್ತಾಳೆ. ಹಾಗೆ ಗುರುತಿಸುವಾಗ ಅದನ್ನು ಮಹಿಳಾ ಅಭಿವ್ಯಕ್ತಿಯ ನಕಲಿನ ಹಂತವೆಂದೂ ಗುರುತಿಸುತ್ತಾಳೆ. "We find that women writers were acknowledged to possess sentiment, refinement, tact, observation, domestic expertise, high moral tone, and knowledge of female character; and thought of lack originality, intellectual training, abstract intelligence, humor, self-control and knowledge of male character. Male writers had most of the desirable qualities; power, breadth, distinctness, clarity, learning, abstract intelligence, shrewdness, experience, humor, knowledge of everyone's character and

open mindedness"[೧] ಹೀಗೆ ಪ್ರಧಾನಧಾರೆ ಮಹಿಳಾ ಅಭಿವ್ಯಕ್ತಿಯಲ್ಲಿ ಕೊರತೆಗಳನ್ನು ಕಾಣುತ್ತದೆ. ಮಹಿಳೆಯ ಜೈವಿಕತೆ, ಅವಳ ಇಡೀ ಬದುಕನ್ನು ಆವರಿಸಿಕೊಂಡು ಅದರ ಶೃತಿಯೊಂದಿಗೆ ಹೊಂದಿಕೊಂಡಿದೆ. ಆದ್ದರಿಂದಲೇ ದೇಹ, ಮನಸ್ಸು ಮತ್ತು ಸಂವೇದನೆಗಳ ಮೇಲೆ ಹೆಚ್ಚಿನ ಹಿಡಿತವನ್ನು ಹೊಂದಿಲ್ಲ ಎನ್ನುತ್ತದೆ. ಮಹಿಳಾ ದೇಹವನ್ನು 'ದುರ್ಬಲ', 'ಸಣ್ಣದಾಗಿರುವ', 'ಕೆಳದರ್ಜೆಯ ಸಾಧನ' ಎಂದು ಗುರುತಿಸುತ್ತದೆ. ಪುರುಷನಿಗಿಂತ ಕಡಿಮೆ ಬೌದ್ಧಿಕ ಶಕ್ತಿಯನ್ನು ಹೊಂದಿದವಳು ಎಂದು ಗುರುತಿಸುತ್ತದೆ. ಮುಂದುವರೆದು ಮಹಿಳಾ ಅಭಿವ್ಯಕ್ತಿಯಲ್ಲಿ ಅನುಭವದ ಕೊರತೆ ಇರುತ್ತದೆ ಎಂದು ಪಟ್ಟಿ ಮಾಡುತ್ತದೆ. ಇಂಥ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಚಿಂತಕರ ಅಭಿಪ್ರಾಯಗಳನ್ನು ಇಲೇನ್ ತನ್ನ ಕೃತಿ 'ಲಿಟರೇಚರ್ ಆಫ್ ದೇರ್ ವೋನ್'ನಲ್ಲಿ ಉಲ್ಲೇಖಿಸುತ್ತಾಳೆ. 'ಆರ್.ಎಚ್. ಹುಟ್ಟೋನ್' (R.H. Hutton) "lack of imagination was the main deficiency of feminine genius"[೨] ಎಂದು ಮಹಿಳೆಯ ಅನುಭವದ ಕೊರತೆಯನ್ನು ಹೇಳುತ್ತಾನೆ. ಹೀಗೆ ಮಹಿಳೆಯನ್ನು ಪ್ರಧಾನಧಾರೆಯ ವಿಮರ್ಶೆ ಯಾವಾಗಲೂ ಅಭಾವದ (ಶಿಶ್ನರಹಿತ, ಬುದ್ಧಿರಹಿತ) ಸ್ಥಿತಿಯಲ್ಲಿಯೇ ಗುರುತಿಸುತ್ತದೆ. ಸಾಮಾಜಿಕವಾಗಿ ಸ್ತ್ರೀಗೆ 'ಸ್ತ್ರೀತ್ವ'ವನ್ನು ಆರೋಪಿಸಿ ಚಂಚಲೆ, ಶಕ್ತಿಹೀನ, ನಾಚಿಕೆ ಸ್ವಭಾವವುಳ್ಳ, ಧರ್ಮಭೀರು......... ಗುಣಗಳನ್ನು ಹೆಣ್ಣು ಗುಣಗಳೆಂದು ಆರೋಪಿಸಲಾಗುತ್ತದೆ. ಈ ಎಲ್ಲ ಆರೋಪಗಳನ್ನು ಹೊತ್ತ ಮಹಿಳೆ ಸಹಜವಾಗಿಯೇ ತನ್ನ ಆತ್ಮವಿಶ್ವಾಸವನ್ನು ಕುಗ್ಗಿಸಿಕೊಳ್ಳುತ್ತಾಳೆ ಮತ್ತು ಅದರಿಂದ ಕೀಳರಿಮೆಯನ್ನು ಅನುಭವಿಸುತ್ತಾಳೆ. ಅದು ಸಹಜವೇ. ಆತ್ಮವಿಶ್ವಾಸವನ್ನು ಕುಗ್ಗಿಸುವ ಇಂಥ ವಾತಾವರಣದಲ್ಲಿ ಅವಳ ಸೃಜನತೆ ಮುಕ್ತ ನೆಲೆಯಲ್ಲಿ ಪ್ರಕಟಗೊಳ್ಳುವುದು ಅಸಾಧ್ಯದ ಮಾತೇ ಸರಿ.

ಪಿತೃಪ್ರಧಾನ ನೆಲೆಯಲ್ಲಿ ಇಡೀ ಪಾರಂಪರಿಕ ಸಾಹಿತ್ಯ ಚಿಂತನೆಗಳು ಮತ್ತು ಸಾಹಿತ್ಯ ವಿಮರ್ಶೆಗಳು ಅವಳ ಬದುಕಿನ ಒಟ್ಟಾರೆ ಕ್ರಮವನ್ನೇ ಅಧೀನಕ್ಕೆ ತೆಗೆದುಕೊಂಡು ಅವಳ ಮೇಲೆ ಅಧಿಕಾರವನ್ನು ಸ್ಥಾಪಿಸುತ್ತವೆ. ಅವಳ ಲೈಂಗಿಕತೆಯನ್ನು ವಿವಾಹ, ತಾಯ್ತನಗಳಿಂದ ಕಟ್ಟಿಹಾಕಿ, ಗೃಹಿಣಿತ್ವದ ಜವಾಬ್ದಾರಿಯಲ್ಲಿ ಅವಳ ಬುದ್ಧಿ-ಭಾವಗಳು ಶೂನ್ಯವಾಗುವಂತೆ ಮಾಡುತ್ತವೆ. ಅವಳ ಜಾಣ್ಮೆ, ಬುದ್ಧಿವಂತಿಕೆಗಳನ್ನೆಲ್ಲಾ ಕುತರ್ಕದಿಂದ ಅಳೆಯುತ್ತಾ ಅವಳನ್ನು 'ದ್ವಿತೀಯ ದರ್ಜೆ'ಯವಳಾಗಿ ಪರಿಗಣಿಸುತ್ತವೆ. ಈ ಎಲ್ಲಾ ಆಲೋಚನೆಗಳನ್ನು ಮಹಿಳೆಯೂ ಒಪ್ಪಿ ನಾನು

ಇರಬೇಕಾಗಿದ್ದೇ ಹೀಗೆ, ಹೀಗಿದ್ದರೆ ನನ್ನ ಬದುಕು ಧನ್ಯತೆಯನ್ನು ಪಡೆಯುತ್ತದೆ ಎಂದು ಪುರುಷ ನಿರ್ಮಿತ ಮಾದರಿಗಳಲ್ಲಿ (ತಾಯಿ, ಹೆಂಡತಿ, ಪ್ರಿಯತಮೆ, ಮಗಳು) ತನ್ನನ್ನು ಗುರುತಿಸಿಕೊಳ್ಳುತ್ತಾಳೆ. ತಾಯ್ತನವನ್ನು ಹೆಮ್ಮೆಯಿಂದ ಸ್ವೀಕರಿಸಿ, ಗೃಹಿಣಿಯ ಚಹರೆಯನ್ನು ತನ್ನದಾಗಿಸಿಕೊಳ್ಳುತ್ತಾಳೆ.

ಹೀಗೆ "ಮಹಿಳಾ ಬದುಕಿನ ಅಸ್ತಿತ್ವದ ಎಲ್ಲ ನೆಲೆಗಳನ್ನೂ ಅವಳನ್ನು ಆವರಿಸಿರುವ ಸಾಮಾಜಿಕತೆಯು ನಿಯಂತ್ರಿಸುತ್ತಿರುತ್ತದೆ. ಅವಳ ಸೃಜನಶೀಲತೆಯ ಪ್ರಶ್ನೆಯು ಇದಕ್ಕೆ ಹೊರತಾದದ್ದಲ್ಲ. ತನ್ನ ಸೃಜನಶೀಲತೆಗೆ ಇರುವ ಅಡೆತಡೆಗಳನ್ನು ಪ್ರಜ್ಞಾಪೂರ್ವಕವಾಗಿ ಗುರುತಿಸಿಕೊಳ್ಳುವುದು ಎಂದರೆ ಈ ಸಾಮಾಜಿಕತೆಯ ಸಂದರ್ಭವನ್ನು ಅರ್ಥಮಾಡಿಕೊಳ್ಳುವುದೇ ಆಗಿದೆ. ವರ್ತಮಾನದ ಸಂದರ್ಭವನ್ನು ಗ್ರಹಿಸಬೇಕೆಂದರೆ ಅದರ ಭೂತಕಾಲದ ಪರಿಚಯ ಸಾಕಷ್ಟು ಇರಲೇಬೇಕು. ಪಳೆಯುಳಿಕೆಗಳನ್ನು ಆಧರಿಸಿಯೇ ಭೂತವನ್ನು ಪುನಾರಚಿಸಿಕೊಳ್ಳುವುದು ಸಾಧ್ಯ. ಅಂದರೆ, ನಮ್ಮ ಇಂದಿನ ಅಸ್ತಿತ್ವದ ಬೇರುಗಳನ್ನು ಗುರುತಿಸಿ ಸತ್ವಯುತ ಪೋಷಣೆಯನ್ನೊದಗಿಸಬೇಕು. ಸಮಾನ ವೇದಿಕೆಯಲ್ಲಿ ಕುಳಿತು ಸಂವಾದ ನಡೆಸುವ ಚೈತನ್ಯವನ್ನು ನಾವು ಇದರಿಂದಲೇ ಗಳಿಸಿಕೊಳ್ಳಲು ಸಾಧ್ಯ. ಇದೇ ಅಧಿಕಾರಹೀನತೆಯಿಂದ ಅಧಿಕಾರದ ಹಂತಕ್ಕೆ ಚಲಿಸುವ ಹಂತ"[೩] ಎನ್ನುವ 'ಎಚ್.ಎಸ್. ಶ್ರೀಮತಿ'ಯವರ ಮಾತುಗಳು ಮಹಿಳಾ ಅಭಿವ್ಯಕ್ತಿಯ ಬೇರುಗಳಲ್ಲಿ ಉಂಟಾದ ನಿಯಂತ್ರಣಗಳನ್ನು ಮತ್ತು ಕಂಡುಕೊಳ್ಳಬೇಕಾದ ದಾರಿಗಳ ಕಡೆ ಕೈ ತೋರಿಸುತ್ತವೆ. ಸೃಜನಶೀಲತೆ ಎಂದರೆ ವ್ಯಕ್ತಿ ವಿಶಿಷ್ಟ ಪ್ರತಿಭೆ ಎಂದು ಗುರುತಿಸುವುದಾದರೆ, ಅದು ಲೋಕದ ಗಂಡು ಹೆಣ್ಣು ಇಬ್ಬರಲ್ಲೂ ಅಂತರ್ಗತವಾಗಿರುತ್ತದೆ. ನಿತ್ಯದ ಗಾದೆ, ಒಡಪುಗಳನ್ನು ಒಳಗೊಂಡ ಭಾಷೆಯಿಂದ ಹಿಡಿದು ಕಾವ್ಯದ ಭಾಷೆಯವರೆಗೆ ಪ್ರತಿಭೆ ತನ್ನ ಹರಹನ್ನು ಹೊಂದಿರುತ್ತದೆ. ಈಗಾಗಲೇ ಮೊದಲ ಅಧ್ಯಾಯದಲ್ಲಿ ಎತ್ತಿಕೊಂಡಿರುವ ಚರ್ಚೆಯನ್ನು ಇಲ್ಲಿ ಮತ್ತಷ್ಟು ಬೆಳೆಸಬಹುದು. ಸಾಹಿತ್ಯ ಸಿದ್ಧಾಂತಗಳು, ಕಾವ್ಯ ಮೀಮಾಂಸೆಗಳು, ಪ್ರತಿಭೆಯ ಬಗ್ಗೆ ನೀಡುವ ವ್ಯಾಖ್ಯಾನದ ಪ್ರಕಾರ, ಅದೊಂದು ವಿಶಿಷ್ಟ ಶಕ್ತಿ. ಆ ಕುರಿತು ತನ್ನ 'ಕಾವ್ಯಮೀಮಾಂಸಾ'ದಲ್ಲಿ 'ರಾಜಶೇಖರ'ನು ಹೀಗೆ ವ್ಯಾಖ್ಯಾನಿಸುತ್ತಾನೆ. "ಯಾವುದು ಶಬ್ದ ಸಮೂಹವನ್ನೂ, ಅರ್ಥಪುಂಜವನ್ನೂ, ಅಲಂಕಾರತಂತ್ರವನ್ನೂ ಇದೇ ಬಗೆಯ ಇತರ ಉಕ್ತಿ ಮಾರ್ಗವನ್ನು

ಹೃದಯದಲ್ಲಿ ಹೊಳೆಯಿಸುತ್ತದೋ ಅದೇ ಪ್ರತಿಭೆ."[೪] ಮತ್ತೊಬ್ಬ ಮೀಮಾಂಸೆಕಾರ 'ರುದ್ರಟ' ಹೇಳುವ ಹಾಗೆ ಸಮಾಹಿತವಾದ ಮನಸ್ಸಿನಲ್ಲಿ ಹುಟ್ಟುವ ಅರ್ಥಗಳು, ಅದನ್ನು ಹೊರಹಾಕಲು ಬಳಕೆಯಾಗುವ ಪದಗಳ ಹುಟ್ಟಿಗೆ ಪ್ರತಿಭೆ ಕಾರಣ ಎನ್ನುವ ಮಾತುಗಳು ಪ್ರತಿಭೆಯನ್ನು ಕುರಿತು ಹೇಳುತ್ತವೆ. ಮುಂದುವರೆದು 'ಭಟ್ಟತೌತ' ತನ್ನ 'ಕಾವ್ಯಕೌತುಕ'ದಲ್ಲಿ 'ಹೊಸ ಹೊಸ ಭಾವಗಳನ್ನು ಸತತವಾಗಿ ಕಾಣುವ ಕಟ್ಟುವ ಪ್ರಜ್ಞೆಯೇ ಪ್ರತಿಭೆ"[೫] ಎನ್ನುತ್ತಾನೆ.

ಪ್ರತಿಯೊಬ್ಬರೂ ತಮ್ಮ ಲೋಕಗ್ರಹಿಕೆಯನ್ನು ತಮ್ಮ ಸೃಜನಶೀಲತೆಯಲ್ಲಿ ಮೂಡಿಸಲು ಪ್ರಯತ್ನಿಸುತ್ತಾರೆ. ಇತರ ಪ್ರಾಣಿಗಳಿಗಿಂತ ಭಿನ್ನ ನೆಲೆಯಲ್ಲಿರುವ ಮನುಷ್ಯ ತನ್ನ ಸುತ್ತಲೂ ಒಂದು ಸಾಮಾಜಿಕ ಆವರಣವನ್ನು ನಿರ್ಮಿಸಿಕೊಂಡಿರುತ್ತಾನೆ. ತನಗೆ ಅನುಕೂಲಕರವಾದ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿರುವ ಮನುಷ್ಯ, ತಾನೂ ಕೂಡಾ ಆ ವ್ಯವಸ್ಥೆಯ ಒಂದು ಭಾಗವಾಗಿಯೇ ವರ್ತಿಸುತ್ತಿರುತ್ತಾನೆ. ಪರಿಸರದ ಪ್ರಭಾವಕ್ಕೆ ಒಳಗಾಗಿ ಅದನ್ನು ತನ್ನ ಮನೋ ವ್ಯಾಪಾರದಲ್ಲಿ ಪರಿವರ್ತಿಸುವ ಪ್ರಕ್ರಿಯೆಯೇ ಸಾಹಿತ್ಯ ಸೃಷ್ಟಿ. ಅಂದಾಗ ಲೋಕದ ಗ್ರಹಿಕೆ ಪ್ರತಿ ಸೃಷ್ಟಿಯ ಹಿಂದೆ ಬಹಳ ಪರಿಣಾಮಕಾರಿಯಾದ ಸಂಗತಿಯಾಗುತ್ತದೆ. ಲೋಕಗ್ರಹಿಕೆಯೊಂದಿಗೆ ಮೂಡುವ ಸೃಜನತೆಗೆ ಜೊತೆಯಾಗಿ ವ್ಯುತ್ಪತ್ತಿ (ಲೋಕದ ನಡವಳಿಕೆ, ಶಾಸ್ತ್ರ, ಕಾವ್ಯ ಮೊದಲಾದವುಗಳ ಪರಿಶೀಲನೆಯಿಂದ ಬರುವ ನಿಪುಣತೆ) ಮತ್ತು ಅಭ್ಯಾಸ (ಕಾವ್ಯಜ್ಞರ ಉಪದೇಶವನ್ನು ಪಡೆದು ಮತ್ತೆ, ಮತ್ತೆ ಮಾಡಿದ ಅಭ್ಯಾಸ) ಇರಬೇಕೆಂದು 'ಮಮ್ಮಟ'ನು ಹೇಳುವ ಮಾತುಗಳು ಲೋಕಗ್ರಹಿಕೆಯೊಂದಿಗೆ ಕಲಿಕೆಯಿಂದ ಲಭ್ಯವಾಗುವ ಹೆಚ್ಚಿನ ಓದು, ತರಬೇತಿ, ಶಿಕ್ಷಣಗಳು ವ್ಯಕ್ತಿಯ ಸೃಜನತೆಯನ್ನು ಗಟ್ಟಿಗೊಳಿಸುವ ಅಂಶಗಳು ಎನ್ನುವುದನ್ನು ಹೇಳುತ್ತವೆ.

ಈ ಮಾತುಗಳ ಪ್ರಕಾರ ಸೃಜನಶೀಲತೆ ಎಂಬುದು, ಲೋಕಗ್ರಹಿಕೆ, ಅನುಭವ, ಕಲಿಕೆ, ಧ್ಯಾನಸ್ಥ ಸ್ಥಿತಿ, ಶಿಕ್ಷಣದ ಅವಕಾಶಗಳ ಮೂಲಕ ಸಾಧ್ಯ ಎಂಬ ಅಭಿಪ್ರಾಯವನ್ನು ಮೂಡಿಸುತ್ತದೆ. ಇವು ಯಾರಿಗೆಲ್ಲ ಲಭ್ಯವೋ ಅವರಿಂದ ಸಾಹಿತ್ಯಾಭಿವ್ಯಕ್ತಿ ಸಾಧ್ಯ ಎಂದಾಗುತ್ತದೆ. ಸಾಹಿತ್ಯ ಸಿದ್ಧಾಂತಗಳನ್ನು ಒಳಗೊಂಡಂತೆ ಎಲ್ಲ ಸಂಸ್ಥೆಗಳು ಹೇಳುವುದು ಇಂಥ ಸಾರ್ವತ್ರಿಕ ಹೇಳಿಕೆಗಳನ್ನೇ. ಮಾನವನನ್ನು ಕುರಿತಂತೆ ಹೇಳುವ ಸಂದರ್ಭದಲ್ಲಿ ಸ್ತ್ರೀಯೂ ಸೇರಿರುತ್ತಾಳೆ ಎನ್ನುವುದನ್ನು ಅವು ಹೇಳದರೂ ಪಿತೃಪ್ರಧಾನ ಸಮಾಜದಲ್ಲಿ

ಬದುಕುತ್ತಿರುವ ಮಹಿಳೆಯ ವಾಸ್ತವ ಬೇರೆಯೇ ಆಗಿರುತ್ತದೆ. ಅಧೀನ ಬದುಕನ್ನು ಬದುಕುತ್ತಿರುವ ಮಹಿಳೆಯ ಬದುಕು, ಸಹಜೀವಿಯಾದ ಪುರುಷನಿಗಿಂತ ಭಿನ್ನ ಮತ್ತು ನಿರ್ಬಂಧಗಳಿಂದ ಕೂಡಿರುತ್ತದೆ.

ಮೇಲೆ ಹೇಳಿರುವ ಎಲ್ಲ ಕಾವ್ಯ ಸಿದ್ಧಾಂತಗಳನ್ನು ಕೊಂಚ ಚರ್ಚೆಗೆ ಎಳೆಯುವುದಾದರೆ, ಲೋಕಗ್ರಹಿಕೆ, ಲೋಕದ ಅನುಭವ, ಧ್ಯಾನಸ್ಥ ಸ್ಥಿತಿ ಶಿಕ್ಷಣದ ಅವಕಾಶ, ಎಂದಾದರೂ ಪುರುಷನಷ್ಟು ಮುಕ್ತವಾಗಿ ಮಹಿಳೆಗೆ ದೊರೆತಿದೆಯೆ ಎನ್ನುವ ಪ್ರಶ್ನೆ ಏಳುತ್ತದೆ. ಅವಳಿರುವ ಲೋಕದಲ್ಲಿ ಅವಳಿಗಾಗಿಯೇ ಮತ್ತೊಂದು ಸೀಮಿತ ಲೋಕ ನಿರ್ಮಾಣಗೊಂಡು ಮನೆಯ ಜಗತ್ತು ಅವಳದಾಗಿರುವಾಗ, ಅವಳ ಲೋಕದ ಅನುಭವಗಳೆಲ್ಲಾ ಈ ಪ್ರಪಂಚದಿಂದ ಬಂದವೇ ಆಗಿರುತ್ತದೆ. ಇನ್ನು ಧ್ಯಾನಸ್ಥ ಸ್ಥಿತಿ ಎಲ್ಲಿಂದ ಒದಗಿ ಬರಬೇಕು. ಸೇವಾ ವಲಯದಲ್ಲೇ ಹೊತ್ತನ್ನು ಮಾಡಿ ಮುಳುಗಿಸುವ ಮಹಿಳೆಗೆ ಧ್ಯಾನಸ್ಥಳಾಗುವ ಏಕಾಂತ ದೊರೆಯುವುದು ಸುಲಭವಾದುದಲ್ಲ. ಏಕಾಂತವೇ ದಕ್ಕದ ಸಂದರ್ಭದಲ್ಲಿ, ಶಿಕ್ಷಣದ ಅವಕಾಶಗಳೇ ಮುಚ್ಚಿಹೋಗಿರುವಾಗ ಅವಳು ಏನನ್ನು ತಾನೆ ಕಲಿತಾಳು?

ಇನ್ನು ಅವಳು ತನ್ನ ಲೋಕದಲ್ಲಿ ನಿರ್ವಹಿಸುವ ಕೆಲವು ಕೆಲಸಗಳು ಕಲಿಕೆಯಿಂದ ಲಭ್ಯವಾದರೂ ಅವುಗಳು ಪುರುಷನಿಂದ ನಿರ್ದೇಶಿಸಲ್ಪಟ್ಟವಾಗಿರುತ್ತವೆ. ಅವಳ ಸೇವಾ ಕರ್ತವ್ಯಗಳನ್ನು ವಿಸ್ತರಿಸುವ ನೆಲೆಗಳಾಗಿದ್ದು ಅವು ಕೂಡಾ ಅನುತ್ಪಾದಕ ನೆಲೆಯಲ್ಲಿರುತ್ತವೆ. ಉದಾ : ಕಸೂತಿ, ರಂಗೋಲಿ, ಅಡುಗೆ, ಹಾಡು, ಹಸೆ, ಮಕ್ಕಳ ಲಾಲನೆ-ಪಾಲನೆ ಇತ್ಯಾದಿ ಸಂಗತಿಗಳು ಅವಳ ಸೃಜನತೆಯ ಹೊರದಾರಿಗಳು ಎಂದೇನೂ ಪರಿಗಣಿತವಾಗುವುದಿಲ್ಲ.

ಹೀಗೆ ಗಂಡು-ಹೆಣ್ಣಿನ ಸಂಬಂಧಗಳ ನೆಲೆ ಯಜಮಾನ-ಗುಲಾಮ, ಅಧಿಕಾರ-ಅಧೀನ ನೆಲೆಯಲ್ಲಿರುವಾಗ ಸಹಜವಾಗಿಯೇ ಮಹಿಳೆ ತನ್ನ ಒಳಗಿನ ತುಡಿತಗಳಿಗೆ ಸ್ಪಂದಿಸಿ ಅಭಿವ್ಯಕ್ತಿ ಮಾಡಿದಾಗ ಅಲ್ಲಿ ತನ್ನ ಲೋಕ ಪ್ರಕಟಗೊಳ್ಳುವುದು ಸಹಜ. ತನ್ನ ಅಭಿವ್ಯಕ್ತಿಗೆ, ವಸ್ತುವನ್ನು ಕೂಡಾ ತನ್ನ ಜಗತ್ತಿನಿಂದಲೇ ಆಯ್ದುಕೊಳ್ಳುತ್ತಾಳೆ. ಮನೆ-ಹಿತ್ತಲುಗಳ ಪರಿಮಿತಿಯ ಜಗತ್ತು ಅನಾವರಣಗೊಂಡಾಗ ಸಹಜವಾಗಿಯೇ ಆ ಮಿತಿಯಲ್ಲಿ ಅವಳ ವಸ್ತು ಇರುತ್ತದೆ. ಸಹಜವಾಗಿ ಅದು ವೈವಿಧ್ಯತೆಯನ್ನು ಹೊಂದಿರದ, ಸಂಬಂಧಮೂಲವಾದ ಜಗತ್ತಾಗಿರುತ್ತದೆ.

ಈ ಸಂದರ್ಭದಲ್ಲಿ ಸಾಹಿತ್ಯ ಸಿದ್ಧಾಂತಗಳ ನೆಲೆಯಲ್ಲಿ ಮಹಿಳೆಯ ಇಂಥ ಅಭಿವ್ಯಕ್ತಿಯನ್ನೇ ಗಮನಿಸಹೊರಟಾಗ ಅವು ಸೀಮಿತ ವಲಯವನ್ನು ಕುರಿತ, ವಸ್ತು ವೈವಿಧ್ಯತೆಯಿಲ್ಲದ, ಅಡುಗೆಮನೆ ಸಾಹಿತ್ಯವಾಗಿ ಕಾಣಿಸುತ್ತದೆ. ಈ ಎಲ್ಲ ಸಂಗತಿಗಳನ್ನು ಭಿನ್ನ ದೃಷ್ಟಿಕೋನದಿಂದ ನೋಡುವ ಸ್ತ್ರೀವಾದಿ ಚಿಂತನೆ, ಸೃಜನಶೀಲತೆಯ ನಿರ್ಬಂಧಗಳ ಮೂಲ ಅವಳ ಸಾಮಾಜಿಕತೆಯಲ್ಲಿ ಅಡಗಿರುವುದನ್ನು ಗಮನಿಸುತ್ತವೆ. ಗೃಹಿಣಿತ್ವದ ಹೊಣೆಗಾರಿಕೆಯಲ್ಲಿ ಅವಳ ಬುದ್ಧಿ-ಭಾವಗಳು ಶೂನ್ಯವಾಗಿರುವುದನ್ನು ಗಮನಿಸುತ್ತವೆ. ಧ್ಯಾನಸ್ಥ ಸ್ಥಿತಿಗೆ ಇಳಿಯಲಾರದ ಅವಳ ನಿತ್ಯದ ಜಂಜಡಗಳನ್ನು ನೋಡುತ್ತದೆ. ಬಹಳ ಮುಖ್ಯವಾಗಿ ಸ್ತ್ರೀ ಹಾದ ಮಹಿಳೆಯ ಲೋಕಗ್ರಹಿಕೆ, ಆಯ್ದ ವಸ್ತು ದ್ವಿತೀಯ ದರ್ಜೆಯದು ಏಕೆ ಎಂದು ಪ್ರಶ್ನಿಸುತ್ತದೆ. ಪುರುಷನಿಗಿಂತ ವೈವಿಧ್ಯಮಯವಾದ ಪ್ರಪಂಚವನ್ನು ಹೊಂದಿದ ಮಹಿಳೆಯ ಅಭಿವ್ಯಕ್ತಿ, ಒಂದಿಷ್ಟು ವಿರಾಮದ ಸ್ಥಿತಿಯಲ್ಲಿ ತನ್ನ ಒಳಗನ್ನು ಅಭಿವ್ಯಕ್ತಿಸಿದರೆ ಹೊಸದೇ ಲೋಕದರ್ಶನ ಸಾಧ್ಯವಾಗುತ್ತದೆ ಎನ್ನುತ್ತಾರೆ ಸ್ತ್ರೀವಾದಿಗಳು.

ಆದರೆ ಇವೆಲ್ಲಾ ಸಾಧ್ಯತೆಗಳು ಸುಲಭದಲ್ಲಿ ದಕ್ಕದ ಅವಕಾಶಹೀನ ವ್ಯವಸ್ಥೆಯಲ್ಲಿ ಮಹಿಳೆಯ ಬದುಕಿದೆ. ಈ ಮಾತುಗಳು ಇಂದು ಮಹಿಳೆ ಎಚ್ಚೆತ್ತ ಹಾದಿಯಲ್ಲಿ ನಡೆಯುವ ಪ್ರಯತ್ನದಲ್ಲಿರುವಾಗ ಹಿಂದೆಳೆಯುವ ಮಾತುಗಳು ಎಂದು ಗ್ರಹಿಸಬೇಕಾಗಿಲ್ಲ. ಕೆಲವು ವೈಯಕ್ತಿಕ ಸಾಧನೆಗಳು ಇಡೀ ಮಹಿಳಾ ಸಮುದಾಯದ ಬದುಕನ್ನು ಬದಲಿಸಲು ಸಾಧ್ಯವಿಲ್ಲ. ಬಹು ಮಹಿಳಾ ಸಮುದಾಯ ಇನ್ನೂ ಸಾಮಾಜಿಕತೆಯ ಕಬಂಧ ಬಾಹುಗಳಲ್ಲಿ ಸಿಕ್ಕಿ ಉಸಿರಾಡಲು ಒದ್ದಾಡುತ್ತಿದ್ದಾರೆ. ಅಂಥ ಸಂದರ್ಭಗಳನ್ನು ಗುರುತಿಸಿಕೊಳ್ಳುವುದು, ಅದರಿಂದ ಹೊರಬರುವ ಪ್ರಯತ್ನದ ಮೊದಲ ಹಂತ ಆದುದರಿಂದ ಈ ಅಧ್ಯಯನ ಮಹಿಳಾ ಸೃಜನತೆಗಿರುವ ನಿರ್ಬಂಧಗಳು, ಅವು ಅಭಿವ್ಯಕ್ತವಾದಾಗಲೂ ಎದುರಿಸುವ ಸಮಸ್ಯೆಗಳು, ಇವುಗಳನ್ನು ಸ್ತ್ರೀವಾದಿ ಚಿಂತನೆಯ ಹಿನ್ನಲೆಯಲ್ಲಿ ಅಧ್ಯಯನ ಮಾಡಲು, ಆ ಮೂಲಕ ಮಹಿಳಾ ಬದುಕನ್ನು ಅರ್ಥೈಸಿಕೊಳ್ಳಲು ಹೊರಟಿದೆ.

ಹೀಗೆ ಮಹಿಳಾ ಸೃಜನಶೀಲತೆ ಇಷ್ಟೆಲ್ಲಾ ಸಮಸ್ಯೆ, ಶ್ರಮಗಳ ನಡುವೆ ಹೊರಬಂದಾಗಲೂ ಅದರ ಕಷ್ಟಗಳೇನೂ ಮುಗಿಯಲಿಲ್ಲ. ಮುಂದೆ ಅದು ತನ್ನ ಪಯಣಕ್ಕೆ ಕೆಲವು ಪರಿಕರಗಳನ್ನು ಹಾಯ್ದು ಬರಬೇಕಾಗುತ್ತದೆ. ಅವೇ ತಂತ್ರ, ಭಾಷೆ, ವಿನ್ಯಾಸಗಳೆಂಬ

ರಾಚನಿಕ ಅಂಶಗಳು. ಇವುಗಳು ಕಲಿಕೆ, ತರಬೇತಿಯ ಮೂಲಕ ಸಾಧ್ಯಮಾಡಿಕೊಳ್ಳುವ ಸಂಗತಿಗಳಾದ್ದರಿಂದ, ಅಂಥ ಅವಕಾಶಗಳಿಂದ ವಂಚಿತಳಾದ ಮಹಿಳೆ ಮತ್ತೇ ಮತ್ತೇ ಈ ಹಾದಿಯಲ್ಲಿ ಮುಗ್ಗರಿಸುತ್ತಾಳೆ. ಏಕೆಂದರೆ ಈ ರಾಚನಿಕ ಅಂಶಗಳು ಪಿತೃಪ್ರಧಾನ ನೆಲೆಯ ಬಹುದೊಡ್ಡ ಅಸ್ತ್ರಗಳಾಗಿ ಬಳಕೆಯಾಗುತ್ತವೆ ಎಂಬುದನ್ನು ಗಮನಿಸಬೇಕು. ಶಿಕ್ಷಣದ ಮೂಲಕ ಈ ಎಲ್ಲ ಸಂಗತಿಗಳು ಲಭ್ಯವಾಗುತ್ತವೆ ಎನ್ನುವುದು ಹೌದಾದರೂ ಮತ್ತೆ ಶಿಕ್ಷಣ ಸಂಸ್ಥೆ ಕೂಡಾ ಲಿಂಗತಾರತಮ್ಯದಿಂದ ಹೊರತಾಗಿ ಉಳಿದಿಲ್ಲವಾದ್ದರಿಂದ ಅಲ್ಲಿ ನೀಡುವ ತರಬೇತಿ ಕೂಡಾ ಲಿಂಗವ್ಯವಸ್ಥೆಯನ್ನು ಗಟ್ಟಿಗೊಳಿಸುವುದೇ ಆಗಿರುತ್ತದೆ.

ಇಂಥ ಶಿಕ್ಷಣ ವ್ಯವಸ್ಥೆಯಲ್ಲಿ ತಂತ್ರ, ವಿನ್ಯಾಸಗಳು ಮಹಿಳೆಗೆ ಪೂರಕವಾಗುವ ನೆಲೆಯಲ್ಲಿರುವುದಿಲ್ಲ. ಇನ್ನು ಭಾಷೆಯ ಸಂದರ್ಭಕ್ಕೆ ಬಂದರೆ ಭಾಷೆ ಇಡೀ ಗಂಡು ಭಾಷೆ, (ಇದನ್ನೇ 'ಡೇಲ್ ಸ್ಪೆಂಡರ್' 'ಮ್ಯಾನ್ ಮೇಡ್ ಲಾಂಗ್ವೇಜ್' ಎನ್ನುತ್ತಾಳೆ) ತಮ್ಮದಲ್ಲದ ಭಾಷೆಯಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳಬೇಕಾದ ಅಸಹಾಯಕ ಸಂದರ್ಭ ಮಹಿಳೆಯದು. ಪದಗಳಿಂದ ಹಿಡಿದು ವಾಕ್ಯ ರಚನೆಯವರೆಗೂ ಅದು ಪುರುಷ ನಿರ್ಮಿತವಾದ ನೆಲೆಯೇ. ಹೆಣ್ಣಿನ ಅಭಿವ್ಯಕ್ತಿಯ ಒಳಗಿರುವ ವಸ್ತು ಬಹಳ ಗಹನವಾಗಿಯೇ ಇದ್ದರೂ, ತನ್ನದಲ್ಲದ ಭಾಷೆಯಲ್ಲಿ ಅದನ್ನು ಅಭಿವ್ಯಕ್ತಿಸುವುದು ಕಷ್ಟದ ಕೆಲಸ. ಆದರೆ ಪ್ರಧಾನಧಾರೆಯ ವಿಮರ್ಶೆ, ಅವಳ ಅಭಿವ್ಯಕ್ತಿ ಈ ಮಾನದಂಡಗಳನ್ನು ಹಾಯ್ದು ಬಂದರೆ ಮಾತ್ರ ಶ್ರೇಷ್ಠ ಎಂದು ಗುರುತಿಸಿ, ಅವಳ ಆತ್ಮ ವಿಶ್ವಾಸವನ್ನೇ ಕುಗ್ಗಿಸುತ್ತದೆ. ತಮ್ಮ ಸೃಜನತೆಯಲ್ಲಿನ ತೊಡಕುಗಳನ್ನು ಗಮನಿಸದ ಬಹುತೇಕ ಮಹಿಳಾ ಬರಹಗಾರರು, ಪುರುಷ ಸಾಹಿತ್ಯದ ಎತ್ತರಕ್ಕೆ, ಅವರ ಬೌದ್ಧಿಕತೆಯ ಮಟ್ಟಕ್ಕೆ ನಮಗೆ ಏರಲಿಕ್ಕೆ ಆದಿತೇ ಎಂದು ಕೈ ಚೆಲ್ಲಿ ಕೂಡುತ್ತಾರೆ. ಅವರಲ್ಲಿ ಕೆಲವರು ವಿಮರ್ಶೆಯ ಇಂಥ ನಿರ್ಲಕ್ಷ್ಯದಿಂದ ಬರವಣಿಗೆಯನ್ನೇ ನಿಲ್ಲಿಸಿದ ಉದಾಹರಣೆಗಳನ್ನು ನಾವು ನೋಡಬಹುದು.

ಬರೆಯುವ ತುಡಿತವನ್ನು ಹತ್ತಿಕ್ಕಲಾರದೆ ತಮ್ಮನ್ನು ಬರಹದ ಮೂಲಕ ಬಹು ಸಂಖ್ಯೆಯ ಮಹಿಳೆಯರು ಪ್ರಕಟಗೊಳಿಸಿಕೊಳ್ಳುತ್ತಾರೆ. ಅವರು ಪ್ರಧಾನಧಾರೆಯ ವಿಮರ್ಶೆಯನ್ನು ಲೆಕ್ಕಿಸದೆ ತಮ್ಮದೇ ಆದ ಭ್ರಮಾಲೋಕವೊಂದನ್ನು ನಿರ್ಮಿಸಿಕೊಳ್ಳುತ್ತಾ ಹೋಗುತ್ತಾರೆ. ತಮ್ಮ ಖಾಲಿತನದ ಬದುಕುಗಳನ್ನು ತುಂಬಿಕೊಳ್ಳಲು, ಇರುವ ವಾಸ್ತವದ ಕಟತ್ವವನ್ನು ಮರೆಯಲು

ಬಹುಮಹಿಳೆಯರು ಇಂಥದ್ದೊಂದು ಪರ್ಯಾಯಲೋಕದ ಕಟ್ಟುವಿಕೆಯಲ್ಲಿ ನಿರತರಾಗುತ್ತಾರೆ. ನಿರಂತರವಾಗಿ ಇಂಥದ್ದೊಂದು ರಚನೆ ಮತ್ತು ಓದಿನ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರನ್ನು ಸಾಹಿತ್ಯ ವಿಮರ್ಶೆ ಅವಗಣಿಸಿ, ಈ ಬಗೆಯ ಸಾಹಿತ್ಯವನ್ನು ಅಪಮೌಲ್ಯಕರಿಸುತ್ತದೆ. ಸ್ತ್ರೀವಾದಿ ಚಿಂತನೆ ಈ ಅಂಶವನ್ನು ಶ್ರೇಷ್ಠತೆಯ ರಾಜಕಾರಣದ ಭಾಗವಾಗಿ ಗ್ರಹಿಸುತ್ತದೆ.

ಈಗಾಗಲೇ ಗಮನಿಸಿರುವಂತೆ ಲಿಂಗ ರಾಜಕಾರಣದ ತಂತ್ರವಾಗಿ ಮಹಿಳಾ ಸಾಹಿತ್ಯವನ್ನು ಎರಡು ನೆಲೆಗಳಲ್ಲಿ ಪ್ರಧಾನ ಧಾರೆಯ ವಿಮರ್ಶೆ ತಿರಸ್ಕರಿಸುತ್ತದೆ.

೧. ಮಹಿಳೆಯ ಹಿಂದಣ ಹೆಜ್ಜೆಗಳನ್ನೇ ಗುರುತಿಸದೆ, ಅವಳನ್ನು ಚರಿತ್ರೆಯಿಂದ 'ಕಾಣೆ'ಮಾಡಿ. ಅವಳ ಒಟ್ಟು ಭೂತವನ್ನೇ ತಿರಸ್ಕರಿಸುವುದು.

೨. ವರ್ತಮಾನದಲ್ಲಿ ಅವಳ ಅಭಿವ್ಯಕ್ತಿಯನ್ನು ಅಪಮೌಲ್ಯೀಕರಿಸುವುದು, ಅದರ ಭಾಗವಾಗಿ ಮಹಿಳೆಯ ಬಹುಪಾಲು ಸಾಹಿತ್ಯವನ್ನು 'ಜನಪ್ರಿಯ' ಎಂಬ ಪಟ್ಟಿಯಡಿ ಇಟ್ಟು ಅದನ್ನು ಚರ್ಚಿಸದೆ, ಗಮನಿಸದೆ ಅದನ್ನು ತಿರಸ್ಕರಿಸಿ, ಭವಿಷ್ಯಕ್ಕೆ ಅಡ್ಡಿಮಾಡುವುದು.

ಈ ಸಂದರ್ಭದಲ್ಲಿ ಮಹಿಳೆಯ ಹಿಂದಿನ ಸಾಹಿತ್ಯದ ಮೂಲಕವೇ ಮುಂದಣ ನೆಲೆಯನ್ನು ಗಟ್ಟಿಗೊಳಿಸಬೇಕಾದ ಅಗತ್ಯವಿರುವುದರಿಂದ, ಈ ಅಧ್ಯಯನದಲ್ಲಿ ಮಹಿಳೆಯ ಬಹುಪಾಲು ಸಾಹಿತ್ಯವನ್ನು 'ಜನಪ್ರಿಯ' ಎಂದು ಗುರುತಿಸಿದ್ದರ ಕಾರಣ ಮತ್ತು ಆ ಸಾಹಿತ್ಯದ ರಚನೆಯ ಅನಿವಾರ್ಯ ಸಂದರ್ಭ – ಈ ಎರಡನ್ನೂ ಅಧ್ಯಯನದಲ್ಲಿ ಮುಖ್ಯ ಎಂದು ಗುರುತಿಸಿಕೊಳ್ಳಲಾಗಿದೆ. ಈ ವಿವರಗಳ ಹಿನ್ನೆಲೆಯಲ್ಲಿ ಕನ್ನಡದ ಸಂದರ್ಭ ಮತ್ತು ಪಾಶ್ಚಾತ್ಯ ಸಂದರ್ಭದಲ್ಲಿ ಜನಪ್ರಿಯ ಕಾದಂಬರಿಗಳನ್ನು ಕುರಿತಾಗಿ ನಡೆದ ಚರ್ಚೆಯನ್ನು ಸಂಕ್ಷಿಪ್ತವಾಗಿ ಗಮನಿಸಲಾಗಿದೆ.

ಜನಪ್ರಿಯ ಸಂಸ್ಕೃತಿ / ಸಾಹಿತ್ಯ ನಿರ್ದಿಷ್ಟ ಚಹರೆಯನ್ನು ಹೊಂದದೆ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುವ ಸಂಗತಿ. ಸಾಹಿತ್ಯ ವಿಮರ್ಶೆ ಹುಟ್ಟು ಹಾಕಿರುವ ವಿಷಯವಾಗಿ ಇದು ಇಂದು ಅಸ್ತಿತ್ವದಲ್ಲಿದೆ. ಸ್ಪಷ್ಟವಾಗಿ ಹೀಗೇ ಎಂದು ಜನಪ್ರಿಯ ಸಾಹಿತ್ಯದ ಲಕ್ಷಣಗಳನ್ನು ಕಟ್ಟಿ ಕೊಡುವುದಕ್ಕೆ ಆಗುವುದಿಲ್ಲ. ಕನ್ನಡದಲ್ಲಿ ನವ್ಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಬುದ್ಧಿವಂತ

ಪಡೆ ಉತ್ತಮವಾದುದ್ದನ್ನು ಮಾತ್ರ ಚರ್ಚಿಸಿ, ಹಾಗಲ್ಲದನ್ನು 'ಜನಪ್ರಿಯ' ಎಂದು, ಅದು ಉತ್ತಮವಲ್ಲವೆಂದೂ ಅಪರೋಕ್ಷವಾಗಿ ಹೇಳಿತು. ಕೆಲವರಿಗೆ ಮಾತ್ರ ಕಷ್ಟಪಟ್ಟರೆ ಅರ್ಥವಾಗುವ ಕೃತಿಗಳನ್ನು ಮೆಚ್ಚಿ ವಿಮರ್ಶಿಸಿ ಅದೇ ಶ್ರೇಷ್ಠ ಎಂದಿತು. ಪಾಶ್ಚಾತ್ಯ ಸಂದರ್ಭದಲ್ಲಿ ಹತ್ತೊಂಬತ್ತನೇ ಶತಮಾನದ ಕಡೆಯ ವೇಳೆಗೆ ಕೃಷಿ ಪ್ರಧಾನ ಬದುಕು ಶಕ್ತಿ ಕಳೆದುಕೊಂಡು, ಬದಲಾದ ಉದ್ಯೋಗದಿಂದ ಹೊಸ ಜೀವನ ವಿಧಾನ ಕಾಲಿಟ್ಟಿತು. ಜೀವನ ಮೌಲ್ಯಗಳು ಬದಲಾದವು. ವ್ಯಕ್ತಿ ವಿಶಿಷ್ಟ ಹೊಣೆಗಾರಿಕೆ, ಪರಂಪರೆಯ ವಕ್ತಾರಿಕೆ, ಸಂಸ್ಕೃತಿಯನ್ನು ರಕ್ಷಿಸುವ ಜವಾಬ್ದಾರಿ ಸೃಜನಶೀಲ ಲೇಖಕರದು ಆಯಿತು. ಶ್ರೇಷ್ಠತೆಯ ಸವಾರಿಯಲ್ಲಿ ಹಾಗಲ್ಲದನ್ನು ಪ್ರಬಲವಾಗಿ ಖಂಡಿಸಿತು. 'ರಿಚರ್ಡ್ಸ್' ಈ ಸಂಸ್ಕೃತಿಯನ್ನು ಪ್ರಬಲವಾಗಿ ಖಂಡಿಸುತ್ತಾನೆ. "ಇಂದಿನ ಕೆಟ್ಟ ಸಾಹಿತ್ಯ, ಕೆಟ್ಟ ಕಲೆ ಹಾಗೂ ಕೆಟ್ಟ ಸಿನೆಮಾಗಳ ಪ್ರಭಾವದಿಂದಾಗಿ ಜನರಲ್ಲಿ ಅಪಕ್ವವಾದ ಹಾಗೂ ಅಸಹಜವಾದ ಭಾವನೆಗಳು ತುಂಬುತ್ತಿವೆ."[೧] ಎಂದು ಅಭಿಪ್ರಾಯವನ್ನು ಪಡುತ್ತಾನೆ. ಜೀವಂತ ಸಂಸ್ಕೃತಿಯ ವಕ್ತಾರರಾಗಬೇಕಾದ ಯುವ ಜನಾಂಗ ಅಗ್ಗದ, ಅಪಕ್ವವಾದ, ರೋಚಕತೆಯ ಅನುಭವಗಳನ್ನೆ ಮುಖ್ಯವನ್ನಾಗಿಸಿಕೊಂಡಿತು ಎಂಬ ಹಳಹಳಿಕೆ ಶುರುವಾಯಿತು. ಸಾಹಿತ್ಯ ಕೂಡಾ ಮಾರುಕಟ್ಟೆಯಲ್ಲಿ ಬೇಡಿಕೆಗೆ ಅನುಸಾರವಾಗಿ ಬಿಕರಿಯಾಗುವ ಸಾಮಗ್ರಿಯಾದವು. 'ರಿಚರ್ಡ್ ಹೊಗೆರ್ಟ್' ಜನಪ್ರಿಯ ಲೇಖಕರನ್ನು "ಲಿಟರರಿ ಡಿಪಾರ್ಟಮೆಂಟ್ ಸ್ಟೋರ್ಸ್"[೨] ಎಂದು ಕರೆಯುತ್ತಾ, ಕನಸಿನ ಶಬ್ದಗಳ ಕಾರ್ಖಾನೆ ಎಂದು ವರ್ಣಿಸುತ್ತಾನೆ. ಮುಂದುವರೆಯುತ್ತಾ ಹೊಗೆರ್ಟ್ ಜನಪ್ರಿಯ ಸಾಹಿತ್ಯವನ್ನು ಕುರಿತು ಹೀಗೆ ವಿವರಿಸುತ್ತಾನೆ. ಇವನ ಪ್ರಕಾರ "ಜನಪ್ರಿಯ ಸಾಹಿತ್ಯ ಮನರಂಜನೆಯ ಆಧುನಿಕ ಸಾಹಿತ್ಯ. ಜನರಿಗೆ ಏನು ಬೇಕು, ಜನ ಏನನ್ನು ಬಯಸುತ್ತಾರೆ ಅಂತ ಜನಪ್ರಿಯ ಲೇಖಕರಿಗೆ ಗೊತ್ತಿದೆ. ಇವರನ್ನು ಜನ ಹೊಗಳಬೇಕಾಗಿಲ್ಲ; ಇವರ ಬರಹಗಳನ್ನು ಓದುಗರು ಇಷ್ಟಪಟ್ಟರೆ ಸಾಕು. ತೀರ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಹೊಸ, ಹೊಸ 'ಕಿಕ್'ಗಳನ್ನು ಬೇಡುವ ಓದುಗರ ಬೇಡಿಕೆಗಳನ್ನು ಇವರು ಈಡೇರಿಸಬೇಕು. ಜನಪ್ರಿಯ ಲೇಖಕರು ಸಂಖ್ಯೆಗಳ ದೃಷ್ಟಿಯಿಂದ ಬಹಳಷ್ಟನ್ನು 'ಉತ್ಪಾದಿಸು'ತ್ತಾರೆ. ಒಬ್ಬ ಗಂಭೀರ ಲೇಖಕನಲ್ಲಿ ಯಾವ ಹಂತಗಳು ಅವನ ಅನುಭವದ ಪಕ್ವತೆಯನ್ನು ಮತ್ತು ಅಭಿವ್ಯಕ್ತಿಯ ಶೈಲಿಯ ಬದಲಾವಣೆಗಳನ್ನು ಸೂಚಿಸುತ್ತವೋ ಆ ಹಂತಗಳು ಇವರಲ್ಲಿ ಇರುವುದಿಲ್ಲ. ಈ ಲೇಖಕರು ತಮ್ಮ ಫ್ಯಾಂಟಸಿ ಪ್ರಪಂಚವನ್ನು

ಹಂಚಿಕೊಳ್ಳುತ್ತಾರೆ. ಈ ಫ್ಯಾಂಟಸಿಗಳಿಗೆ ಇವರು ಕತೆಯ, ಪಾತ್ರಗಳ ರೂಪಕೊಡುವುದರಿಂದ ಇವರು ಓದುಗರಾಗದೆ ಲೇಖಕರಾಗಿರುತ್ತಾರೆ; ತಮ್ಮ ಓದುಗರ ಹಗಲು ಕನಸುಗಳಿಗೆ ಅಭಿವ್ಯಕ್ತಿ ನೀಡುತ್ತಾರೆ. ಇವರು ತಮ್ಮ ಓದುಗರನ್ನು ಸೆರೆ ಹಿಡಿದು ಇಟ್ಟುಕೊಳ್ಳುವ ಪ್ರಕ್ರಿಯೆ ವಾಣಿಜ್ಯ ಒತ್ತಡಗಳ ಮತ್ತು ಲೇಖಕರ ಹಾಗೂ ಓದುಗರ ಸಮಾನ ಮೌಲ್ಯಸಂಹಿತೆ (Ethos)ಯ ಪರಿಣಾಮ"[೮] ಇವನ ಅಭಿಪ್ರಾಯವನ್ನೇ ಅನುಮೋದಿಸುವ ಲೇಖಕರ ಪ್ರಕಾರ ಜನಪ್ರಿಯ ಸಾಹಿತ್ಯ ಒಂದು ಭ್ರಮಾಲೋಕದ ಚಿತ್ರಣ. ಅವಾಸ್ತವ ನೆಲೆಗಟ್ಟಿನ ರಚನೆ ಎಂದು ತಿರಸ್ಕರಿಸಿದರು. ಅನೇಕ ವಿಮರ್ಶಕರ ಪ್ರಕಾರ ಜನಪ್ರಿಯ ಸಾಹಿತ್ಯ, ಮನರಂಜನೆಯ ಸಾಹಿತ್ಯ.

ಇಲ್ಲಿನ ಬರಹ ಮತ್ತು ಓದು, ಆ ಕ್ರಿಯೆಯಲ್ಲಿ ತೊಡಗಿದವರನ್ನು ತನ್ನೊಂದಿಗೆ ಬೆಳೆಸುವ ವಿಶಿಷ್ಟ ನೆಲೆಯದಲ್ಲ. ಇಲ್ಲಿನ ಬರಹಗಾರರು ಮತ್ತು ಓದುಗರು ನಿಷ್ಕ್ರಿಯ ನೆಲೆಯಲ್ಲಿ ಇರುತ್ತಾರೆ ಎಂಬ ಮಾತುಗಳು ಅಸತ್ಯವಾದುದು ಅಲ್ಲ. ನಿಷ್ಕ್ರಿಯತೆಗೆ ಕಾರಣಗಳು ವೈಯಕ್ತಿಯ ನೆಲೆಯಲ್ಲಿ ಇಲ್ಲ ಎಂಬುದನ್ನು ಈಗಾಗಲೇ ಸ್ತ್ರೀವಾದಿ ಓದು ಖಚಿತಗೊಳಿಸಿದೆ. ಓದಿನ ಬಗ್ಗೆ ಚರ್ಚಿಸುತ್ತಾ ಕೆ.ವಿ. ನಾರಾಯಣ ಅವರು "ಓದು ಏಕಾಂತದ ಕ್ರಿಯೆ, ಜೊತೆಗೆ ನಿಜವಾದ ಓದು ಹೆಚ್ಚಿನ ಓದನ್ನು ನಿರಾಕರಸುತ್ತದೆ. ಏಕೆಂದರೆ ಕೃತಿಯೊಂದು ನಿಜದಲ್ಲಿ ಓದುಗರೊಡನೆ ಸಂವಾದದಲ್ಲಿ ತೊಡಗಿತೆಂದರೆ ಮತ್ತೇನನ್ನೂ ಓದಲಾಗದ ಕಾಲಾವಕಾಶವನ್ನು ರೂಢಿಸಿ ಆವರಿಸಿಕೊಂಡು ಬಿಡುತ್ತದೆ. ಅದರ ಅನುಸಂಧಾನದಲ್ಲಿ ತಲ್ಲೀನವಾಗುವಂತೆ ಮಾಡಿಬಿಡುತ್ತದೆ. ಹಾಗಾಗಿ ಓದುಗನೊಬ್ಬ ಎಷ್ಟು ಓದುತ್ತಾನೆ ಎಂಬುದಕ್ಕಿಂತ ಹೇಗೆ ಮತ್ತು ಏಕೆ ಓದುತ್ತಾನೆ ಎಂಬುದು ಮುಖ್ಯವಾದ ಸಂಗತಿ"[೯] ಎನ್ನುತ್ತಾರೆ. ಆದರೆ 'ಜನಪ್ರಿಯ' ಸಾಹಿತ್ಯ ಕಾದಂಬರಿಗಳ ಓದುಗನ ಓದಿನ ಮಾದರಿಯೇ ಬೇರೆ ಎಂದು ವಿಮರ್ಶೆ ಹೇಳುತ್ತದೆ. ಕಾದಂಬರಿಯ ಮೊದಲ ಪುಟ ಮತ್ತು ಕೊನೆಯ ಪುಟವನ್ನು ಓದಿ, ಇಷ್ಟವಾದರೆ ತೆಗೆದುಕೊಳ್ಳುವ ಮನೋಭಾವ ಈ ಓದುಗರದು. ಕತೆ ಸುಖಾಂತವಾದರೆ ಖುಷಿ. ಬರಹ ತಾನು ಅಂದುಕೊಂಡ ರೀತಿಯಲ್ಲೇ ಬೆಳೆಯುತ್ತಾ ಹೋದರೆ ಸಮಾಧಾನ. ಸುಲಭವಾಗಿ ಓದಿ ಸುಖಾಂತದ ಅಂತ್ಯವಿದ್ದರೆ ಸಾಕು ಎನ್ನುವ ಓದುಗನ ಜಾಯಮಾನವನ್ನು ಅನುಸರಿಸಿಯೇ ಬರಹಗಾರರು ತಮ್ಮ ಸರಕುಗಳನ್ನು ಸೃಷ್ಟಿಸುತ್ತಾರೆ. ಬರಹಗಾರ ಮತ್ತು ಓದುಗರಿಗೆ ಸಮಾನ ಅಭಿರುಚಿಯಿರುತ್ತದೆ. ಈ ಬಗ್ಗೆ ಚರ್ಚಿಸುವ ಭಾಸ್ಕರರಾವ್ ಅವರು "ಸರಕು ಸಂಸ್ಕೃತಿಯ ಶಕ್ತಿಗಳ ಮಧ್ಯದಲ್ಲಿ ಕಲೆ ಮತ್ತು

ಸಾಹಿತ್ಯ ಈಗ ಬದುಕಿನ ಜಂಜಾಟದಿಂದ ಕೇವಲ ತಾತ್ಕಾಲಿಕ ಪಲಾಯನ ಅಥವಾ ಮೋಜು ಅಲ್ಲ; ಅದೊಂದು ವಾಣಿಜ್ಯ ಜಾಲ, ಹಣ ಮಾಡುವ ಆಟ ಕೂಡ. ಸಂಸ್ಕೃತಿ ಕೂಡಾ ಒಂದು 'ಉದ್ಯಮ' ಈ ಉದ್ಯಮದಲ್ಲಿ ಲೇಖಕನ "ಅನುಭವಗಳ ಅಬಾರ್ಷನ್" ಕೂಡಾ ಮಾರಾಟಕ್ಕಿಟ್ಟ ಒಂದು ಸರಕು ಆಗುತ್ತದೆ. ಈ ವಾಣಿಜ್ಯ ಜಾಲ ಮತ್ತು 'ಉದ್ಯಮ'ದಲ್ಲಿ ಹೊರ ಬರುವ 'ಜನಪ್ರಿಯ' ಸಾಹಿತ್ಯ ಲೇಖಕನ ತುಡಿತಕ್ಕಿಂತ ಹೆಚ್ಚಾಗಿ ಓದುಗನ ನಿರೀಕ್ಷೆಗಳನ್ನು ನೆರವೇರಿಸುವ, ನಿಜವಾಗಿಸುವ ಬರವಣಿಗೆಯಾಗುತ್ತದೆ. ಇಂಥ ಬರವಣಿಗೆ ತನ್ನನ್ನು ವಿಚಾರಕ್ಕೆ ಹಚ್ಚಬೇಕೆಂದೋ ಅಥವಾ ಬದುಕಿನ ಬಗ್ಗೆ ತನಗೆ ಬೆರಗು ಉಂಟುಮಾಡಿಸಬೇಕೆಂದೋ ಓದುಗ ನಿರೀಕ್ಷಿಸುವುದಿಲ್ಲ. ಅದು ಅವನಿಗೆ ಸುಲಭದ ಓದು ಆಗಿರಬೇಕು, ಬುದ್ಧಿಗೆ ಕಡಿಮೆ ಕೆಲಸ ಕೊಟ್ಟು ಭಾವಕ್ಕೆ ಹೆಚ್ಚು ಒತ್ತು ನೀಡಬೇಕು"[೧೦] ಎಂದು ವಿವರವಾಗಿ ಜನಪ್ರಿಯ ಸಾಹಿತ್ಯದ ಲಕ್ಷಣಗಳನ್ನು ಹೇಳುತ್ತಾರೆ.

"ಜನಪ್ರಿಯ ಸಾಹಿತ್ಯ ಅನ್ನುವುದು ನಮ್ಮ ಸಾಹಿತ್ಯ ವಿಮರ್ಶೆಯ ಮಾನಸಿಕ ರಚನೆ, ಇದೆಯೆಂದು ಭಾವಿಸಿ ಅದಕ್ಕೊಂದು ಆಕಾರ ಮತ್ತು ಗುಣ ಲಕ್ಷಣಕೊಡುವ ಬಗೆ"[೧೧] ಅನ್ನುತ್ತಾರೆ ಕೆ.ವಿ. ನಾರಾಯಣ ಅವರು. ಪ್ರಧಾನ ಧಾರೆಯ ವಿಮರ್ಶೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಬಹು ಪಾಲು ಮಹಿಳಾ ಸಾಹಿತ್ಯವನ್ನು 'ಜನಪ್ರಿಯ' ಎಂದು ಗುರುತಿಸಿ, ಮುಖ್ಯ ಚರ್ಚೆಯಿಂದ ಅದನ್ನು ಹೊರಗಿಡುತ್ತದೆ. ಈಗಾಗಲೇ ಚರ್ಚಿಸಿರುವಂತೆ ಈ ಮಾದರಿಯ ಅಪಮೌಲ್ಯೀಕರಣ ಈ ಪ್ರಕ್ರಿಯೆಯ ಸರಪಣಿಯಾದ ರಚನೆ-ಓದಿನ ನೆಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೊಡಗಿಸಿಕೊಂಡವರನ್ನು ನಗಣ್ಯಮಾಡುತ್ತದೆ. ಆ ಮೂಲಕ ಅವರ ವ್ಯಕ್ತಿತ್ವವನ್ನು ನಾಶ ಮಾಡುತ್ತದೆ. ಈ ಬಗೆಗಿನ ನಿರ್ಲಕ್ಷ ಸಾಹಿತ್ಯ ವಿಮರ್ಶೆಯಲ್ಲಿ ಆಗಿರುವ ಬಹುದೊಡ್ಡ ಲಿಂಗರಾಜಕಾರಣವನ್ನು ಹೇಳುತ್ತದೆ. ಶ್ರೇಷ್ಠತೆಯ ರಾಜಕಾರಣದಲ್ಲಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಿಂದುಳಿದವರು ಬಲಿಪಶುಗಳಷ್ಟೇ. ಪಿತೃಪ್ರಧಾನ ಸಮಾಜದಲ್ಲಿ ಈ ರೀತಿಯಲ್ಲಿ ಅಧೀನ ಬದುಕನ್ನು ಬದುಕುತ್ತಿರುವವರು ಮಹಿಳಾ ಸಮುದಾಯವೇ. ತಮ್ಮ ಅನೇಕ ಒತ್ತಡಗಳ (ವೈಯಕ್ತಿಕವಾದುದಲ್ಲ) ನಡುವೆ ಅಭಿವ್ಯಕ್ತಿಸಿದ ಇವರ ಸಾಹಿತ್ಯದಲ್ಲಿ ಮಹಿಳಾ ಸಮುದಾಯದ ಜಗತ್ತು ಅನಾವರಣಗೊಳ್ಳುತ್ತದೆ. ಈ ಜಗತ್ತು ಜನಸಾಮಾನ್ಯರ

ಅಭಿರುಚಿ, ಕನಸುಗಳು, ಜೀವನ ಮೌಲ್ಯಗಳು, ಬದುಕಿನಲ್ಲಿನ ಆದರ್ಶಗಳು, ಸಂಭ್ರಮಗಳನ್ನು ಒಳಗೊಂಡಿರುತ್ತದೆ.

ಮಹಿಳಾ 'ಜನಪ್ರಿಯ' ಕಾದಂಬರಿಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಇವುಗಳು ಅಶ್ಲೀಲ ಸಾಹಿತ್ಯವಲ್ಲ ಎನ್ನುವುದು. ಇವುಗಳು ಕುಟುಂಬದ ಆವರಣದಲ್ಲಿ, ತಮ್ಮ ಸುತ್ತ-ಮುತ್ತ ನಡೆಯುತ್ತಿರುವ ಸಂಗತಿಗಳನ್ನು ಆದರ್ಶ ಕುಟುಂಬವೊಂದನ್ನು ಕಟ್ಟಿಕೊಡುತ್ತಾರೆ. ತಾವು ಇರಬಯಸುವ ಲೋಕವೊಂದರ ನಿರ್ಮಾಣ ಮಹಿಳಾ ಕಾದಂಬರಿಗಳಲ್ಲಿ ಇರುತ್ತದೆ. ಕಾದಂಬರಿಕಾರ್ತಿಯರು ತಮ್ಮ ಕೃತಿಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ಸೃಷ್ಟಿಸುತ್ತಾರೆ. ಹೆಣ್ಣಿನ ಸ್ಥಿರ ಮಾದರಿಗಳ ಚಿತ್ರಣದ ಜೊತೆ ಜೊತೆಗೆ, ಕ್ರಾಂತಿಕಾರಿ ಹೆಣ್ಣುಗಳ ಚಿತ್ರಣವನ್ನು ಮಾಡುತ್ತಾರೆ. ವಾಸ್ತವದಲ್ಲಿ ಇಲ್ಲದ ಸ್ವಾತಂತ್ರವನ್ನು ಅಲ್ಲಿ ಸೃಷ್ಟಿಸಿಕೊಡುತ್ತಾರೆ. ಆ ಪಾತ್ರಗಳ ಅಂತ್ಯ ಏನಾಗುತ್ತದೆ ಎನ್ನುವುದು ಮತ್ತೊಂದು ಭಿನ್ನವಾದ ಚರ್ಚೆ. ತಾತ್ಕಾಲಿಕವಾಗಿಯಾದರೂ ರಚನೆಯ-ಓದಿನ ಸಂದರ್ಭದಲ್ಲಂತೂ ಕಲ್ಪಿತ ಬದುಕಿನ ಸುಖವನ್ನು ತಾತ್ಕಾಲಿಕವಾಗಿ ಅನುಭವಿಸುತ್ತಾರೆ.

ಈ ಅಧ್ಯಯನದ ಹಿನ್ನಲೆಯಲ್ಲಿ ಓದಿದ ಸುಮಾರು ಮೂನ್ನೂರು-ನಾನ್ನೂರು ಮಹಿಳಾ ಕಾದಂಬರಿಗಳಲ್ಲಿ ಹೆಚ್ಚಿನವು ನವಿರಾದ ಪ್ರೀತಿ-ಪ್ರೇಮದ ಹಿನ್ನೆಲೆ, ಗಂಡ, ಮನೆ, ಮಕ್ಕಳು, ಬಡತನ, ಹೆಣ್ಣಿನ ಕಷ್ಟಗಳು, ಅವಿವಾಹಿತ ಹೆಣ್ಣಿನ ಸಮಸ್ಯೆಗಳು, ದೈವಭಕ್ತಿ, ಜೀವನ ಮೌಲ್ಯಗಳು, ಪರಂಪರಾಗತ ನಂಬಿಕೆಗಳು, ಉದಾತ್ತ ನಾಯಕ, ಒಳ್ಳೆಯತನ, ಕೆಟ್ಟತನ.......... ಇವನ್ನೇ ಮುಖ್ಯ ಸಂಗತಿಗಳನ್ನಾಗಿ ಹೊಂದಿರುತ್ತವೆ. ಎಲ್ಲ ಕಾದಂಬರಿಗಳಲ್ಲೂ ಇವುಗಳೇ ಪುನರಾವರ್ತಿತ ಸಂಗತಿಗಳು. ಈ ಪುನರಾವರ್ತಿತ ಸಂಗತಿಗಳ ಮೂಲಕವೇ ತಮ್ಮ ಕಾಲದ ಮಹಿಳಾ ಬದುಕನ್ನು ಮತ್ತು ಸಾಮಾಜಿಕ ಪರಿಸರವನ್ನು ತೆರೆದಿಡುತ್ತವೆ.

ಇಂಥ ಕಾದಂಬರಿಗಳ ನಿರ್ಮಾಣವನ್ನು ಕುರಿತಂತೆ ಸಾಹಿತ್ಯ ವಿಮರ್ಶೆ ಅನೇಕ ಚರ್ಚೆಯನ್ನು ಮಾಡುತ್ತದೆ. ಅಲ್ಪಸಂಖ್ಯಾತ ವಿಮರ್ಶಕರು ಈ ಬಗೆಯ ಸೃಷ್ಟಿಯನ್ನು ತಿರಸ್ಕಾರದಿಂದ ನೋಡುವಂತೆ ಮಾರ್ಕ್ಸ್‌ವಾದಿ ವಿಮರ್ಶಕರು ಜನಪ್ರಿಯ ಸಾಹಿತ್ಯವನ್ನು ತಿರಸ್ಕಾರದಿಂದ ನೋಡಿ 'ವ್ಯವಸ್ಥೆಯ ಪರವಾಗಿರುವ ಈ ಬಗೆಯ ಸಾಹಿತ್ಯದ' ನಿರ್ಮಾಣ ಜನರನ್ನು ಎಚ್ಚರಿಸುವುದಿಲ್ಲ. ಬದಲಿಗೆ ಜನಸಾಮಾನ್ಯರನ್ನು ವಾಸ್ತವದಿಂದ ದೂರವಿರಿಸಿ

ಭ್ರಮಾತ್ಮಕ ಜಗತ್ತಿನಲ್ಲಿ ಇರುವಂತೆ ಪ್ರೇರೆಪಿಸುತ್ತದೆ ಎಂದು ಆತಂಕ ವ್ಯಕ್ತಪಡಿಸುತ್ತಾರೆ. ತಮ್ಮ ಲೇಖನದಲ್ಲಿ ಜನಪ್ರಿಯ ಸಾಹಿತ್ಯವನ್ನು ಕುರಿತು ಮಾತನಾಡುವ 'ರಾಜೇಂದ್ರ ಚೆನ್ನಿ' ಅವರು "ಕಲೆಗಾರನ ವಿಕ್ಷಿಪ್ತತೆ ವ್ಯವಸ್ಥೆಯ ವಿರುದ್ಧ ಬಂಡಾಯದ ಒಂದು ರೂಪವೂ ಆಗಿರಬಹುದು. ವ್ಯವಸ್ಥೆಯೊಂದಿಗೆ ಪೂರ್ತಿ ಹೊಂದಾಣಿಕೆ ಮಾಡಿಕೊಳ್ಳುವವನೂ ಕಲೆಗಾರನಾಗುತ್ತಾನೆ. ಇವನೇ ನಮ್ಮೆಲ್ಲರ ಚಿರಪರಿಚಿತ ಜನಪ್ರಿಯ ಸಾಹಿತಿ ಮತ್ತು ಜನಪ್ರಿಯ ಕಲೆಗಾರ"[೧೨] ಎನ್ನುತ್ತಾ ಮುಂದುವರೆದು ಜನಪ್ರಿಯ "ಕಾದಂಬರಿಯ ಭಾಷೆ, ಪಾತ್ರಗಳು ಧೋರಣೆಗಳು ಇವೆಲ್ಲವೂ ಪಡಿಯಚ್ಚುಗಳೇ. ಅನುಭವದಲ್ಲಿ ವಿಶಿಷ್ಟವಾಗಿರುವುದನ್ನು ನುಣ್ಣಗೆ ಸವರಿಬಿಟ್ಟು ಅನುಭವವನ್ನು ಸೃಷ್ಟಿಸುವ ಸೃಜನಶೀಲತೆ ಇಲ್ಲದ ವಾಹಕಭಾಷೆಯನ್ನು ಬಳಸುತ್ತಾ ಈ ಕಾದಂಬರಿಗಳು ನಮಗೆ ಗೊತ್ತಿರುವುದನ್ನು ಗೊತ್ತಿರುವ ರೀತಿಯಲ್ಲಿ ಹೇಳುತ್ತವೆ. ಅದ್ದರಿಂದಲೆ ಅವುಗಳನ್ನು ಸುಲಭವಾಗಿ ಬಸ್ಸುಗಳಲ್ಲಿ, ರೈಲಿನಲ್ಲಿ ಮತ್ತು ಅರ್ಧ ಎಚ್ಚರದ ಯಾವುದೇ ಸ್ಥಿತಿಯಲ್ಲಿ ಓದಬಹುದು. ಕಾದಂಬರಿಯಲ್ಲಿ ಘಟನೆಗಳನ್ನು ಮಾತ್ರ ಹಿಗ್ಗಾಮುಗ್ಗಾ ಎಳೆದಾಡುತ್ತಾ ಏನೋ ಆಗುವುದರಲ್ಲಿದೆ ಎನ್ನುವ ಭ್ರಮೆಯನ್ನು ಹುಟ್ಟಿಸುತ್ತಾ ಕೊನೆಗೆ ನಮಗೆ ಗೊತ್ತಿದ್ದನ್ನು ನಿಜ ಎನ್ನುವ ಅತ್ಮ ಸಂತೃಪ್ತಿಯನ್ನು ನೀಡುತ್ತವೆ. ವಾಸ್ತವದಿಂದ ಹಿಂದೇಟು ಹಾಕುವ ಪ್ರವೃತ್ತಿ ಕೇವಲ ಅಪ್ರಬುದ್ಧ ಮನಸ್ಸಿನ ವಿಕೃತಿಯಲ್ಲ, ಇಡೀ ಸಂಸ್ಕೃತಿಯೊಂದು ಈ ಪ್ರವೃತ್ತಿಗೆ ತನ್ನನ್ನು ಒಡ್ಡಿಕೊಳ್ಳುವುದು ನಾವು ಅಂದುಕೊಳ್ಳುವುದಕ್ಕಿಂತ ಸಾಮಾನ್ಯ ಎನ್ನುವುದನ್ನು ನೆನಪಿಟ್ಟುಕೊಂಡರೆ ಸಾಕು, ಜನಪ್ರಿಯ ಸಾಹಿತ್ಯದ ಆಕರ್ಷಣೆಯನ್ನು ಗುರುತಿಸುವುದು 'ಸುಲಭವಾಗುತ್ತದೆ"[೧೩] ಎನ್ನುತ್ತಾರೆ. ಇಲ್ಲಿ ಜನಪ್ರಿಯ ಕಾದಂಬರಿಗಳು ಭ್ರಮೆಯ ಲೋಕವನ್ನು ಹುಟ್ಟುಹಾಕುವ, ಆ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಹಾಳುಗೆಡಹುವ ಸಂಗತಿಗಳು ಎಂಬ ಪಿತೃಪ್ರಧಾನ ವಿಮರ್ಶೆಯ ಆತಂಕ ಕಾಣುತ್ತದೆ.

ಜನಪ್ರಿಯ ಸಾಹಿತ್ಯವನ್ನು ಕುರಿತು ಒಂದು ತಾತ್ವಿಕ ವಿಶ್ಲೇಷಣೆ ಮಾಡಿರುವ 'ಸಿ.ಆರ್. ರಾಮಚಂದ್ರನ್' ಅವರು ಜನಪ್ರಿಯ ಸಾಹಿತ್ಯವೆಂದರೆ ಕಾದಂಬರಿಗಳು ಮಾತ್ರವಲ್ಲ ಎನ್ನುತ್ತಾ ಎಂಥ ಕೃತಿಗಳು, ಯಾಕೆ, ಯಾವ ಕಾರಣಗಳಿಂದ ಜನಪ್ರಿಯತೆಯನ್ನು ಹೊಂದುತ್ತವೆ ಎಂಬುದನ್ನು ಚರ್ಚೆಮಾಡುತ್ತಾರೆ. ಅವರು ಸಾಹಿತ್ಯ ಕೃತಿಗಳ ವಸ್ತು, ಆಕೃತಿ ಬಂಧ ಇವುಗಳ ಮೂಲಕ ಜನಪ್ರಿಯ ಸಾಹಿತ್ಯದ ಲಕ್ಷಣಗಳನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ಈಗಾಗಲೇ ಚರ್ಚಿಸಿರುವಂತೆ ಜನಪ್ರಿಯತೆಯ ಮುಖಾಂತರ, ವಸ್ತುವಿನ ಮುಖಾಂತರ, ಲೇಖಕರ ಉದ್ದೇಶಗಳ ಮುಖಾಂತರ ನಾವು ಒಂದು ಕೃತಿಯ ಜನಪ್ರಿಯತೆಯನ್ನು ಗುರುತಿಸುವುದಕ್ಕೆ ಆಗುವುದಿಲ್ಲ. ಜನಪ್ರಿಯತೆ ಎನ್ನುವುದು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುವ ಒಂದು ಸಂಗತಿ, ಕನ್ನಡ ಸಾಹಿತ್ಯಕ್ಕೆ ಅನ್ವಯಿಸಿ ಗಮನಿಸುವುದಾದರೆ ಪಂಪ, ರನ್ನರ ಕೃತಿಗಳು, ಕುಮಾರವ್ಯಾಸ – ಲಕ್ಷ್ಮೀಶರ ಕೃತಿಗಳು............ ಜನಪ್ರಿಯವಾದ ಕಾಲವೊಂದಿತ್ತು. ಇಂದು ಅವುಗಳ ಜಾಗವನ್ನು ವ್ಯಕ್ತಿತ್ವ ವಿಕಸನದ ಬರಹಗಳು, ಸಾಮಾನ್ಯ ಜ್ಞಾನದ ಪುಸ್ತಕಗಳು, ಯೋಗದ ಪುಸ್ತಕಗಳು – ಬಹು ಜನಪ್ರಿಯತೆಯನ್ನು ಹೊಂದಿ, ಆವರಿಸಿಕೊಂಡಿವೆ. ಅಂದರೆ ಜನಪ್ರಿಯತೆ ಎಂಬುದು ನಿರಂತರವಾಗಿರುವ ವಾಸ್ತವವಲ್ಲ ಎಂದಾಯಿತು.

ಇನ್ನು ವಸ್ತುವಿನ ಮುಖಾಂತರ, 'ಜನಪ್ರಿಯ' ಕೃತಿಗಳು ಎಂದು ಎನ್ನಿಸಿಕೊಳ್ಳುತ್ತವೆ ಎಂದರೆ; ವ್ಯಾಸ ಭಾರತದಿಂದಲೂ ಹಿಡಿದು ಇಂದಿನ ಕೃತಿಗಳಲ್ಲಿ ಇರುವುದು ಅದೇ ಮಾನವ ಗುಣಗಳು. ಕೋಪ, ಅಸೂಯೆ, ಪ್ರೀತಿ, ಕಾಮ, ದಾಯಾದಿತನ, ಸೋಲು–ಗೆಲವು, ಇವೇ. ಗಂಭೀರ ಎನ್ನಿಸಿಕೊಳ್ಳುವ ಮತ್ತು 'ಜನಪ್ರಿಯ' ಎನ್ನಿಸಿಕೊಳ್ಳುವ ಎರಡೂ ಕೃತಿಗಳಲ್ಲಿರುವ ವಸ್ತುಗಳು ಒಂದೇ ಆಗಿರುತ್ತದೆ.

ಇನ್ನು ಲೇಖಕರ ಉದ್ದೇಶಗಳಲ್ಲಿ ಗಂಭೀರ ಸಾಹಿತ್ಯವನ್ನು ರಚಿಸುವವರು ಮಾತ್ರ ಒಳ್ಳೆಯ ಉದ್ದೇಶಗಳನ್ನು ಹೊಂದಿರುತ್ತಾರೆ, ಉಳಿದವರು ಅಲ್ಲ ಎಂದಲ್ಲ. ಜನಪ್ರಿಯ ಕಾದಂಬರಿಗಳೆಂದು ಕರ್ತೃ ಗುರುತಿಸಿರುವ ಲೇಖಕಿಯರು ತಮ್ಮ ಮುನ್ನುಡಿಯಲ್ಲಿ ತಮ್ಮ ಬರಹಗಳು ಓದುಗರ ಬದುಕಿನ ಮೇಲೆ ಒಂದಿಷ್ಟು ಪ್ರಭಾವ ಬೀರಿ ಬದಲಾವಣೆ ತಂದರೆ ತಮ್ಮ ಕೃತಿ ರಚನೆ ಸಾರ್ಥಕ ಎಂದು ಬರೆದುಕೊಂಡಿದ್ದಾರೆ. ಉನ್ನತ ಮತ್ತು ಉತ್ತಮ ನೈತಿಕ ಭಾವವನ್ನು ತಮ್ಮ ಕೃತಿಯ ಮೂಲಕ ಅವರು ಅಭಿವ್ಯಕ್ತಿಸುತ್ತಾರೆ.

ಸಿ.ಎನ್. ರಾಮಚಂದ್ರನ್ ಅವರು ಜನಪ್ರಿಯ ಕೃತಿಗಳ ಆಕೃತಿ, ಬಂಧ – ಇವುಗಳ ಆಧಾರದ ಮೇಲೆ ಅವನ್ನು ಗಂಭೀರ ಸಾಹಿತ್ಯದಿಂದ ಭಿನ್ನ ಎಂದು ಗುರುತ್ತಿಸುತ್ತಾರೆ.

೧. ಪ್ರಿಡಿಕ್ಟಬಿಲಟಿ (ಜನಪ್ರಿಯ ಕೃತಿಗಳ ಪೂರ್ವನಿಶ್ಚಿತ ಲಕ್ಷಣ)

೨. ತೇಲು ಮಟ್ಟದ ಆದರ್ಶ ಪ್ರಿಯತೆ

೩. ಪಡಿಯಚ್ಚುಗಳ ನಿರ್ಮಾಣ

ಈ ಮೂರು ನೆಲೆಗಳಲ್ಲಿ ಜನಪ್ರಿಯ ಸಾಹಿತ್ಯ ಕೃತಿಗಳು ಗಂಭೀರ ಸಾಹಿತ್ಯ ಕೃತಿಗಳಗಿಂತ ಭಿನ್ನವಾಗಿರುತ್ತವೆ ಎಂದು ಗುರುತಿಸುತ್ತಾರೆ.

ಮೇಲಿನ ಎಲ್ಲ ವಿಮರ್ಶೆಗಳನ್ನು ಗಮನಿಸುವಂಥ ಸಂದರ್ಭದಲ್ಲಿಯೇ ಇಂಥ ಚರ್ಚೆಗಳನ್ನು ಸ್ತ್ರೀವಾದಿ ತಾತ್ವಿಕ ಚಿಂತನೆಯ ಮರು ಓದಿಗೆ ಒಡ್ಡುವ ಅಗತ್ಯವಿರುತ್ತದೆ. ಏಕೆಂದರೆ 'ಮಹಿಳಾ ಸಾಹಿತ್ಯ'ವೆಂಬ ಕಾರಣದಿಂದ ಅವುಗಳು ಹೇಗಿದ್ದರೂ ಸರಿ ಎಂದು ಸಮರ್ಥಿಸಿಕೊಳ್ಳುವುದರಿಂದ ಮಹಿಳಾ ಸಾಹಿತ್ಯಕ್ಕೆ, ತನ್ಮೂಲಕ ಮಹಿಳಾ ಬದುಕಿಗೆ ಯಾವುದೇ ಪ್ರಯೋಜನವಿಲ್ಲ. ಬದಲಿಗೆ ಈ ಬಗೆಯ ರಚನೆಗಳಲ್ಲಿ ತನ್ನನ್ನು ನಿರಂತರವಾಗಿ ಮಹಿಳೆ ಯಾಕೆ, ಯಾವ ಅನಿವಾರ್ಯ ಕಾರಣಗಳಿಂದ ತೊಡಗಿಸಿಕೊಂಡಿದ್ದಾಳೆ ಎಂಬುದನ್ನು ಗುರುತಿಸಿಕೊಂಡರೆ, ಮುಂದೆ ಅದರಿಂದ ಹೊರಬರುವ ಪರಿಹಾರಗಳನ್ನು ಹುಡುಕುವ ಸಾಧ್ಯತೆಯಿರುತ್ತದೆ. ಅದು ಇಂದಿನ ಮಹಿಳಾ ಬದುಕಿನ ತುರ್ತೂ ಹೌದು.

ಇಂಗ್ಲೆಂಡಿನ ಸ್ತ್ರೀವಾದಿ 'ಇಲೇನ್ ಶೋ ಆಲ್ಟರ್' ತನ್ನ 'ಟುವರ್ಡ್ಸ್ ಎ ಫೆಮಿನಿಸ್ಟ್ ಪೊಯಿಟಿಕ್ಸ್'ನಲ್ಲಿ ಇಂಗ್ಲಿಷ ಸಾಹಿತ್ಯದಲ್ಲಿನ ಮೂರು ಘಟ್ಟಗಳನ್ನು ಕುರಿತು ಹೇಳುತ್ತಾಳೆ. ಈ ಹಿಂದೆಯೇ ವಿವರವಾಗಿ ಚರ್ಚಿಸಿದಂತೆ ಮಹಿಳೆಯ ಬಿಡುಗಡೆಯ ಹಾದಿಯಲ್ಲಿ ಮೂರೂ ಹಂತಗಳ ಅಧ್ಯಯನ ಮುಖ್ಯವೇ. ಇಂಗ್ಲೆಂಡಿನ ಸಾಹಿತ್ಯದಲ್ಲಿನ ಮೂರು ಘಟ್ಟಗಳನ್ನು ಕನ್ನಡ ಸಾಹಿತ್ಯ ಸಂದರ್ಭಕ್ಕೂ ಪ್ರಸ್ತುವಾದವೇ. ಪ್ರಸ್ತುತ ಅಧ್ಯಯನ ಯಜಮಾನ ಸಂಸ್ಕೃತಿಯನ್ನು ನಕಲುಮಾಡುವ ಅನುಕರಣೆಯ ಹಂತದ ಮಹಿಳಾ ಸಾಹಿತ್ಯವನ್ನು ಕುರಿತು ಚರ್ಚೆಮಾಡುವ ಆಸಕ್ತಿಯನ್ನು ಹೊಂದಿದೆ.

ಪುರುಷ ಚಿಂತನೆ 'ಜನಪ್ರಿಯ' ಸಾಹಿತ್ಯವೆಂದು ಗುರುತಿಸಿ ಆ ಕಾದಂಬರಿಗಳ ಲಕ್ಷಣಗಳನ್ನು ಹೇಳುತ್ತಾರಲ್ಲ ಅದಕ್ಕೆ ಕಾರಣಗಳನ್ನು, ಉತ್ತರಗಳನ್ನು ಹುಡುಕುವ ಪ್ರಯತ್ನ ಇಲ್ಲದೆ. 'ಇಲೇನ್ ಶೋ ಆಲ್ಟರ್' ಹೇಳಿರುವ ನಕಲಿನ ಹಂತ, ತಿಳುವಳಿಕೆಯ ಹಂತ, ಆತ್ಮಶೋಧದ ಹಂತಗಳನ್ನು ಕಾಲಾನುಕ್ರಮಿಕೆಯಲ್ಲಿ ಇಲ್ಲಿಂದ ಇಲ್ಲಿಗೆ ಎಂದು ಗೆರೆಕೊರೆಯಲು ಸಾಧ್ಯವಿಲ್ಲ. ಆ ಹಂತಗಳು ವಿಭಾಗದ ಗೆರೆಗಳನ್ನು ಮೀರಿದ್ದಾಗಿದೆ. ಸ್ತ್ರೀವಾದಿ ಸಾಹಿತ್ಯದಲ್ಲಿ

ಗುರುತಿಸಲ್ಪಟ್ಟ ಮೊದಲನೆಯ ಘಟ್ಟ ಪೂರ್ಣವಾಗಿ ನಕಲಿನ ಘಟ್ಟ. ಈ ಕುರಿತಾಗಿ ದೀರ್ಘವಾದ ಚರ್ಚೆಯನ್ನು 'ಇಲೇನ್ ಶೋಆಲ್ಟರ್' ತನ್ನ 'ಎ ಲಿಟರೇಚರ್ ಆಫ್ ದೇರ್ ಓನ್' ಕೃತಿಯಲ್ಲಿ ಮಾಡುತ್ತಾಳೆ. ಈ ಹಂತದಲ್ಲಿ ಪ್ರಜ್ಞಾಪೂರ್ವಕವಾಗಿ ಮತ್ತು ಅಪ್ರಜ್ಞಾಪೂರ್ವಕವಾಗಿ ತನ್ನನ್ನು ಮಹಿಳೆ ಪುರುಷ ಚಿಂತನೆಯೆದುರಿಗೆ ಅಭಿವ್ಯಕ್ತಿಸಿಕೊಂಡಿದ್ದನ್ನು ಹೇಳಿದ್ದಾಳೆ. ಅನೇಕ ಬರಹಗಾರ್ತಿಯರು ಪುರುಷರ ಹೆಸರಿನಲ್ಲಿ ಬರೆದಿದ್ದನ್ನು ಪ್ರಸ್ತಾಪಿಸುತ್ತಾ, 'ಮೇರಿ ಆನ್ ಇವಾನ್ಸ' 'ಜಾರ್ಜ್ ಎಲಿಯಟ್' ಆದದ್ದನ್ನು ಉದಾಹರಿಸುತ್ತಾಳೆ. ಪುರುಷ ಚಿಂತನೆಯ ಅನೇಕ ಅಂಶಗಳನ್ನು ತಮ್ಮವನ್ನಾಗಿಕೊಂಡು ಮಹಿಳಾ ಲೇಖಕಿಯರು ಬರೆದಿದ್ದನ್ನು ಹೇಳುತ್ತಾಳೆ.

ಕನ್ನಡದ ಸಂದರ್ಭದಲ್ಲಿಯೂ ಇಂಥ ಸಾಹಿತ್ಯ ಕೃತಿಗಳನ್ನು ಮಹಿಳೆಯರು ಬಹಳ ಸಂಖ್ಯೆಯಲ್ಲಿ ರಚಿಸಿದ್ದಾರೆ. ಪ್ರಮಾಣದಲ್ಲಿ ಹೆಚ್ಚಿರುವ ಮಹಿಳಾ ಬರಹಗಾರ್ತಿಯರು ಜನಪ್ರಿಯ ಕಾದಂಬರಿಗಳನ್ನು ೧೦೦-೧೨೫ದವರಗೆಯೂ ರಚಿಸಿದ್ದಾರೆ: ತಮ್ಮದಲ್ಲದ ಹೊಸ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಸಹಜವಾಗಿಯೇ ಈಗಾಗಲೇ ಆ ಕ್ಷೇತ್ರದಲ್ಲಿ ಪಳಗಿರುವವರನ್ನು ಸರಿಗಟ್ಟುವುದು ಅಸಾಧ್ಯದ ಮಾತಾಗುತ್ತದೆ. ಹಾಗೆ ಬರಹವನ್ನು ತನ್ನ ಅಭಿವ್ಯಕ್ತಿ ಮಾರ್ಗವನ್ನಾಗಿಸಿಕೊಂಡಾಗ ತನ್ನ ಎದುರಿಗಿದ್ದ ಪುರುಷ ಮಾದರಿಗಳನ್ನು ಅನಿವಾರ್ಯವಾಗಿ ಒಳಗೊಳ್ಳಬೇಕಾಗುತ್ತದೆ. ಪ್ರಾರಂಭದ ಹಂತದಲ್ಲಿ ಹೊಸ ಪ್ರವೇಶದಿಂದಾಗಿ ಅನೇಕ ಸಮಸ್ಯೆಗಳನ್ನು ಆಕೆ ಎದುರಿಸಬೇಕಾಗುತ್ತದೆ. 'ಬಿ.ಎನ್. ಸುಮಿತ್ರಾಬಾಯಿ'ಯವರು ಮಹಿಳಾ ಬರಹಗಾರರ ಅಭಿವ್ಯಕ್ತಿಯನ್ನು, ಅದರಲ್ಲಿನ ಕೊರತೆಯನ್ನು ಹೀಗೆ ಗುರುತಿಸುತ್ತಾರೆ. "ಯಾವುದೇ ಅರ್ಥವಿರದ ತನ್ನ ಒಳಬದುಕನ್ನು ತುಂಬಿಕೊಳ್ಳಲು ತಾನಿರುವ ಪರಿಸ್ಥಿತಿಯ ವಿರುದ್ಧ ಬಂಡೆದ್ದು ತನ್ನನ್ನು ಪ್ರತಿಪಾದಿಸಿಕೊಳ್ಳಲು ಲೇಖಕಿ ಪ್ರಯತ್ನಿಸುತ್ತಾಳೆ. ಇದರಲ್ಲಿ ತಾನು ಬದುಕುವುದಕ್ಕಿಂತ ಭಿನ್ನವಾದ ಪ್ರಪಂಚವನ್ನು ಸೃಷ್ಟಿಸಲು ಆಕೆಗೆ ಆತ್ಮಾಭಿವ್ಯಕ್ತಿಗೆ ತೊಡಗುವುದೊಂದೇ ಮಾರ್ಗ. ಹೀಗೆ ಮಹಿಳೆ ಅತ್ಯಲ್ಪ ಆಕಾಂಕ್ಷೆಯ ಜೊತೆ ತನ್ನ ನೆನಪುಗಳನ್ನು ಬರೆಯತೊಡಗುತ್ತಾಳೆ. ಆತ್ಮಕಥೆಯನ್ನು ಕಾದಂಬರಿಯನ್ನಾಗಿಸುತ್ತಾಳೆ. ತನ್ನ ಭಾವನೆಗಳಿಗೆ ಕವಿತೆಗಳಲ್ಲಿ ಉಸಿರು ತುಂಬುತ್ತಾಳೆ. ಆದರೆ ತನ್ನ ಬರಡುತನವನ್ನು ತುಂಬಲು ಆಕೆ ಹೊರಟಾಗ, ಅವಳ ರಚನೆ ಕೇವಲ ಕಲ್ಪನಾಮಯವಾಗುತ್ತದೆ. ಅದಕ್ಕೆ ಹೆಚ್ಚು ಕಾಲವನ್ನಾಗಲೀ, ಗಮನವನ್ನಾಗಲೀ ನೀಡದಿರುವುದರಿಂದ ಅವುಗಳ ಅಷ್ಟೇ ಕಡಿಮೆ ಬೆಲೆ

ಬಾಳುತ್ತವೆ. ಮಧ್ಯ ವಯಸ್ಸಿನಲ್ಲಿ ತಮ್ಮ ಅಸ್ತಿತ್ವದಲ್ಲಿನ ಕೊರತೆ ನಿವಾರಿಸಲೆಂದು ಲೇಖನಿ ಹಿಡಿಯುವ ಮಹಿಳೆಯರು ಗಂಭೀರವಾದ ತರಬೇತಿಯ ಅಭಾವದಿಂದಾಗಿ, ಹವ್ಯಾಸಿತನದಿಂದ ಮೇಲೆರಲಾರದೆ ಹೋಗುತ್ತಾರೆ."[೧೪] ಸಹಜವೇ. ಏಕೆಂದರೆ ತನ್ನ ಅರ್ಧ ಆಯುಷ್ಯವನ್ನು ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ ಕರ್ತವ್ಯ ನಿರ್ವಹಿಸಿದ ಮೇಲೆ ಜವಾಬ್ದಾರಿಗಳು ಕೊಂಚ ಸಡಲುಗೊಂಡಾಗ ತಮ್ಮನ್ನು ಬರಹದ ಮೂಲಕ ಅಭಿವ್ಯಕ್ತಿಸಿಕೊಳ್ಳಬೇಕಾದಾಗ ಸಂದರ್ಭದಲ್ಲಿ ಈ ಕೊರತೆಗಳು ಉಂಟಾಗುತ್ತವೆ.

ಉದಾರವಾದಿ ಧೋರಣೆಯಿಂದಾಗಿ, ತನಗೆ ದೊರೆತ ವಿದ್ಯಾಭ್ಯಾಸದ ಪ್ರಯೋಜನದೊಂದಿಗೆ ಪುರುಷಲೋಕವನ್ನು ಪ್ರವೇಶಿಸಿದ ಮಹಿಳೆಯರ ಅಭಿವ್ಯಕ್ತಿಯು ಪುರುಷಜನ್ಯವಾದ ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಚೌಕಟ್ಟಿನಲ್ಲೇ ತನ್ನನ್ನು ಹೊಂದಿಸಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಆಗ ಬಿ.ಎನ್. ಸುಮಿತ್ರಾಬಾಯಿ ಅವರು ಮುಂದುವರೆದು ಗುರುತಿಸುವಂತೆ. "ಮೆಚ್ಚಿಸುವುದೇ ಅವಳ ಮೊದಲ ಉದ್ದೇಶ, ತಾನು ಬರೆಯುತ್ತಿರುವುದರಿಂದ ಹೆಣ್ಣಾಗಿ ಇತರರನ್ನು ಮೆಚ್ಚಿಸದೆ ಹೋಗಬಹುದು ಎಂದು ಆಕೆ ಅನೇಕ ಬಾರಿ ಹೆದರುತ್ತಾಳೆ. ಲೇಖಕಿಯಾಗಿ ಇತರರ ಅಸಂತುಷ್ಟಿಗೆ ಕಾರಣಳಾಗುವ ಧೈರ್ಯ ಆಕೆಗಿಲ್ಲ. ತೀರ ಸ್ವಂತಿಕೆಯುಳ್ಳ ಲೇಖಕ ಯಾವಾಗಲೂ ಷಾಕ್ ಕೊಡುತ್ತಿರುತ್ತಾನೆ, ಅಪವಾದಕರವಾಗಿರುತ್ತಾನೆ. ಹೊಸತನ ಎಂದೂ ಸಹ ಹಳತನ್ನು ತಳ್ಳಿ ಹಾಕುವ ಸ್ವಭಾವದ್ದಿರುತ್ತದೆ. ಇದುವರೆಗೆ ಪುರುಷರ ಸ್ವಾಮ್ಯವಾಗಿದ್ದ ಕಲೆ ಹಾಗೂ ವಿಚಾರಗಳ ಕ್ಷೇತ್ರಕ್ಕೆ ತನಗೂ ಪ್ರವೇಶ ದೊರಕಿದೆಯೆಂಬುದೇ ಇನ್ನೂ ಮಹಿಳೆಗೆ ಹೊಸ ಸಂಗತಿಯಾಗಿದ್ದು ಅದರಿಂದಲೇ ಆಕೆ ಬೆರಗಾಗಿದ್ದಾಳೆ. ಅದ್ದರಿಂದಲೇ ತನ್ನಿಂದಾದಷ್ಟು ಚನ್ನಾಗಿ ನಡೆದುಕೊಂಡು ಮೆಚ್ಚಿಸಲು ಯತ್ನಿಸುತ್ತಾಳೆ. ಕ್ರಮಗೆಡಿಸಲು ಹುಡುಗಾಟ ನಡೆಸಲು, ಆಸ್ಫೋಟಿಸಲು ಆಕೆ ಹೆದರುತ್ತಾಳೆ. ತನ್ನ ಸಾಹಿತ್ಯಿಕ ಸೋಗುಗಳಿಗೆ ವಿನಯ ಸದಭಿರುಚಿಯ ಮೂಲಕ ಪ್ರಾಯಶ್ಚಿತ್ತ ಮಾಡಲು ಆಕೆ ಬಯಸುತ್ತಾಳೆ. ವಿಧೇಯತೆ ಅವಳು ಬಲವಾಗಿ ನಂಬುವ ಖಚಿತ ಮೌಲ್ಯವಾಗಿದೆ. ಕೆಲವು ಆಯ್ದ ಅಲಂಕಾರಿಕ ಸೋಗಿನ ಘನತೆಯ ಮೂಲಕ ತಾನು ಹೆಣ್ಣೆಂಬುದನ್ನು ನೆನಪಿಸುತ್ತಾ, ತನ್ನಿಂದ ಜನ ನಿರೀಕ್ಷಿಸುವ ವೈಯಕ್ತಿಕ ಧ್ವನಿಯನ್ನು ತನ್ನ ಬರಹಕ್ಕೆ ಆಕೆ ನೀಡುತ್ತಾಳೆ. ಆಕೆಯ ಈ ಗುಣಗಳು ಜನಪ್ರಿಯ ಕಾದಂಬರಿಗಳನ್ನು ಬರೆಯಲು

ಸಹಕಾರಿ. ಆದರೆ ಅಪರಿಚಿತ ದಾರಿಯಲ್ಲಿನ ಸಾಹಸ ಪ್ರವೃತ್ತಿಯನ್ನು ಈಕೆಯಿಂದ ನಾವು ನಿರೀಕ್ಷಿಸಲಾಗುವುದಿಲ್ಲ. ಬರವಣಿಗೆಯ ಮೂಲಕ ಸ್ವತಂತ್ರರಾದ ಈ ಮಹಿಳೆಯರು ತಮ್ಮ ವರ್ತನೆ, ಭಾವನೆಗಳ ಸ್ವಂತಿಕೆಯ ದೃಷ್ಟಿಯಿಂದ ಕಳಪೆ ಏನೂ ಅಲ್ಲ. ಆದರೆ ಅವರಲ್ಲಿ ಬಹುಮಂದಿ ತಾವು ಯಾವ ಪುರುಷರ ಆಜ್ಞೆಯನ್ನು ತಿರಸ್ಕರಿಸುತ್ತಾರೋ ಅವರಿಗಿಂತ ಹೆಚ್ಚು ಲಹರಿ ಮನುಷ್ಯರಾಗಿ, ವಿಲಕ್ಷಣವಾಗಿ ವರ್ತಿಸುತ್ತಿರುತ್ತಾರೆ. ಈ ವಿಲಕ್ಷಣತೆಯನ್ನು, ತಮ್ಮ ಪ್ರತಿಭೆಯನ್ನು, ತಮ್ಮ ಬದುಕುವ ರೀತಿಗೆ, ಮಾತುಕತೆಗಳಗೆ, ಪತ್ರವ್ಯವಹಾರಕ್ಕೆ ಬಳಸುವ ಇವರು ಬರವಣಿಗೆಗೆ ತೊಡಗಿದಾಗ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗುತ್ತಾರೆ. ಇದಕ್ಕೆ ವಿರುದ್ಧವಾಗಿ ಪುರುಷರನ್ನೆ ಅನುಕರಿಸಿ, ವೈಚಾರಿಕತೆಯನ್ನು ತನ್ನ ಅಭಿವ್ಯಕ್ತಿ ತಂತ್ರವನ್ನಾಗಿ ಮಾಡಿಕೊಂಡ ಮಹಿಳೆ ತಾನು ಸಂಶಯಿಸುವ ತನ್ನತನದ ಕತ್ತನ್ನೇ ಕಿವುಚಬಹುದು. ಅತಿ ಪಂಡಿತೆಯಾಗಿ ಜಾಗರೂಕತೆಯಿಂದ ಗಂಡಸಿನ ಒರಟುತನ, ಚುರುಕುತನಗಳನ್ನು ಅನುಸರಿಸುವ ಈಕೆ ಒಳ್ಳೆಯ ಸಿದ್ಧಾಂತಿಯಾಗಬಹುದು. ಈ ದಿಕ್ಕಿನಲ್ಲಿ ನಿಜವಾದ ಯೋಗ್ಯತೆಯನ್ನು ಸಾಧಿಸಬಹುದು. ಆದರೆ ಪುರುಷನಿಗಿಂತ 'ಭಿನ್ನ'ವಾದದ್ದು ತನ್ನಲ್ಲಿ ಏನಿದೆಯೋ ಅದನ್ನಾಕೆ ತಿರಸ್ಕರಿಸುತ್ತಲೇ ಇರಬೇಕಾಗುತ್ತದೆ.[೧೫] ಈ ಮೇಲಿನ ಎರಡು ವಿವರಣೆಗಳು ಮಹಿಳಾ ಅಭಿವ್ಯಕ್ತಿ ಪ್ರಕಟಗೊಳ್ಳುವ ಸಂದರ್ಭದಲ್ಲಿನ ಸಂಕಷ್ಟಗಳನ್ನು ವಿವರಿಸುತ್ತವೆ. ಮಹಿಳೆಯರಿಗೆ ತರಬೇತಿಯ ಕೊರತೆ, ತನ್ನೆದುರಿನ ಪುರುಷ ಜಗತ್ತನ್ನು ಎದರಿಸಬೇಕಾದ ಅನಿವಾರ್ಯತೆ, ತನ್ನ ನೆಲೆಯನ್ನು ಹೊಸದಾಗಿ ಸ್ಥಾಪಿಸಿಕೊಳ್ಳುವ ಸಂದರ್ಭದಲ್ಲಿನ ತಡಕಾಟ, ಎಲ್ಲವು ಅವಳ ಎದುರಿಗಿರುವ ಸಮಸ್ಯೆಗಳೇ. ಪ್ರಾರಂಭದಲ್ಲಿ ತಮ್ಮ ವೃತ್ತಿಯ (ಬರವಣಿಗೆ) ಜೊತೆಗೆ ಹೊಂದಾಣಿಕೆ ಮಾಡಿಕೊಳ್ಳುವುದು ಕಷ್ಟಕರವಾಗಿತ್ತು ಮತ್ತು ತೃಪ್ತಿದಾಯಕವಾಗಿರಲಿಲ್ಲ. ೧೯ನೆಯ ಶತಮಾನದ ಕಾದಂಬರಿಕಾರ್ತಿಯರು "ಅಸಹಾಯಕ ಹೆಂಗಸಿನ ಸ್ಥಿರಪ್ರಜ್ಞೆ ಪ್ರತಿಮೆ ಬಳಸಿ ಗಂಡು ವಿಮರ್ಶಕರ ರಸಿಕ ರಕ್ಷಣೆ ಪಡೆದು ಸ್ವಂತಿಕೆ ಸಾಬೀತು ಮಾಡುವ ಅ-ಸ್ತ್ರೀ ಗುಣವನ್ನು ಕುಗ್ಗಿಸಿದರು"[೧೬] ಎಂದು 'ಇಲೇನ್ ಶೋ ಆಲ್ಟರ್' ಹೇಳುತ್ತಾಳೆ.

ಕನ್ನಡದ ಸಂದರ್ಭದಲ್ಲಿಯೂ ಮಹಿಳಾ ಸಾಹಿತ್ಯದ ರಚನೆಯ ಲಕ್ಷಣವನ್ನು ಕುರಿತು ಹೇಳುತ್ತಾ ಡಿ. ಮಂಗಳಾ ಪ್ರಿಯದರ್ಶಿನಿಯವರು ಹೀಗೆ ಹೇಳುತ್ತಾರೆ. "ಪ್ರಧಾನ ಸಂಸ್ಕೃತಿ

ಈವರೆಗೆ ಯಾವ ಮೌಲ್ಯಗಳ ಬಗೆಗೆ ನಿರಂತರವಾಗಿ ಮಾತನಾಡುತ್ತ, ಇವೇ ಬದುಕಿನ ಮೌಲ್ಯಗಳು ಎಂದು ಒಪ್ಪಿತ ಸ್ಥಿತಿಯನ್ನು ನಿರ್ಮಾಣಮಾಡಿತೋ ಅದೇ ಮೌಲ್ಯಗಳನ್ನು ನಮ್ಮ ಹೆಣ್ಣುಮಕ್ಕಳು ಬಹಳ ಸಹಜ ಎಂಬಂತೆ ಗ್ರಹಿಸಿಬಿಟ್ಟರು. ಈ ಗ್ರಹಿಕೆಯ ನೆಲೆಯಿಂದ ಆಚೀಚೆ ಕಣ್ಣು ಹೊರಳಿಸಿ ಧೃಡವಾಸ್ತವದ ಸತ್ಯಗಳನ್ನು ನೋಡುವ ಪ್ರಯತ್ನವನ್ನು ಮಾಡದಿದ್ದುದು ಇಲ್ಲಿ ಬರೆದ ಮಹಿಳೆಯರ ದುರಂತ"[೧೭] ಆದರೆ ಈ ಸಂದರ್ಭದಲ್ಲಿನ ದುರಂತಕ್ಕೆ ಪೂರ್ತಿಯಾಗಿ ಈ ಮಹಿಳೆಯರೇ ಕಾರಣವಲ್ಲ ಎಂಬುದನ್ನು ಗಮನಿಸಬೇಕು. 'ಜನಪ್ರಿಯ ಸಾಹಿತ್ಯ'ದಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಂಡ ಮಹಿಳೆಯರು ತಮ್ಮ ಹಿರಿಯ ಲೇಖಕಿಯರಾದ ತಿರುಮಲಾಂಬ, ಆರ್. ಕಲ್ಯಾಣಮ್ಮ ಮುಂತಾದ ಲೇಖಕಿಯರಿಗಿಂತ ಹೆಚ್ಚಿನ ವಿದ್ಯಾಭ್ಯಾಸದ ಸೌಲಭ್ಯವನ್ನು ಪಡೆದುಕೊಂಡವರು. ಸುದಾರಣಾವಾದಿ ನೆಲೆಯನ್ನು ಹಿನ್ನೆಲೆಯಾಗಿ ಹೊಂದಿದವರು. ಇವರ ಈ ಸವಲತ್ತುಗಳು ಯಾವುವು ಇವರ ಸಾಹಿತ್ಯ ರಚನೆಯಲ್ಲಿ ಹೊಸ ಎಚ್ಚರಗಳನ್ನು, ಹೊಸ ದನಿಗಳನ್ನು ಮೂಡಿಸಲೇ ಇಲ್ಲ. ಸಂಸಾರವನ್ನೇ ಕೇಂದ್ರ ಮಾಡಿಕೊಂಡು ಅದರ ಸುತ್ತಲೇ ಸುತ್ತುವ ಇವರು, ತೇಲು ಆದರ್ಶವನ್ನು, ಹೆಣ್ಣಿನ ಸಮಸ್ಯೆಗಳನ್ನು ಬಾಹ್ಯದ ನೆಲೆಯಿಂದ ಮಾತ್ರ ನೋಡುವುದನ್ನು ಇವರ ಕೃತಿಗಳಲ್ಲಿ ನೋಡಬಹುದು ಎಂಬೆಲ್ಲಾ ವಿಮರ್ಶೆಯ ಮಾತುಗಳಿವೆ.

ಮಹಿಳೆಗೆ ವಿದ್ಯಾಭ್ಯಾಸ ದೊರೆತರೆ ವೈಚಾರಿಕ ನೆಲೆ ದಕ್ಕುತ್ತದೆ. ಎಂಬ ಮಾತು ಸುಳ್ಳು. ಪುರುಷಪ್ರಧಾನ ಸಮಾಜದಲ್ಲಿ ಶಿಕ್ಷಣ ಸಂಸ್ಥೆ ಕೂಡ ಪಿತೃಪ್ರಧಾನ ಧೋರಣೆಗಳನ್ನು ಅಳವಡಿಸಿಕೊಂಡಿರುತ್ತದೆ. ಆ ಮಾದರಿಯ ಶಿಕ್ಷಣ ತರಬೇತಿಯನ್ನು ಪಡೆದ ಮಹಿಳೆ ಅದರ ಪ್ರಭಾವದಿಂದ ಹೊರಬರುವುದು ಕಷ್ಟದ ಕೆಲಸ. ಅಲ್ಲದೆ ಮಹಿಳೆಗೆ ದಕ್ಕುವ ತರಬೇತಿ ಪುರುಷನ ಅನುಕೂಲತೆಗೆ ತಕ್ಕಂತೆ ಇರುತ್ತದೆಯೇ ಹೊರತು ಅದನ್ನು ವಿರೋಧಿಸುವ ನೆಲೆಯಲ್ಲಿ ಅಲ್ಲ. ಇನ್ನು ಉದಾರವಾದಿ ಧೋರಣೆಗಳು ಕೂಡಾ ಹೆಂಗಸಿಗೆ ಬೇಕಾಗಿದ್ದನ್ನು ನೀಡದೆ, ತಾವೇನು ಹೆಂಗಸಿಗೆ ಕೊಡಬೇಕೆಂದಿದ್ದರೂ ಆ ನೆಲೆಯ ತರಬೇತಿಯನ್ನು ಸುಧಾರಣೆಯ ಚಿಂತನೆಗಳಲ್ಲಿ ನೀಡಿದವು. ಅಲ್ಲಿ ರೂಪುಗೊಂಡಿದ್ದು ಪುರುಷ ಬಯಸಿದಂಥ ಹೆಣ್ಣೇ ಹೊರತು ಸ್ವಪ್ರಜ್ಞೆಯ ಮಹಿಳೆಯಲ್ಲ.

ಹೆಣ್ಣಿನ ಇಡೀ ಬುದ್ಧಿ - ಭಾವಗಳನ್ನು ಈ ಸಾಮಾಜಿಕತೆ ಆವರಿಸಿಕೊಂಡಿರುವಾಗ, ಅದರಿಂದ ಹೊರಬರಲು ಸಾಧ್ಯವಾಗುವುದು ಸ್ವಪ್ರಯತ್ನದಿಂದ ಮತ್ತು ಧೃಡವಾದ

ಆತ್ಮವಿಶ್ವಾಸದಿಂದ. ಅಂಥದ್ದು ಸುಲಭವಾಗಿ ಎಲ್ಲರಿಗೂ ಸಾಧ್ಯವಾಗದಂತಹ ಸ್ಥಿತಿ. ಅಂತಹ ಅವಕಾಶಗಳೇ ಲಭ್ಯವಾಗದಂಥ ಸ್ಥಿತಿಯಲ್ಲಿ ಇರುವ ಬಹು ಮಹಿಳಾ ಸಮೂಹ ಸಹಜವಾಗಿಯೇ ಈ ಸಮಾಜದಲ್ಲಿಯೇ ತಮ್ಮ ನೆಲೆಯನ್ನು ಕಂಡುಕೊಳ್ಳಬೇಕಾಗುತ್ತದೆ. ತನ್ನದಲ್ಲದ ಬದುಕನ್ನು ಬದುಕಬೇಕಾದ ಸಂಗತಿ ಯಾರಿಗಾದರೂ ಸಂಕಟದ್ದೇ. ಅಸಂಖ್ಯಾತ ಮಹಿಳಾ ಸಮುದಾಯ ಯಾವುದೋ ಚಾರಿತ್ರಿಕ ಗಳಿಗೆಯಲ್ಲಿ ಅಧೀನ ಬದುಕನ್ನು ಪ್ರಾರಂಭಿಸಿ, ಇಂದಿಗೂ ಅದನ್ನೇ ಬದುಕುತ್ತಿದ್ದಾರೆ. ಇಲ್ಲಿನ ಜಗತ್ತು, ವ್ಯವಹಾರ, ಭಾಷೆ – ಯಾವುವೂ ಅವಳವಲ್ಲ. ಸದಾ ಗೃಹಿಣಿತ್ವದ ಭಾರ. ಬಿಟ್ಟನೆಂದರೂ ಬಿಡದಂಥ ಸಂಗತಿಯದು. ಅಲ್ಲಿಂದ ಅವಳಿಗೆ ಮುಕ್ತಿಯೇ ಇಲ್ಲ. ಹೊರ ಹೋಗಬೇಕೆಂದರೆ ತುಂಬಾ ದೊಡ್ಡ ಹೋರಾಟವನ್ನು ತನ್ನ ವೈಯಕ್ತಿಕ ನೆಲೆಯಲ್ಲಿ ಕೈಗೊಳ್ಳಬೇಕಾಗುತ್ತದೆ. ಅದು ಸಾಧ್ಯವಿಲ್ಲದ ಬದುಕು ಅವಳಗಿದೆ. ಆದ್ದರಿಂದ ಹೇಗೋ ಏನೋ ಹೊಂದಿಕೊಂಡು ಹೋಗುವ ಅವಳ ಬದುಕಿಗೆ ಒಂದಿಷ್ಟು ಬೆಳಕಿಂಡಿಗಳು ಖಂಡಿತಾ ಬೇಕು. ಇಲ್ಲದಿದ್ದರೆ ತನ್ನ ಸುತ್ತಲಿನ ಕತ್ತಲಲ್ಲಿ ಅವಳು ಕರಗಿ ಹೋಗುತ್ತಾಳೆ. ಹಾಗಾಗದಿರಲು ಅವಳೇ ನಿರ್ಮಿಸಿಕೊಂಡ ಬೆಳಕಿಂಡಿಗಳೇ ಅವಳ ಅಭಿವ್ಯಕ್ತಿಯ ನೆಲೆಗಳು. ಹಾಡುತ್ತಲೋ, ರಂಗೋಲಿ ಹಾಕುತ್ತಲೋ, ಅಡುಗೆ ಮಾಡುತ್ತಲೋ, ಮನೆಯ ಅಲಂಕಾರ ಮಾಡುತ್ತಲೋ, ಸಾಹಿತ್ಯ ರಚಿಸುತ್ತಲೋ, ಅವಳು ತನ್ನ ಏಕತಾನತೆಯ, ಬೇಸರದ ಬದುಕಿಗೆ ಒಂದಿಷ್ಟು ಕಾಲ ತಾತ್ಕಾಲಿಕವಾಗಿ ಬಿಡುಗಡೆಯನ್ನು ಪಡೆದುಕೊಳ್ಳುತ್ತಾಳೆ.

ಅಂಥದ್ದೊಂದು ಪರ್ಯಾಯ ಲೋಕವೇ ಈ 'ಜನಪ್ರಿಯ ಕಾದಂಬರಿ'ಗಳ, ರಚನೆ-ಓದು. ಇದೊಂದು ಭ್ರಾಮಕ ಜಗತ್ತು, ಓದುಗರನ್ನು ಅವಾಸ್ತವದಲ್ಲಿಡುವ ಕಾದಂಬರಿಗಳು, ಜೀವ ವಿರೋಧಿ ಸಂಗತಿಗಳು – ಹೌದು. ಆದರೆ ಇವುಗಳು ಅದರಲ್ಲಿ ಪಾಲ್ಗೊಂಡವರನ್ನು ಬಾಧಿಸುವುದಿಲ್ಲ. ಈ ಹಿಂದೆ ಈಗಾಗಲೇ ಚರ್ಚಿಸಿರುವಂತೆ ಮನುಷ್ಯ ಪ್ರಾಣಿಯನ್ನು ಹೊರತುಪಡಿಸಿದರೆ ಬೇರಾವ ಪ್ರಾಣಿಗೂ ತನ್ನ ವಾಸ್ತವವನ್ನು ಒಂದಿಷ್ಟು ಮರೆಯಬೇಕೆನ್ನುವ ಪ್ರಮೇಯವೇ ಒದಗುವುದಿಲ್ಲ. ಆದರೆ ಮನುಷ್ಯರಿಗೆ, ಅದರಲ್ಲೂ ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ಸಮಸ್ಯೆಗಳಿರುವವರಿಗೆ ಈ ಲೋಕದ ವಾಸ್ತವವನ್ನು ಕೆಲ ಸಮಯವಾದರೂ ಮರೆಯಬೇಕೆಂದೆನ್ನಿಸುತ್ತದೆ. ಕುಡಿತ, ಮಾದಕದ್ರವ್ಯಗಳ ಸೇವನೆ, ದೈವಭಕ್ತಿ, ಓದುವುದು,

ಬರೆಯುವುದು, ಕೆಲಸ ಮಾಡುವುದು ಇವೆಲ್ಲಾ ತಾತ್ಕಾಲಿಕವಾದ ಪರಿಹಾರಗಳಾಗಿ ಒದಗುತ್ತವೆ. ಇದರಲ್ಲಿ ಸಿನೆಮಾ, ಟಿ.ವಿ. ಧಾರಾವಾಹಿಗಳನ್ನು ನೋಡುವುದು......... ಎಲ್ಲಾ ಸೇರುತ್ತವೆ.

ತಾವಿರುವ ಒತ್ತಡಗಳಿಂದ ದೂರ ಸರಿಯಲು ಇವುಗಳು ಶಾಶ್ವತ ಪರಿಹಾರಗಳಲ್ಲ. ಆಗಲೂ ಬೇಕಾಗಿಲ್ಲ. ಆದರೆ ಇವು ತಾತ್ಕಾಲಿಕವಾಗಿ ಪರಿಹಾರವನ್ನು ಒದಗಿಸಿ, ಮತ್ತದೇ ವಾಸ್ತವದ ಕಟುತ್ವವನ್ನೆದುರಿಸಲು ಸಹಾಯ ಮಾಡುತ್ತವೆ. ಕಾದಂಬರಿಗಳಲ್ಲಿ ಬರುವ ಸ್ಥಿರ ಪಾತ್ರಗಳು, ಆದರ್ಶ ಕುಟುಂಬಗಳು, ಪ್ರೀತಿಯ ಸಾಮ್ರಾಜ್ಯ, ಸಮಸ್ಯೆಗಳಿಗೆ ಸಿಕ್ಕವ ಪರಿಹಾರಗಳು ಇವೆಲ್ಲಾ ಆ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡವರಿಗೆ ಮಾನಸಿಕ ತೃಪ್ತಿಯನ್ನು ನೀಡುತ್ತವೆ.

ಮಹಿಳೆ ತನ್ನ ಕಾದಂಬರಿಗಳಲ್ಲಿ ಪಿತೃ ಪ್ರಧಾನತೆ ಅವಳನ್ನು ಹೇಗೆ ತಯಾರು ಮಾಡಿದೆಯೋ ಹಾಗೆ, ಅದನ್ನು ಅರಿತೋ –ಅರಿಯದೆಯೋ ಅಚ್ಚುಕಟ್ಟಾಗಿ ವ್ಯಕ್ತಮಾಡುತ್ತಾಳೆ. ಪಿತೃಪ್ರಧಾನತೆಯಲ್ಲಿ ಸಿಕ್ಕ ವಿದ್ಯಾಭ್ಯಾಸ, ಆಯ್ಕೆಯ ಸ್ವಾತಂತ್ರ್ಯ ಎಲ್ಲವೂ ಭ್ರಮೆಗಳೇ. ಆದರೆ ಅವು ಅವಳ ಭ್ರಮೆ, ಸತ್ಯವಲ್ಲ ಎಂದು ಅರಿಯಲಾರದಷ್ಟು ವಿಸ್ಮೃತಿಯನ್ನು ಆಕೆ ಹೊಂದಿದ್ದಾಳೆ. ಆ ಕಾರಣದಿಂದಲೇ ಅಕ್ಷರ ಬಲ್ಲ ಮಹಿಳೆ ತನ್ನನ್ನು ಅಭಿವ್ಯಕ್ತಿಸಿಕೊಂಡಾಗಲೂ ಕುಟುಂಬ, ಗೃಹಿಣಿತ್ವ, ವಿವಾಹ ಈ ಸಂಗತಿಗಳನ್ನು ಸುತ್ತುವರೆದಿರುವುದಕ್ಕೆ ಅವಳ, ಸಾಮಾಜಿಕತೆ ಕಾರಣ ಎನ್ನುವುದನ್ನು ಸ್ತ್ರೀವಾದಿಗಳು ಹೇಳಿದ್ದಾರೆ.

ಸ್ತ್ರೀವಾದಿ ತಾತ್ವಿಕತೆಯಲ್ಲಿ ಕ್ಷುದ್ರ ಸಂಗತಿಗಳಿಗೆ ಮಾನ್ಯತೆಯಿದೆ. ಪಿತೃಪ್ರಧಾನತೆಯ ಆಕಾಶ ನೇತ್ರಕ್ಕೆ ಭೂಮಿಯ ಕ್ಷುದ್ರ ಸಂಗತಿಗಳು ಗೋಚರವಾಗುವುದಿಲ್ಲ. ಕ್ಷುದ್ರ ಸಂಗತಿಗಳೇ ಆವರಿಸಿಕೊಂಡಿರುವ ಮಹಿಳೆಯ ಸಂಗತಿಗಳೂ ಅಷ್ಟೇ. ಮಹಿಳೆಯ ಬದುಕು ವರ್ತಮಾನದ್ದು. ಭವಿಷ್ಯ ಆಕೆಗೆ ಗೊತ್ತಿಲ್ಲ, ಭೂತವಂತೂ ಇಲ್ಲ, ಇಂದಿನ, ಈ ಕ್ಷಣದ ಸಂಗತಿಗಳು ಅವಳಿಗೆ ಬಹು ಮುಖ್ಯ, ಅವಳ ನಿತ್ಯದ ಆವರ್ತನದ ಬದುಕಿನ ಬಂಧನದಿಂದ ಆಕೆಗೆ ಬಿಡುಗಡೆಯಿಲ್ಲ. ದೈಹಿಕವಾಗಿ, ಮಾನಸಿಕವಾಗಿ ಆಕೆ ಬಂಧನಕ್ಕೆ ಒಳಗಾಗಿದ್ದಾಳೆ. ಬಿಡುಗಡೆಯ ಆಕೆಯ ಪ್ರಯತ್ನಕ್ಕೆ, ಸಾಮಾಜಿಕವಾಗಿ ಪರಿವರ್ತನೆಗಳಾಗದೇ ಭ್ರಮೆಯ ಪರಿವರ್ತನೆಗಳಾದರೆ ಏನೂ ಪ್ರಯೋಜನವಿಲ್ಲ, ಸದಾ ಕಾಲ ಅಧೀನದಲ್ಲಿರುವ ಮನಸ್ಸು ಸ್ವತಂತ್ರವಾಗಿ ಏನೊಂದನ್ನೂ ಸೃಜಿಸಲಾರದು. ಸೃಜನಶೀಲತೆಯ ಅಭಿವ್ಯಕ್ತಿಗೆ ಪೂರಕವಾದ ಯಾವ ಸಂಗತಿಗಳೂ ಆಕೆಗೆ

ದಕ್ಕಲು ಸಾಧ್ಯವಿಲ್ಲದಂಥ ಸಂದರ್ಭವನ್ನು ವ್ಯವಸ್ಥೆ ಸೃಷ್ಟಿಸಿದೆ. ಹಾಗೊಂದು ವೇಳೆ ಅವಕಾಶ ದಕ್ಕಿದರೂ ತನ್ನ ಸಾಮಾಜಿಕತಯಿಂದ ಬಿಡುಗಡೆಯನ್ನು ಪಡೆಯಲಾಗದ ಅಸಹಾಯಕತೆ ಅವಳದು.ಆದ್ದರಿಂದಲೇ ಇರುವ ಅವಕಾಶದಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳಲು, ಪ್ರಕಟಿಸಿಕೊಳ್ಳಲು ಮಹಿಳೆ ಹಾತೊರೆಯುತ್ತಾಳೆ. ಈ ನೆಲೆಯಲ್ಲೇ ಮೂಡಿ ಬರುವ ಅವಳ ಬರಹದ ಅಭಿವ್ಯಕ್ತಿ ತನ್ನದಲ್ಲದ ಲೋಕವೊಂದನ್ನು ಪದೇ ಪದೇ ತನ್ನ ಅಭಿವ್ಯಕ್ತಿಯಲ್ಲಿ ಮೂಡಿಸುತ್ತಿರುತ್ತದೆ. ಬಹುತೇಕ ಕಾದಂಬರಿಗಳು ಸುಖಾಂತಗಳೇ. ಸಾಮಾಜಿಕ ವಾಸ್ತವಕ್ಕೊಂದು ಪರ್ಯಾಯ ಲೋಕವೆಂಬಂತೆ ಈ ಕಥಾನಕಗಳು ಸೃಷ್ಟಿಯಾಗುತ್ತವೆ.

ವಾಸ್ತವದಲ್ಲಿ "ನನಗೆ ಭಾಷೆಯಿಲ್ಲ, ನಿನಗೆ ಕಿವಿಯಿಲ್ಲ ಮಾತನಾಡುವುದು ಹೇಗೆ," ಎಂದು ತಮ್ಮ ಸಾಧ್ಯವೇ ಇಲ್ಲ ಎನ್ನುವ ಕವನದಲ್ಲಿ ಕೇಳುವ ಪ್ರತಿಭಾ ನಂದಕುಮಾರರ ಪ್ರಶ್ನೆ ಎಲ್ಲ ಹೆಣ್ಣುಗಳ ಸಮಸ್ಯೆ. ಅಧಿಕಾರವಲಯದಲ್ಲಿರುವ ಗಂಡನಿಗೆ ಆದರ್ಶ ಹೆಣ್ಣು ಬೇಕು. ಪ್ರಿಯತಮೆಯಲ್ಲ, ಗೆಳತಿಯಲ್ಲ, ಸಖಿಯಲ್ಲ. ಹೇಳಿದ್ದನ್ನು ಕೇಳುವ, ಎಲ್ಲಕ್ಕೂ ತಲೆಯಾಡಿಸುವ ಸಾಧು, ಮುದ್ದು ಪ್ರಾಣಿ ಬೇಕು. ಅವನಿಗೆ ತಕ್ಕ ಹಾಗೆ ವರಸಾಮ್ಯವಿರಬೇಕು. ಅವನ ಅಂತಸ್ತಿಗೆ ಸರಿಯಾಗಿ ಅವಳ ಮಾರ್ಪಾಡೇ ಹೊರತು, ಅವಳಲ್ಲಿಯೇ ಆದ ಸ್ವಯಂ ಬದಲಾವಣೆಯಲ್ಲ. ಆದ್ದರಿಂದಲೇ ಕಾದಂಬರಿಗಳಲ್ಲಿ ಪ್ರಗತಿ, ಕ್ರಾಂತಿ ಮನೋಭಾವದ ಹೆಣ್ಣಿದ್ದರೂ ಮತ್ತೆ ಅವಳು ಅಂತಿಮವಾಗಿ ಅವನಿಗೆ ಸೋತು ಶರಣಾಗುತ್ತಾಳೆ, 'ಸಿಮೋನ್ ದ ಬೋವಾ' ತನ್ನ 'ದ ಸೆಕೆಂಡ್ ಸೆಕ್ಸ್'ನಲ್ಲಿ ಒಂದು ಲವ್ ಆಕ್ಟನ್ನು ಹೇಳುತ್ತಾಳೆ. ಕೋಪದಿಂದ ಗಂಡನಿಗೆ ಹೊಡೆದು ನಂತರ ಅವನಿಗೊರಗಿ ಅಳುವ ಹೆಣ್ಣಿನ ಚಿತ್ರಣವದು. ಇದು ಹೆಣ್ಣಿನ ಸ್ಥಾನಮಾನವನ್ನು ಸರಿಯಾಗಿ ನಿರ್ದೇಶಿಸುತ್ತದೆ. ಎಷ್ಟೇ ಘಟವಾಣಿಯಾದ ಹೆಂಗಸಾದರೂ ಗಂಡಿನ ಮುಂದೆ ಅವಳು ಶರಣಾಗಲೇ ಬೇಕಾದ ಪರಿಸ್ಥಿತಿಯನ್ನು ಇದು ಸೂಚಿಸುತ್ತದೆ. ಕಾದಂಬರಿಗಳೇ ಸಿನೆಮಾಗಳಾಗಿ ಪ್ರದರ್ಶಿತವಾದಾಗಲೂ ಇಂಥ ಸನ್ನಿವೇಶಗಳೇ ಪುನರಾವರ್ತಿತವಾಗು ತ್ತಿರುತ್ತದೆ. ಕನ್ನಡದಲ್ಲಿ ಬಂದ ಒಂದು ಸಿನೆಮಾವನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು; ಸ್ತ್ರೀವಾದ ಕುರಿತು ಜೋರಾಗಿ ಮಾತನಾಡುವ ನಾಯಕಿ (ಅಮ್ಮಾವ್ರ ಗಂಡ) ಮದುವೆಯನ್ನೇ ಒಲ್ಲೆ ಎನ್ನುತ್ತಿದ್ದವಳು, ಯಾವುದೋ ಜಿದ್ದಿಗೆ ಬಿದ್ದು, ಹೆಂಡತಿಯಾಗಲು ಒಪ್ಪಿದ ನಾಯಕನನ್ನು ಮದುವೆಯಾಗುತ್ತಾಳೆ. ನಾಯಕಿ ಗಂಡನಾಗಿ, ನಾಯಕ ಹೆಂಡತಿಯಾಗಿ, ಕೆಲವು

ಅತಿರೇಕಗಳೊಂದಿಗೆ ಕತೆ ಮುಂದುವರೆದು ನಾಯಕಿಗೆ ಅಪಘಾತವಾಗಿ ಕೈಕಾಲು ಮುರಿದುಕೊಂಡಾಗ ನಾಯಕ ಬಹಳ ಪ್ರೀತಿಯಿಂದ ಸೇವೆ ಮಾಡುತ್ತಾನೆ....... ಮನ ಸೋತ ನಾಯಕಿ. ಇವಳಿಗೆ ಬುದ್ಧಿ ಕಲಿಸುವ ಸಲುವಾಗಿ ನಾಯಕ ಇನ್ನೊಂದು ಮದುವೆಯಾಗುವ ನಾಟಕ........ ಅಂತಿಮವಾಗಿ ನಾಯಕಿ ತನ್ನ ಅಹಂ ಅನ್ನು ಕಳೆದುಕೊಂಡು ನಾಯಕನ ಕಾಲು ಬಿದ್ದು ಕ್ಷಮೆ ಕೇಳಿದಾಗ ಕತೆ ಅಂತ್ಯವಾಗುತ್ತದೆ.

ಈ ಸಿನೆಮಾದಲ್ಲಿ ಗಂಡನ್ನು ದ್ವೇಷಿಸುವುದು ಸ್ತ್ರೀವಾದಿಗಳಾದವರು ಮಾಡುವ ಕೆಲಸ ಎಂಬಂತೆ ಬಿಂಬಿಸಲಾಗಿದೆ. ನಾಯಕಿ ಮತ್ತವಳ ಗೆಳತಿಯರ ವಿಪರೀತದ ವರ್ತನೆಗಳನ್ನು ಸ್ತ್ರೀವಾದಿ ಲಕ್ಷಣಗಳೆಂದು ಹೇಳಲಾಗುತ್ತದೆ. ಮತ್ತು ಗಂಡ-ಹೆಂಡತಿಯಾಗಿ, ಹೆಂಡತಿ ಗಂಡನಾದರೂ, ಆಪತ್ತು ಬಂದಾಗ ರಕ್ಷಿಸುವವನು ನಾಯಕನೇ. ತಾಳಿಯ ಮಹತ್ವ, ನಾಯಕಿಯ ಕ್ಷಮಾಪಣೆ – ಸಾಮಾಜಿಕವಾಗಿ ಹೆಣ್ಣಿಗಿರುವ ಸ್ಥಾನವನ್ನು ನಿರ್ದೇಶಿಸುತ್ತದೆ. ಅವಳು ಬಳ್ಳಿ, ಆಶ್ರಯ ಬೇಕು. ಅದು ಗಂಡೇ ಆಗಬೇಕು. ಇಲ್ಲದಿದ್ದರೆ ಬದುಕು ಸುರಕ್ಷಿತ ಅಲ್ಲ, ಎಂಬೆಲ್ಲಾ ಸಾಮಾಜಿಕ ಸಂಗತಿಗಳೇ ಸಾಹಿತ್ಯದಲ್ಲಿ ಒಡಮೂಡುತ್ತವೆ, ಇದನ್ನೇ ತಾನಿಯಾ ಮೆಡ್ಲ್‌ಸ್ಕಿ "Popular narratives, speak to very real problems and tensions in women's lives"[೧೮] ಎನ್ನುತ್ತಾಳೆ.

ಆದ್ದರಿಂದಲೇ ಮಹಿಳೆಯರು ತಮ್ಮಂತೆ ಸಮಾನಮನಸ್ಕರಾದ ಮಹಿಳೆಯರೊಂದಿಗೆ ಬರಹ-ಓದಿನ ಸಾಂಗತ್ಯವನ್ನು ಹೊಂದುತ್ತಾರೆ. ಇಲ್ಲಿನ ಬರಹಗಾರರು ಮತ್ತು ಓದುಗರು ಸಾಮಾಜಿಕವಾಗಿ ಸಮಾನಪಾತಾಳಿಯಲ್ಲಿ ಇರುತ್ತಾರೆ. ಸಾಮಾಜಿಕ ಒತ್ತಡಗಳನ್ನು ಬದುಕಿನ ಸಂದರ್ಭಗಳಲ್ಲಿ ಮೀರಬೇಕೆಂದರೂ ಮೀರಲಾರದ ಸಾಮಾಜಿಕ ವಾಸ್ತವಗಳಲ್ಲಿ ಅವರಿದ್ದಾರೆ. ಅವರ ಬದುಕಿನಲ್ಲಿ ಬರುವ ಸಮಸ್ಯೆಗಳಿಗೆ ಉತ್ತರ ಹುಡುಕುವುದು, ಪರಿಹಾರ ದೊರಕಿಸಿಕೊಳ್ಳುವುದು ಅವರ ಕೈಯಲ್ಲಿ ಇರುವುದಿಲ್ಲ. ಆದರೆ ಅವರಿಗೆ ಉತ್ತರ ಬೇಕು, ವಾಸ್ತವದಲ್ಲಿ ಸಾಧ್ಯವಿಲ್ಲದಿದ್ದಾಗ ಕಲ್ಪಿತವಾದ ಅದು ಭ್ರಮಿತ ಲೋಕವಾದರೂ ಸೈ, ಸಮಾನ ನೆಲೆಯಾದರೂ ಬೇಕು. ಒಳಗಿನ ಒತ್ತಡಗಳಿಗೆ ಅದೊಂದು ಹೊಸ ದಾರಿ. ಹೀಗೆ ಸಮುದಾಯದ ಮನಸ್ಸುಗಳು ತಮ್ಮ ಸಾಮಾಜಿಕತೆಯ ಸಂದರ್ಭಗಳಲ್ಲಿ ಕಂಡು ಕೊಳ್ಳುವ ಹಾದಿಯೇ ಈ ಜನಪ್ರಿಯ ಕಾದಂಬರಿಗಳು. ಇದನ್ನೇ 'ಜೆನ್ಸ್ ರಾಡವೆ'(Janice Radway) ತನ್ನ 'Reading the

Romance' ಲೇಖನದಲ್ಲಿ ಹೀಗೆನ್ನುತ್ತಾನೆ....... Not only is it a relaxing release from the tension produced by daily problems and responsibilities, but it creates a time or a space within which a women can be entirely on her personal needs, desires, and pleasure. It is also a means of transportation or escape to the exotic, or again, to that which is different"[೧೯] ಎನ್ನುತ್ತಾನೆ. ಆದ್ದರಿಂದಲೇ ಸಾಂಪ್ರದಾಯಿಕ ಜನಪ್ರಿಯ ಕಾದಂಬರಿಗಳ ರಚನೆ ಮತ್ತು ಓದಿನಲ್ಲಿ ತೊಡಗಿರುವವರನ್ನು ಹೀನ ಅಭಿರುಚಿಯವರೆಂದು ಸಾಹಿತ್ಯ ವಿಮರ್ಶೆ ಎಷ್ಟೇ ಹೇಳಿದರೂ ಅದರಲ್ಲಿ ತೊಡಗಿರುವವರು ಮಾತ್ರ ಈ ಯಾವ ಮಾತುಗಳನ್ನೂ ಕಿವಿಗೆ ಹಾಕಿಕೊಳ್ಳದೆ ಬಹಳ ತನ್ಮಯತೆಯಿಂದ ತಮ್ಮ ಕೆಲಸಗಳಲ್ಲಿ ತೊಡಗಿರುತ್ತಾರೆ.

ಏಕತಾನತೆಯ ಬದುಕಿನಿಂದ ಬೇಸರಗೊಂಡ ಮಹಿಳೆಯರು ಪರಸ್ಪರ ಕಂಡುಕೊಂಡ ಸಂಗತಿಯೆಂದರೆ ಇದು ಬಹುತೇಕ ಎಲ್ಲ ಮಹಿಳೆಯರ ಸಮಸ್ಯೆ ಎಂಬುದು. ಯಾಕೋ ಬೇಜಾರು, 'ಟೈಂ ಪಾಸ್ ಆಗೋದೇ ಇಲ್ಲ' ಅನ್ನೋ ಉದ್ಗಾರಗಳು ಆಗಾಗ ಗೃಹಿಣಿಯರ, ಹೆಂಗಸರ ಬಾಯಿಂದ ಹೊರಬರುವುದು. ಮಹಿಳೆಯರಿಗೆ ದೊರಕುವ ಸಮಯ, ಅದನ್ನು ಕಳೆಯಲು ಅವರು ಈ ಕಾದಂಬರಿಗಳನ್ನು ಬರೆಯುವ – ಓದುವ ಹವ್ಯಾಸವನ್ನು ರೂಢಿಸಿಕೊಂಡಿರುವ ಸಂಗತಿ, ಹಗಲುಗನಸುಗಳನ್ನು ಸೃಷ್ಟಿಮಾಡುತ್ತ ಭ್ರಾಮಕ ಲೋಕದಲ್ಲಿ ವಿಹರಿಸುವಿಕೆ – ಒಂದು ರೀತಿಯಲ್ಲಿ ಆರೋಗ್ಯಕರವಾದ ತಾತ್ಕಾಲಿಕ ಹಾದಿ. ಏಕೆಂದರೆ ಇದೊಂದು ಹಗುರಾಗುವ ಪ್ರಕ್ರಿಯೆ. ತೀರಾ ಹೀಗಾಗದೆ ಇದ್ದಾಗ, ಯಾವುದೇ ರೀತಿಯ ಹೊರದಾರಿಗಳು ಸಿಕ್ಕದಿದ್ದಾಗ, ಮಾನಸಿಕವಾಗಿ ಅಸ್ವಸ್ಥರಾಗುವ ಉದಾಹರಣೆಗಳೂ ಧಾರಾಳವಾಗಿವೆ.

ಹೀಗೆ ನಿರಂತರವಾಗಿ ಇಂಥದ್ದೊಂದು ಪರ್ಯಾಯ ಲೋಕವನ್ನು ಕಟ್ಟುವುದೇ ಮಹಿಳಾ ಬದುಕಾ, ಇಡೀ ಬದುಕು ಇಂಥ ಹಗಲುಗನಸುಗಳಲ್ಲಿ ಮುಗಿದುಹೋಗಬೇಕಾ, ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ, ಉತ್ತರ ಈ ಮಾದರಿಯ ಕನಸುಗಾರಿಕೆಯನ್ನು ದಾಟಿ ವಾಸ್ತವವನ್ನು ಎದುರಿಸುವ ಛಾತಿ ಬೆಳೆಸಿಕೊಳ್ಳಬೇಕು ಎಂಬುದೇ ಆಗಿದೆ. ಕನ್ನಡದ ಸಂದರ್ಭದಲ್ಲೇ ಮಹಿಳಾ ಸಾಹಿತ್ಯ ಅನುಕರಣಾ ವಿಧಾನದಿಂದ ಕೊಂಚ ಮುನ್ನಡೆದು ವಿದ್ಯಾಭ್ಯಾಸದಿಂದ ಉಂಟಾದ ತಿಳುವಳಿಕೆ, ಸ್ವಪ್ರಜ್ಞೆಯ ಅರಿವು, ಸಾಹಿತ್ಯ ಚಳುವಳಿಗಳ ಪ್ರಭಾವ,

ಸ್ತ್ರೀವಾದಿ ಚಳುವಳಿಯ ಹಿನ್ನೆಲೆ – ಇವುಗಳ ಮುಖಾಂತರ ಮಹಿಳಾ ಅಭಿವ್ಯಕ್ತಿಯ ಎಳೆಗಳನ್ನು ಗಟ್ಟಿಮಾಡುತ್ತಿರುವುದನ್ನು ಕಾಣಬಹುದು. ಮಹಿಳಾ ಅಭಿವ್ಯಕ್ತಿ ಇಂದು ಕಾವ್ಯ, ಕತೆ, ಹರಟೆ, ಸಂಶೋಧನೆ, ನಾಟಕ ರಂಗ, ಸಮೂಹ ಮಾಧ್ಯಮಗಳಾದ ಟಿ.ವಿ, ರೇಡಿಯೋ ಚಿತ್ರಕಲೆ, ಸಂಗೀತ, ನೃತ್ಯ, ಅಭಿನಯ – ಗಳಲ್ಲಿ ವಿಸ್ತರಗೊಂಡು ವ್ಯಕ್ತವಾಗುತ್ತಿದೆ.

'ಇಲೇನ್ ಶೋ ಆಲ್ಟರ್' ಹೇಳುವ ಎರಡನೆಯ ಹಂತ ಯಜಮಾನ ಸಂಸ್ಕೃತಿಯ ವ್ಯವಸ್ಥೆಯನ್ನು ಮತ್ತು ಮಾನದಂಡಗಳನ್ನು ಪ್ರಶ್ನಿಸುವ ತಿಳುವಳಿಕೆಯ ಹಂತ. ಕನ್ನಡದಲ್ಲಿನ ಮಹಿಳಾ ಕಾವ್ಯವನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು.

## ೪.೨ ಕನ್ನಡ ಕಾವ್ಯದಲ್ಲಿ ಮಹಿಳೆ

ಹಾಡು ಮಹಿಳೆಯ ಸಹಜ ಅಭಿವ್ಯಕ್ತಿ, ಅದನ್ನವಳು 'ಅದಕೂ ಇದಕೂ ಎದಕೂ' ಆಗಿ ಬಳಸಿದವಳು. ಜನಪದ ಲೋಕದಲ್ಲಿ ಇವತ್ತಿಗೂ, ಗಂಟೆಗಟ್ಟಲೇ ಕುಳಿತು ಹಾಡುವ ಹಾಡುಗಾರ್ತಿಯರನ್ನು ಗಮನಿಸಿದರೆ ಈ ಮಾತು ಅರ್ಥವಾದೀತು. ಮುಂಜಾನೆದ್ದು ಎಲ್ಲರನ್ನು ನೆನೆದು, ಬಸವಣ್ಣನ ಸೇವೆ ಮಾಡಿ, ಬೀಸುಕಲ್ಲಿನ ಮುಂದೆ ಕುಳಿತು ಹಾಡುವ ಆಕೆಗೆ ಹಾಡು ಬಿಡುಗಡೆಯ ಹಾದಿಯೂ ಹೌದು. ಆದರೆ ತನ್ನ ಬಿಡುವಿಲ್ಲದ ದುಡಿಮೆಯ ನಡುವೆ ಕೂತು ಹಾಡುವ ಬಿಡುವು ಇಲ್ಲ. ಆದ್ದರಿಂದಲೇ ಕುಟ್ಟುವಾಗ, ಬೀಸುವಾಗ, ಪೂಜಿಸುವಾಗ ಹಾಡುವ ಹಾಡುಗಳಲ್ಲಿ ಅವಳ ಲೋಕದ ನೋವು–ನಲಿವುಗಳನ್ನೇ ಹಾಡಾಗಿಸುತ್ತಾಳೆ. ಮಹಿಳೆಯ ಅಭಿವ್ಯಕ್ತಿಯ ನೆಲೆಗಳು ಜನಪದ ಸಂದರ್ಭದಲ್ಲಾಗಬಹುದು, ಶಿಷ್ಟ ಸಂದರ್ಭದಲ್ಲಾಗಬಹುದು ತನ್ನ ಒಳಗಿನ ತುಡಿತಗಳನ್ನು ತಡೆಹಿಡಿಯಲಾಗದೆ ಅವು ಸಂದರ್ಭಕ್ಕನುಗುಣವಾಗಿ ಪ್ರಕಟಗೊಳ್ಳುತ್ತವೆ. ಹೆಂಗಸರು ನಿಗದಿತ ಸಂದರ್ಭಗಳಲ್ಲಿ; ಮದುವೆ, ಮುಂಜಿವೆಗಳಲ್ಲಿ, ಹೆಣ್ಣಿನ ಬದುಕಿನ ಅನೇಕ ಘಟ್ಟಗಳಲ್ಲಿ (ನೆರೆಯುವುದು, ಮದುವೆ, ಬಸಿರು............ಇತ್ಯಾದಿ) ಹಾಡುವ ಹಾಡುಗಳು ಹೆಂಗಸರ ಹಾಡುಗಳು ಎಂದೆನ್ನಿಸಿಕೊಳ್ಳುತ್ತವೆ. ಅವಕ್ಕೆ ಹೊರಗೆ ಸಭೆಯಲ್ಲಿ ಮಾನ್ಯತೆಯಿಲ್ಲ. ಇವುಗಳಿಗೆ ಹೊರತಾಗಿ ಆಕೆ ಭಕ್ತಿಗೀತೆಗಳನ್ನು ಹಾಡಬಹುದಿತ್ತಷ್ಟೇ. ಈ ಮಿತಿಯಲ್ಲೆ ಆಕೆ ತನ್ನ ಸಾಮರ್ಥ್ಯವನ್ನು ಪ್ರತಿಮೆಯಾಗಿಸಿ ಹಾಡುತ್ತಾಳೆ, ಬರೆಯುತ್ತಾಳೆ. ಈ ಕಾರಣದಿಂದಲೇ ಬಂಧನ – ಬಿಡುಗಡೆಯ ನೆಲೆಗಳು ಮಹಿಳಾ ಕಾವ್ಯದ ಮುಖ್ಯ

ಸಂಗತಿಗಳಾಗಿವೆ. ಗದ್ಯದಲ್ಲಿ ಸಿಕ್ಕದ ಅಭಿವ್ಯಕ್ತಿ ಸ್ವಾತಂತ್ರ್ಯ ಕಾವ್ಯದಲ್ಲಿ ಸ್ವಲ್ಪಮಟ್ಟಿಗಾದರೂ ದಕ್ಕುತ್ತದೆ. ಭಾಷೆ ಇಲ್ಲಿ ಕೊಂಚ ಭಿಡೆ ಬಿಟ್ಟು ಪ್ರತಿಮೆಗಳಲ್ಲಿ ಅಭಿವ್ಯಕ್ತಿಗೊಳ್ಳುತ್ತದೆ. ಸ್ವಪ್ರಜ್ಞೆಯ ಸಮರ್ಥನೆಯ ಯತ್ನ ಕಾವ್ಯಗಳಲ್ಲಿ ಕಾಣುವ ಅಂಶ. ಬಿಚ್ಚಿಡುವ ಗದ್ಯಕ್ಕಿಂತಲೂ, ಪ್ರತಿಮೆಗಳಲ್ಲಿ, ಮುಚ್ಚಿಟ್ಟು ಹೇಳುವ ಸಂಗತಿಗಳು ಮಹಿಳೆಗೆ ತನ್ನನ್ನು ತೋಡಿಕೊಳ್ಳುವಲ್ಲಿ ಹೆಚ್ಚು ಸಹಕಾರಿಯಾಗುತ್ತವೆ.

ಕನ್ನಡದಲ್ಲಿ ಅಕ್ಕನಿಂದ ಮೊದಲ್ಗೊಂಡು ಶುರುವಾದ ಕಾವ್ಯಾಭಿವ್ಯಕ್ತಿ ಹೆಣ್ಣಿನ ಭಾವಲೋಕವನ್ನು ಬಿಚ್ಚಿಡುವುದರಲ್ಲಿ ಪ್ರಯತ್ನಿಸುತ್ತಲೇ ಇದೆ. ಅಕ್ಕ ಬಹಳ ಸಮರ್ಥವಾಗಿ ಈ ಕಾರ್ಯವನ್ನು ಪ್ರಾರಂಭಿಸಿದಳು. ಮಾರ್ಗ ಕಾವ್ಯವಾಗಲಿ, ಜನಪದ ಕಾವ್ಯವಾಗಲಿ ತಮ್ಮ ರಚನೆಯ ಸಂದರ್ಭದಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳನ್ನು ಪ್ರಕಟಿಸಿಯೇ ಇವೆ. ಮಹಿಳೆಯ ಆರೋಪಿತ ಸ್ತ್ರೀ ಮೌಲ್ಯಗಳು, ಅದರಿಂದುಂಟಾದ ಗೊಂದಲಗಳು, ನಿರ್ಬಂಧನೆಗಳು ಮಹಿಳಾ ಸಾಹಿತ್ಯವನ್ನು ಪ್ರಭಾವಿಸಿವೆ. ಅಕ್ಕನಂಥಾ ಚೈತನ್ಯವನ್ನೇ ಅಲುಗಾಡಿಸಿದ ಸಾಮಾಜಿಕತೆಯ ಬಂಧನವನ್ನು ಹಿಂದಿನ ಅಧ್ಯಾಯದಲ್ಲಿ ವಿವರವಾಗಿ ಗಮನಿಸಿದ್ದೇವೆ. ಬಹುಪಾಲು ಮಹಿಳಾ ಕಾವ್ಯ; ಭಕ್ತಿ ಪ್ರಧಾನವಾದುದರ ಹಿನ್ನೆಲೆ, ಹದಿಬದೆಯ ಕಾವ್ಯಗಳು ಹುಟ್ಟಿಕೊಂಡಿದುದರ ಹಿನ್ನೆಲೆಯು ಇದೇ. ನವೋದಯದ ಸಂದರ್ಭದಲ್ಲಿ ಮೂಡಿ ಬಂದ ಮಹಿಳಾ ಕಾವ್ಯ ಮುಂದೆ ನವ್ಯ, ದಲಿತ-ಬಂಡಾಯ ಚಳುವಳಿಗಳ ಸಂದರ್ಭದಲ್ಲಿ ತನ್ನತನವನ್ನು ಪ್ರಕಟಿಸಿಕೊಳ್ಳುವ ಪ್ರಯತ್ನವನ್ನು ಮಾಡಿತು. "ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ." ಎಂಬ ಅರಿವು ಕಾವ್ಯಾಭಿವ್ಯಕ್ತಿಯಲ್ಲಿ ಮೂಡಿತು. "ನಾನೇಕೆ ಬಳ್ಳಿ ನೀನೇಕೆ ಮರ? ಎಂದು ಕಾವ್ಯದಲ್ಲಿ ಕೇಳಿಕೊಂಡರೂ, 'ಸ. ಉಷಾ ತಮ್ಮ'ಅಂತರಂಗ' ಕವನದಲ್ಲಿ ಮಹಿಳೆಯ ಅವಲಂಬನೆಯ ಬದುಕಿನ ವಾಸ್ತವವನ್ನು ಹೇಳುತ್ತಾರೆ.

"ನಾನೊಂದು ಬದನೆಯ ಬೀಜ
ಗಾಳಿಯ ಜೊತೆ ತೇಲುವದೆನಗೆ ಸಹಜ
ನನಗಿಲ್ಲ ಇರಲಿಲ್ಲ
ಈ ನೆಲದ ಯೋನಿ ಸೀಳಿ ಬೇರಿಳಿಸುವ ತಾಕತ್ತು"[೨೦]

ಮಹಿಳಾ ಅಭಿವ್ಯಕ್ತಿಯನ್ನು ಆಧುನಿಕ ಕಾವ್ಯದ ಸಂದರ್ಭದಲ್ಲಿ ಗಮನಿಸುವಾಗ ಕಾವ್ಯದಲ್ಲಿ ಪ್ರಕಟಗೊಂಡ "ಏರುದನಿ" ವಾಸ್ತವದಲ್ಲಿ ಇಲ್ಲದ್ದನ್ನು ಗಮನಿಸಬೇಕು. ಮಹಿಳೆಯ ಅಭಿವ್ಯಕ್ತಿ ಕಾವ್ಯದ ಸಂದರ್ಭದಲ್ಲಿ ಆಗಲಿ ಕತೆಯ ಸಂದರ್ಭದಲ್ಲಿ ಆಗಲಿ, ಕಾದಂಬರಿಯ ಸಂದರ್ಭದಲ್ಲಿ ಆಗಲಿ ಬಿಡುಗಡೆಯ ಸಾಧನವಾಗಿದೆಯಾ ಎಂಬ ಪ್ರಶ್ನೆಗೆ ಉತ್ತರಿಸಿಕೊಳ್ಳುವುದು ಮುಖ್ಯವಾಗುತ್ತದೆ. ಹಾಗಾಗದೆ ಇದ್ದಾಗ, ಅದಕ್ಕೆ ಕಾರಣಗಳು ವೈಯಕ್ತಿಕ ನೆಲೆಯವಾಗದೆ, ಸಾಮಾಜಿಕ ನೆಲೆಯವಾಗಿರುವದನ್ನು ಗಮನಿಸಬಹುದು. ಸ್ತ್ರೀವಾದ ಹೀಗೆ ಪ್ರಜ್ಞೆ ಮತ್ತು ಪರಿಸರ ಎರಡರಲ್ಲೂ ಬಂಧನಕ್ಕೆ ಒಳಗಾದ ಮಹಿಳೆಯ ಸಂಗತಿಗಳನ್ನೇ, ತಾತ್ವಿಕತೆಯ ಹಿನ್ನೆಲೆಯಲ್ಲಿ ಮತ್ತು ಚಳುವಳಿಯ ಸಕ್ರಿಯತೆಯಲ್ಲಿ ಗಮನಿಸುತ್ತದೆ ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತದೆ. ಕಾವ್ಯದಲ್ಲಿ ಮಹಿಳೆಯ ಅಭಿವ್ಯಕ್ತಿ ವಾಸ್ತವತೆಯನ್ನು ಎದುರಿಸುವ ಆತ್ಮ ವಿಶ್ವಾಸವನ್ನು ಪ್ರಕಟಿಸಿರುವುದನ್ನು ಗಮನಿಸಬಹುದು.

"ನೂರು ಸಾವು ಸಾಯುತ್ತ
ನೂರು ಮೊಳಕೆ ಒಡೆಸುತ್ತೇವೆ"[೨೧]

ಎಂಬಲ್ಲಿ ಇಂಥ ಆತ್ಮವಿಶ್ವಾಸವನ್ನು ಗುರುತಿಸಬಹುದು. ಮಹಿಳಾ ಅಸ್ಮಿತೆ ಇತ್ತೀಚಿನ ಕೆಲವು ಕವಿಯತ್ರಿಯರಲ್ಲಿ ಗಾಢವಾಗಿ ಒಡಮೂಡುತ್ತಿರುವುದನ್ನು ಗಮನಿಸಬೇಕು. ಮಹಿಳೆಯನ್ನು ಹಿಂಡಿ ಹಿಪ್ಪೆ ಮಾಡುವ ಸಂದರ್ಭದಲ್ಲೂ ತನ್ನನ್ನು ತಾನು ಕಳೆದುಕೊಳ್ಳದೆ, ಮರುಹುಟ್ಟು ಪಡೆಯುವ ಅಭೀಪ್ಸೆಯನ್ನು ಪ್ರತಿಭಾ ನಂದಕುಮಾರರ ಕಾವ್ಯ ವ್ಯಕ್ತಪಡಿಸುತ್ತದೆ.

"ನಾನು ಕಣಿವೆಯಲ್ಲಿ ಗಂಭೀರವಾಗಿ
ಹರಿಯುತ್ತಿರುವ ನದಿ"[೨೨]
"ನಾನು ಸುಟ್ಟ ನಂತರವೂ ಚಿಮ್ಮುವ ಚಿಗುರು"[೨೩]

ತಮ್ಮ ಮುಂದಿನ ಇನ್ನೊಂದು ಕವನದಲ್ಲೂ ಪ್ರತಿಭಾ ನಂದಕುಮಾರರವರು ಇಂಥದ್ದೆ ಚಲನಶೀಲತೆಯನ್ನು ಹಿಡಿದಿಡುತ್ತಾರೆ.

"ಬಾಳೆಯಾದರೆ ಕತ್ತರಿಸಿದರೂ
ಪುಟಿಪುಟಿದು ನೂರೆಂಟು ಕಿಡಿಗಳು.
. . . . . . . . . . .. . . . . . .

ಮಾವು, ಹಲಸು, ತೇಗವಾದರೆ
ನೆಟ್ಟಗೆ ಆಕಾಶಕ್ಕೆ ಮುಖಮಾಡಿ
ಕುರ್ಚಿ ಮೇಜು ಮಂಚವಾಗಿ ಪರಿವರ್ತಗೊಂಡು
ನಾನು ಸಾಯುವುದಿಲ್ಲ
ಮುಟ್ಟಿದ ತಕ್ಷಣ ಗೊತ್ತಾಗಿ ಬಿಡುತ್ತದೆ
ಇದು ಹೆಣ್ತನದ ಪರಾಕಾಷ್ಠೆ"[೨೪]

ಇಂಥ ಆತ್ಮವಿಶ್ವಾಸದೊಂದಿಗೆ, ಹೊಸ ಪ್ರಯೋಗಗಳಂದ ಕಾವ್ಯಾಭಿವ್ಯಕ್ತಿಯಲ್ಲಿ ಮಹಿಳೆ ತೊಡಗಿಸಿಕೊಂಡಿದ್ದಾಳೆ. ದೇಸೀ ಪರಂಪರೆಯ ಹುಡುಕಾಟದೊಂದಿಗೆ, ಹೊಸ ಬಿಡುಗಡೆಯ ದಾರಿಗಳನ್ನು ನಿರ್ಮಾಣ ಮಾಡಿಕೊಳ್ಳುವ ಪ್ರಯತ್ನದಲ್ಲಿರುವುದನ್ನು ಗಮನಿಸಬಹುದು. ಮಹಿಳಾ ಕಾವ್ಯವನ್ನು ಕುರಿತಂತೆ "ಸೀಮಿತ ಅರ್ಥದ ವೈಯಕ್ತಿಕ ನೆಲೆಯ ಕಾವ್ಯದಿಂದ ಹೊರಟ ಮಹಿಳಾ ಕಾವ್ಯ, ವಸ್ತು ವೈಶಾಲ್ಯಕ್ಕೆ ತೆರೆದುಕೊಳ್ಳಲಿಲ್ಲ" ಎನ್ನುವ ಮಾತನ್ನೇ ಮಿಥ್ ಎಂದು ಗುರುತಿಸಿ, 'ತಾರಿಣಿ ಶುಭದಾಯಿನಿ'ಯವರು "ಸ್ತ್ರೀಯ ಸೃಜನಶೀಲ ನೆಲೆಗಳು, ಅವರು ಸೃಷ್ಟಿಸಿಕೊಳ್ಳುವ ಮಾದರಿಗಳೇ ಭಿನ್ನವಾಗಿರುವಾಗ, ಅವರ ರಚನೆಗಳ ಅನನ್ಯತೆಯನ್ನು ಗ್ರಹಿಸದ ಪರಿಣಾಮ ಇಂತಹ ಅಭಿಪ್ರಾಯಗಳು ಹುಟ್ಟುಬಹುದು"[೨೫] ಎಂದು ಸರಿಯಾಗಿಯೇ ಗ್ರಹಿಸಿದ್ದಾರೆ.

ಹೀಗೆ ಕಾವ್ಯದ ಹಾದಿಯಲ್ಲಿ ತನ್ನ ಧ್ವನಿಯನ್ನು ಒಗ್ಗೂಡಿಸಿಕೊಳ್ಳುತ್ತಿರುವ ಮಹಿಳಾ ಅಭಿವ್ಯಕ್ತಿ, ತನ್ನ ಸೃಜನಶೀಲತೆಯ ಹಂತದಲ್ಲಿಯೂ ತನ್ನ ಅಸ್ಮಿತೆಯನ್ನು ಕಂಡುಕೊಳ್ಳಬೇಕಾಗಿದೆ. ಆ ಮೂಲಕ ಪಾರಂಪರಿಕ ಸಾಹಿತ್ಯ ವಿಮರ್ಶೆ ಒಡ್ಡುತ್ತಿರುವ ಮಾನದಂಡಗಳ ಅಡ್ಡಗಾಲುಗಳನ್ನು ದಾಟುವಲ್ಲಿ ತನ್ನ ಆತ್ಮವಿಶ್ವಾಸವನ್ನು ಒಗ್ಗೂಡಿಸಿಕೊಳ್ಳಬೇಕಾಗಿದೆ. ಹಾಗಾದಾಗ ಮಾತ್ರ ಹಿಂದೆ ಅನೇಕ ಸಂಕಷ್ಟಗಳ ನಡುವೆ ತಮ್ಮನ್ನು ಅಭಿವ್ಯಕ್ತಿಸಿಕೊಂಡ ಮಹಿಳೆಯರ ಮತ್ತು ಇಂದು ತಮ್ಮನ್ನು ಅಭಿವ್ಯಕ್ತಿಸುತ್ತಿರುವವರ ಶ್ರಮ ಸಾರ್ಥಕವಾಗುತ್ತದೆ.



## ಅಡಿಟಿಪ್ಪಣಿಗಳು

೧) 'A literature of their own : British Women novelists form Brante to lessing, Elaine showwalter, page no.90

2) 'A literature of their own : British Women novelists form Brante to lessing, Elaine showwalter, page no.89

೩) ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ)ಎಚ್.ಎಸ್. ಶ್ರೀಮತಿ. ಪುಟ ೪.

೪) ಭಾರತೀಯ ಕಾವ್ಯ ಮಿಮಾಂಸೆ, ತೀ.ನಂ.ಶ್ರೀಕಂಠಯ್ಯ ಪುಟ ೧೧೯.

೫) ಭಾರತೀಯ ಕಾವ್ಯ ಮಿಮಾಂಸೆ, ತೀ.ನಂ.ಶ್ರೀಕಂಠಯ್ಯ ಪುಟ ೧೧೮.

೬) ನವ್ಯತೆ ಪಾಶ್ಚಾತ್ಯ ಸಾಹಿತ್ಯದಲ್ಲಿ, ನರಹಳ್ಳಿ ಬಾಲಸುಬ್ರಹ್ಮನ್ಯ, ಪುಟ ೯

೭) ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ ಲೇ, ಜನಪ್ರಿಯ ಸಾಹಿತ್ಯ : ಆಧುನಿಕತೆ ಮತ್ತು ಅಭಿರುಚಿ, ಬಿ. ಭಾಸ್ಕರರಾವ್ ಪುಟ ೨೨

೮) ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ ಲೇ, ಜನಪ್ರಿಯ ಸಾಹಿತ್ಯ : ಆಧುನಿಕತೆ ಮತ್ತು ಅಭಿರುಚಿ, ಬಿ. ಭಾಸ್ಕರರಾವ್ ಪುಟ ೨೩

೯) ಪ್ರಜಾವಾಣಿ, ದೀಪಾವಳಿ ಸಂಚಿಕೆ, ಕೆ.ವಿ. ನಾರಾಯಣ: ೧೯೯೧.

೧೦) ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ ಲೇ, ಜನಪ್ರಿಯ ಸಾಹಿತ್ಯ : ಆಧುನಿಕತೆ ಮತ್ತು ಅಭಿರುಚಿ, ಬಿ. ಭಾಸ್ಕರರಾವ್ ಪುಟ ೨೫

೧೧) ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ ಲೇ, ಜನಪ್ರಿಯ ಸಾಹಿತ್ಯವನ್ನು ಕುರಿತು, ಕೆ.ವಿ. ನಾರಾಯಣ ಪುಟ ೨

೧೨) ಅಮೂರ್ತತೆ ಮತ್ತು ಪರಿಸರ, ರಾಜೇಂದ್ರ ಚೆನ್ನಿ, ಪುಟ ೫೭

೧೩) ಅಮೂರ್ತತೆ ಮತ್ತು ಪರಿಸರ, ರಾಜೇಂದ್ರ ಚೆನ್ನಿ, ಪುಟ ೫೯

೧೪) ವಿಚಯ, ಬಿ.ಎನ್. ಸುಮಿತ್ರಾಬಾಯಿ, ಪುಟ ೧–೨

೧೫) ವಿಚಯ, ಬಿ.ಎನ್. ಸುಮಿತ್ರಾಬಾಯಿ, ಪುಟ ೪–೫

೧೬) ಭಾರತೀಯ ಸ್ತ್ರೀವಾದ, (ಸಂ) ಮನು ಚಕ್ರವರ್ತಿ, ಪುಟ ೧೪

೧೭) ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ)ಎಚ್.ಎಸ್. ಶ್ರೀಮತಿ, ಪುಟ ೩೬೭.

18) An interdiction to cultural theory and popular culture, John Storey, page no. 136.

೧೯) An interdiction to cultural theory and popular culture, John Storey, page no. 150.

೨೦) ತೊಗಲು ಗೊಂಬೆಯ ಆತ್ಮಕಥೆ, 'ಅಂತರಂಗ' (ಕವನ) ಸ. ಉಷಾ

೨೧) ಮತ್ತೆ ಚಿಗುರುವೆವು ನಾವು, (ಕವನ) ಶೀಲಾ ಅಂಕೋಲಾ

೨೨) ಸಾಧ್ಯವೇ ಇಲ್ಲ, (ಕವನ) ಪ್ರತಿಭಾ ನಂದಕುಮಾರ

೨೩) ಹೆಣ್ಣು ಕಾಡು, (ಕವನ) ಪ್ರತಿಭಾ ನಂದಕುಮಾರ

೨೪) ಹಿಮದ ಹಾದಿ,(ಕವನ) ಪ್ರತಿಭಾ ನಂದಕುಮಾರ

೨೫) ಹೆಡೆಯಂತಾಡುವ ಸೊಡರು, ಆರ್. ತಾರಿಣಿ ಶುಭದಾಯಿನಿ, ಪುಟ ೩೫

## ಅಧ್ಯಾಯ–ಐದು

# ಮಹಿಳಾ ಅಭಿವ್ಯಕ್ತಿಯ ನೆಲೆಗಳು – ಆಯ್ದ ಜನಪ್ರಿಯ ಕಾದಂಬರಿಕಾರ್ತಿಯರ ಕಾದಂಬರಿಗಳಲ್ಲಿ

## ಅಧ್ಯಾಯ-ಐದು

# ಮಹಿಳಾ ಅಭಿವ್ಯಕ್ತಿಯ ನೆಲೆಗಳು – ಆಯ್ದ ಜನಪ್ರಿಯ ಕಾದಂಬರಿಕಾರ್ತಿಯರ ಕಾದಂಬರಿಗಳಲ್ಲಿ

### ೫.೧ ಪ್ರಸ್ತಾವನೆ

ಮಹಿಳಾ ಸಾಹಿತ್ಯಾಭಿವ್ಯಕ್ತಿ ಪಾರಂಪರಿಕ ಚಿಂತನೆಗಳ ನೆಲೆಯಲ್ಲಿ ಹೇಗೆ ತಿರಸ್ಕೃತಗೊಳ್ಳುತ್ತದೆ ಎನ್ನುವುದನ್ನು ಹಿಂದಿನ ಅಧ್ಯಾಯಗಳಲ್ಲಿ ಗುರುತಿಸಿಕೊಳ್ಳಲಾಗಿದೆ. ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಅಂಚಿನ ಬದುಕನ್ನು ಬದುಕುತ್ತಿರುವ ಮಹಿಳೆ ತನ್ನ ಅಭಿವ್ಯಕ್ತಿಯಲ್ಲಿ ಅದನ್ನು ಪ್ರಕಟಗೊಳಿಸುವ ಪ್ರಕ್ರಿಯೆ ಸಹಜವೇ. ಹಾಗೇ ಪ್ರಕಟಗೊಂಡಿದ್ದನ್ನು ಓದುವ ಓದುಗ ವರ್ಗವೂ ಅಂಚಿನ ಬದುಕನ್ನು ಬದುಕುತ್ತಿರುತ್ತದೆ ಎಂಬ ಅಂಶವನ್ನು ಗ್ರಹಿಸಿಕೊಳ್ಳಲಾಗಿದೆ. 'ಹೆಂಗಸರು ಬರೆಯುವುದು ಹೆಂಗಸರಿಗಾಗಿ, ಗಂಡಸು ಬರೆಯುವುದು ಎಲ್ಲರಿಗಾಗಿ' ಎಂಬ ದೃಷ್ಟಿಕೋನ ವಿಮರ್ಶಕರಲ್ಲಿದೆ. ಕಾದಂಬರಿಗಳನ್ನು ಅಧ್ಯಯನ ಮಾಡುವಾಗ ಗಮನಿಸಬೇಕಾದ ಹಿನ್ನೆಲೆಯನ್ನು ಕುರಿತಂತೆ ಶಿವರಾಮ ಪಡಿಕ್ಕಲ್ ಅವರು ಮಾತುಗಳು ಇವು ...... "ಕಾದಂಬರಿಯ ಹುಟ್ಟನ್ನು ತಿಳಿಯಲು ಅದು ಹುಟ್ಟಿರುವ ಚಾರಿತ್ರಿಕ ಸನ್ನಿವೇಶವನ್ನು ಮಾತ್ರವಲ್ಲ ಕಾದಂಬರಿಯು ಯಾವ ಸಮುದಾಯ (Social group) ದಿಂದ ರೂಪು ತಳೆದಿದೆಯೋ ಆ ಸಾಮಾಜಿಕ ವರ್ಗದ ವಿಶ್ಲೇಷಣೆಯನ್ನು ಮಾಡಬೇಕು, ಇದನ್ನೇ ಇನ್ನೊಂದು ಮಾತಿನಲ್ಲಿ ವಿವರಿಸುವುದಾದರೆ ಕಾದಂಬರಿಯನ್ನು ನಾವು ಅದರ ಸಾಂಸ್ಕೃತಿಕ ನಿರ್ದಿಷ್ಟತೆಯಲ್ಲಿಯೇ ಗುರುತಿಸಬೇಕು".[೧] ಎನ್ನುವ ಮಾತುಗಳು ಕಾದಂಬರಿಗಳನ್ನು ಗಮನಿಸುವಾಗ ಅವುಗಳ ಸಾಂಸ್ಕೃತಿಕ, ಸಾಮಾಜಿಕ, ನೆಲೆಗಳು ಮುಖ್ಯವಾಗುತ್ತವೆ ಎಂಬುದನ್ನು ಹೇಳುತ್ತದೆ.

ಮಹಿಳಾ ಕಾದಂಬರಿಗಳನ್ನು ಗಮನಿಸುವಾಗಲೂ ಈ ಅಂಶಗಳು ಮುಖ್ಯವಾಗುತ್ತವೆ. ಏಕೆಂದರೆ ಮಹಿಳಾ ಬದುಕೇ ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಕಟ್ಟಿದ್ದು. ಈ ನೆಲೆಯನ್ನು ಅವರ ಕಾದಂಬರಿಗಳಲ್ಲೂ ಗಮನಿಸಬಹುದು. ಆದರೆ ಸದಾ ಕಾಲವೂ ಮಹಿಳೆ ತನ್ನ ಅಧೀನ ನೆಲೆಯನ್ನು ಒಪ್ಪಿಕೊಂಡೇ ನಡೆಯುತ್ತಾಳೆ ಎಂದಲ್ಲ. ತನ್ನ ಪ್ರತಿರೋಧವನ್ನು ಅನೇಕ ರೀತಿಗಳಲ್ಲಿ ವ್ಯಕ್ತಪಡಿಸಲು ಪ್ರಯತ್ನಿಸುತ್ತಾಳೆ. ಅದಕ್ಕಾಗಿ ಅನೇಕ ಪರ್ಯಾಯ ಮಾರ್ಗಗಳನ್ನು ಹುಡುಕುತ್ತಿರುತ್ತಾಳೆ. ಆ ಪ್ರತಿರೋಧಗಳು ಮಹಿಳೆಯ ನಿತ್ಯದ

ಸಂಗತಿಗಳಿಂದ ಹಿಡಿದು ಅವರ ಸೃಜನತೆಯ ಅಭಿವ್ಯಕ್ತಿಯ ನಾನಾ ರೂಪಗಳಲ್ಲಿಯೂ ಕಾಣಿಸಿಕೊಳ್ಳುತ್ತವೆ. ಪಿತೃಪ್ರಧಾನತೆ ತನ್ನನ್ನು ಗಂಭೀರ ತರ್ಕ, ವಿಚಾರ, ಕಾರ್ಯಕಾರಣ, ಸಂಸ್ಕೃತಿ...... ಇತ್ಯಾದಿಯಾಗಿ ಗುರುತಿಸಿಕೊಳ್ಳುವಾಗ ಅದಕ್ಕೆ ಪ್ರತಿಯಾಗಿ ಮಹಿಳೆ ತನ್ನ ಅಧೀನ ನೆಲೆಯಲ್ಲೇ ತನ್ನ ಪ್ರತಿಭಟನೆಗಳನ್ನು ತೋರುತ್ತಿರುತ್ತಾಳೆ. ಅವುಗಳಲ್ಲಿ ಕೆಲವು ಹೆಂಗಸರ ಸ್ವಭಾವ ಎಂದು ಪಿತೃಪ್ರಧಾನತೆ ಏನನ್ನು ಹೇಳುತ್ತಿರುತ್ತದೋ ಅದನ್ನೇ ಒಪ್ಪಿಡುವ ಮಾದರಿಯಲ್ಲಿ ಇರುತ್ತವೆ. ಅನೇಕ ಹೆಣ್ಣುಮಕ್ಕಳು ಸೀರೆ, ಒಡವೆ ಇತ್ಯಾದಿಗಳನ್ನು ಗಂಡನಿಂದ ಪಡೆದುಕೊಳ್ಳುವುದು ತಮ್ಮ ಹಕ್ಕು ಎಂಬಂತೆ ಪ್ರತಿಪಾದಿಸಿ ಹಟಮಾಡಿ ಅವುಗಳನ್ನು ಪಡೆದುಕೊಳ್ಳುತ್ತಾರೆ. ಸ್ವಾತಂತ್ರ್ಯವನ್ನು ಬಲಿಕೊಟ್ಟು ನಾನು ಬಾಳುತ್ತಿರುವುದಕ್ಕೆ ನೀನು ತೆರಬೇಕಾದ ಬೆಲೆ ಇದು ಎನ್ನುವ ಅಣಕಿನ ಧಾಟಿಯಲ್ಲಿರುತ್ತದೆ. ಉತ್ಪಾದಕ ನೆಲೆಯಿಂದಲೇ ದೂರವಿಟ್ಟಾಗ ಉಂಟಾಗುವ ಅರಕ್ಷತೆಯ ಭಾವ ಮಹಿಳೆಯನ್ನು ಸದಾ ಕಾಡುತ್ತಿರುತ್ತದೆ. ಆ ಭಾವವೇ ಅವಳ ಎಲ್ಲ ಕ್ರಿಯೆಗಳಲ್ಲೂ ವ್ಯಕ್ತವಾಗುತ್ತಿರುತ್ತದೆ. ಅವಳ ಹಠಮಾರಿತನ, ದುಂದುತನ, ಜುಗ್ಗುತನ........ ಇತ್ಯಾದಿಗಳು ಅದುಮಿಟ್ಟ ಅವಳ ಅಸುರಕ್ಷಿತ ನೆಲೆಯ ಅನೇಕ ರೂಪಗಳಾಗಿರುತ್ತವೆ. ಇವೆಲ್ಲಾ ಪ್ರಕ್ರಿಯೆಗಳು ಪ್ರಜ್ಞಾಪೂರ್ವಕ ನೆಲೆಯಲ್ಲಿ ನಡೆಯುತ್ತವೆ ಎಂದಲ್ಲ. ಅಪ್ರಜ್ಞಾಪೂರ್ವಕವಾಗಿಯೇ ಸಂಭವಿಸುವ ಈ ಸಂಗತಿಗಳು ಮಹಿಳೆಯರ ಸ್ವಭಾವವೆ ಆಗಿಬಿಟ್ಟಿರುವುದರ ಹಿನ್ನೆಲೆ ಮಾತ್ರ ಸಾಮಾಜೀಕರಣ ಪ್ರಕ್ರಿಯೆಯಲ್ಲಿದೆ. ಗಂಭೀರವಾದ ಸಂಗತಿಗಳಿಗೆ ವಿರುದ್ಧವಾಗಿ ಲಘುತ್ವವನ್ನು ಪ್ರಕಟಪಡಿಸುವುದು ಪ್ರತಿರೋಧದ ನೆಲೆಯೂ ಆಗಿರುತ್ತದೆ. ಏಕೆಂದರೆ '೧) ಘನತೆಯು ಲಘುವನ್ನು ಅಣಕಿಸುವಂತೆಯೇ ಲಘವೂ ಘನವನ್ನು ಅಷ್ಟೇ ಹಾಸ್ಯಾಸ್ಪದ ಸಂಗತಿಯಾಗಿ ಭಾವಿಸುವ ಸಾಧ್ಯತೆಗಳಿರುತ್ತವೆ. ೨)ಘನತೆಯು ಯಾವುದನ್ನು ಲಘುವೆಂದು ಪದೇ, ಪದೇ ಅಣಕಿಸುತ್ತಿರುತ್ತದೆ ಎಂದರೆ ಅದು ಆಂತರ್ಯದಲ್ಲಿ ಆ ಲಘುವನ್ನು ಕುರಿತಂತೆ ಹೊಂದಿರುವ ವಿಶೇಷ ಗಮನವನ್ನು ಸೂಚಿಸುವುದೇ ಆಗಿರುತ್ತದೆ"[೨] ಎಂಬ ಎಂ. ಉಷಾರವರ ಮಾತುಗಳನ್ನು ಇಲ್ಲಿ ಬಳಸಿಕೊಳ್ಳಬಹುದು. ಗಂಭೀರ ಸಾಹಿತ್ಯದ ಎದುರು ಮಹಿಳೆಯ ಸಾಹಿತ್ಯ ಲಘು ಸಾಹಿತ್ಯ ಎಂದು ಪರಿಗಣಿತವಾಗುತ್ತಿರುವಾಗಲೂ, ಪದೇ ಪದೇ ಅಂಥದ್ದೊಂದನ್ನು ಸೃಷ್ಟಿಸುತ್ತಲೇ ಇರುವ ಸಂಗತಿ ಇದನ್ನೇ ಹೇಳುತ್ತದೆ. ಭ್ರಮಲೋಕದ ರಚನೆಗಳು ಏಕಕಾಲಕ್ಕೆ ಅವಳ ಅಧೀನ ಬದುಕನ್ನು ಸಹ್ಯ ಮಾಡಿಕೊಳ್ಳಲು ಕಂಡುಕೊಳ್ಳುವ

ಹೊರದಾರಿಗಳು ಆಗಿರುವಂತೆ ಅವಳು ಪಿತೃಪ್ರಧಾನ ವ್ಯವಸ್ಥೆಯನ್ನು ಅಣಕಿಸಲು ಉಪಯೋಗಿಸಿಕೊಳ್ಳುವ ತಂತ್ರಗಳಾಗಿರುವ ಸಾಧ್ಯತೆಗಳನ್ನೂ ಅಲ್ಲಗಳೆಯುವಂತಿಲ್ಲ.

ಹೀಗೆ ಮಹಿಳೆ ಪುರುಷಾಧಿಕಾರಕ್ಕೆ ಎದುರಾಗಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳಬೇಕಾದ ಸಂದರ್ಭದಲ್ಲಿ ಹಲವು ರೀತಿಗಳಲ್ಲಿ ತನ್ನ ದಾರಿಗಳನ್ನು ಶೋಧಿಸಲು ಪ್ರಯತ್ನಿಸುತ್ತಾಳೆ. ಅವಳ ದಾರಿಗಳು ತನ್ನನ್ನು ಆವರಿಸಿಕೊಂಡಿರುವ ವ್ಯವಸ್ಥೆಗೆ ತೋರುವ ಪ್ರತಿಭಟನೆಯ ರೂಪದಲ್ಲಿರಬಹುದು, ಒಪ್ಪಿ ನಡೆಯುವ ಅಧೀನ ನೆಲೆಯದ್ದಾಗಿರಬಹುದು, ಇದ್ದದ್ದನ್ನೇ ಒಂದಿಷ್ಟು ಬದಲಾವಣೆ ಮಾಡಿಕೊಂಡು ಹೊಂದಿಕೊಂಡು ಬದುಕುವ ರಾಜಿಪ್ರಯತ್ನವಾಗಿರಬಹುದು. ಈ ಎಲ್ಲ ಕ್ರಿಯೆಗಳ ಮೂಲಕ ವ್ಯಕ್ತವಾಗುವ ಲೋಕವನ್ನು ನಾವು ಮಹಿಳಾ ಬದುಕಿನ ಬಹು ಮುಖ್ಯ ಆಕರಗಳೆಂದು ಗುರುತಿಸಿಕೊಳ್ಳಬೇಕಾಗುತ್ತದೆ. ಎಚ್.ಎಸ್. ಶ್ರೀಮತಿಯವರು "ಸೃಜನಶೀಲರಾದ ಮಹಿಳೆಯರು ಇಂತಹ ಸಂವೇದನೆಗಳಿಗೆ ಕೊಡುವ ಅಭಿವ್ಯಕ್ತಿಗಳು ಎಲ್ಲ ಮಹಿಳೆಯರ ಸಂವೇದನೆಗಳನ್ನೂ ಪ್ರತಿನಿಧಿಸುತ್ತವೆ. ಅವರಲ್ಲಿ ಹುಟ್ಟುವ ಪ್ರಶ್ನೆ, ಸಂದೇಹ, ಉತ್ತರ, ಪರ್ಯಾಯ ಮಾರ್ಗಗಳು, ತೋಚುವ ಬದುಕಿನ ತಂತ್ರಗಳು ಎಲ್ಲಕ್ಕೂ ಈ ಸೃಜನಶೀಲ ಅಭಿವ್ಯಕ್ತಿಗಳಲ್ಲಿ ಮಾದರಿಗಳನ್ನು ಕಾಣಬಹುದೆನ್ನಿಸುತ್ತದೆ"[೩] ಎನ್ನುವ ಮಾತುಗಳು ಈ ಅಂಶವನ್ನೇ ಸ್ಪಷ್ಟಪಡಿಸುತ್ತವೆ.

ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರು ತಮ್ಮ ಅಭಿವ್ಯಕ್ತಿಯ ಸಾಧ್ಯಾಸಾಧ್ಯತೆಗಳನ್ನು ಕಂಡು ಕೊಂಡದ್ದನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಿಕೊಳ್ಳಲಾಗಿದೆ. ಅಕ್ಕಮಹಾದೇವಿಯಿಂದ ಪ್ರಾರಂಭಗೊಂಡು ಇಂದಿನವರೆಗೂ ತನ್ನನ್ನು ಅಭಿವ್ಯಕ್ತಿಸಿಕೊಳ್ಳುತ್ತಿರುವ ಮಹಿಳೆಯ ಸೃಜನತೆ ತನ್ನ ಹಾದಿಯಲ್ಲಿನ ಅಡೆತಡೆಗಳಿಗೆ, ಮೂರು ರೀತಿಗಳಲ್ಲಿ ಸ್ಪಂದಿಸಿದೆ. ಅದನ್ನು ಸ್ತ್ರೀವಾದಿಗಳು ನಕಲಿನ ಹಂತ, ಅನುಕರಣೆಯ ಹಂತ, ಅಸ್ಮಿತೆಯ ಹಂತ ಎಂದು ಗುರುತಿಸಿದ್ದಾರೆ. ಅಕ್ಕ, ೩೩ ವಚನಕಾರ್ತಿಯರು.......... ಸಂಚಿಯ ಹೊನ್ನಮ್ಮ, ಶೃಂಗಾರಮ್ಮ......... ಹೆಳವನಕಟ್ಟೆ ಗಿರಿಯಮ್ಮ........... ಹೀಗೆ ಪ್ರಾರಂಭಗೊಂಡ ಮಹಿಳಾ ಅಭಿವ್ಯಕ್ತಿ ಇಪ್ಪತ್ತನೆಯ ಶತಮಾನದಲ್ಲಿ ಬಹು ಸಂಖ್ಯೆಯಲ್ಲಿ ತನ್ನನ್ನು ಪ್ರಕಟಗೊಳಿಸಿಕೊಂಡಿತು. ೧೮೮೭ ರಲ್ಲಿ ತಿರುಮಲಾಂಬ ಅವರಿಂದ ಪ್ರಾರಂಭಗೊಂಡ ಹೊಸಗನ್ನಡ ಮಹಿಳಾ ಸಾಹಿತ್ಯ ತನ್ನ ಪರಿಸರದಲ್ಲಿದ್ದ ಸುಧಾರಣಾವಾದಿಯ ಚಳುವಳಿಯ ಪ್ರಭಾವಕ್ಕೆ ಒಳಗಾಯಿತು. ಸುಧಾರಣಾವಾದಿಗಳು ಮಹಿಳಾ ಸಮಸ್ಯೆಗಳು ಎಂದು ಏನನ್ನು ಗುರುತಿಸಿದರೋ ಅವನ್ನು

ಮಹಿಳಾ ಸಾಹಿತ್ಯವೂ ಮುಖ್ಯ ಮಾಡಿಕೊಂಡಿತು. ಬರಹಗಾರ್ತಿಯರು ಬಾಲ್ಯವಿವಾಹ, ವಿಧವಾ ವಿವಾಹ, ವರದಕ್ಷಿಣೆ, ಸತೀಪದ್ಧತಿ, ಮುಂತಾದ ವಿವಾಹ ಕೇಂದ್ರಿತ ಸಮಸ್ಯೆಗಳನ್ನು ತಮ್ಮ ಕೃತಿಗಳಲ್ಲಿ ಮುಖ್ಯ ಮಾಡಿಕೊಂಡರು, ಅವುಗಳಿಗೆ ಪರಿಹಾರಗಳನ್ನು ಪುರುಷ ಚಿಂತನೆಯ ನೆಲೆಯಲ್ಲೇ ದೊರಕಿಸಿಕೊಟ್ಟರು. ಈಗಾಗಲೇ ಚರ್ಚಿತವಾಗಿರುವಂತೆ ಪ್ರಾರಂಭದ ಮಹಿಳಾ ಬರಹಗಾರರಲ್ಲಿ ಹೆಚ್ಚಿನವರು ವಿಧವೆಯಾಗಿರುವವರು. ಸ್ವತಃ ತಿರುಮಲಾಂಬ ಸಣ್ಣ ವಯಸ್ಸಿಗೆ ಈ ಸಮಸ್ಯೆಯನ್ನು ಎದುರಿಸಿದವರು. ತಮ್ಮ ಕೃತಿಗಳಲ್ಲಿ ವಿಧವಾ ವಿವಾಹಕ್ಕೆ ಮರುವಿವಾಹಕ್ಕೆ ತಿರುಮಲಾಂಬ ತೀವ್ರವಾಗಿ ಸ್ಪಂದಿಸಲಾರದಕ್ಕೆ ಮುಖ್ಯ ಕಾರಣವೇನೆಂದರೆ ಅದರ ಸುತ್ತಲಿನ ಸಾಮಾಜಿಕ ಪರಿಸರ, ಪಿತೃಪ್ರಧಾನ ನೆಲೆಯ ಅಧಿಕಾರದ ಪ್ರಭಾವಕ್ಕೆ ಒಳಗಾಗಿ ಚರ್ಚಿಸುವ ತಿರುಮಲಾಂಬ ತೀರಾ ಕ್ರಾಂತಿಕಾರ ಪಾತ್ರಗಳನ್ನು ಚಿತ್ರಿಸಲಾರರು. ಆದರೂ ವಿವಾಹದ ಇನ್ನಿತರ ಮಗ್ಗಲುಗಳನ್ನು, ಸಮಸ್ಯೆಗಳನ್ನು ಸಮಾಜ ಸಹಾನುಭೂತಿಯಿಂದ ನೋಡಬೇಕೆನ್ನುತ್ತಾರೆ. "ತಿರುಮಲಾಂಬ ಅವರು ಸಂಪಾದಕಿಯಾಗಿ, ಪ್ರಕಾಶಕಿಯಾಗಿ, ಸಾಹಿತಿಯಾಗಿ ನಡೆಸಿದ ಸಾಹಸಗಳು ಅವರ ಸಮರ್ಥ ವ್ಯಕ್ತಿತ್ವದ ನಿದರ್ಶನಗಳು ಹೌದು. ಇಲ್ಲಿ ಅವರು ಸಮಾಜದಲ್ಲಿ ಮಹಿಳೆಯರ ಬದುಕು ಎದುರಿಸುವ ಚಿಂತನೆಗಳನ್ನು ಬೆಳೆಸಿದರೆಂಬುದು ಒಂದು ಮುಖ್ಯವಾದ ಸಂಗತಿ. ಈ ಚಿಂತನೆಗಳು, ಅವು ಅಭಿವ್ಯಕ್ತವಾದ ಅವರ ಸಾಹಿತ್ಯ ರಚನೆಗಳು, ಸ್ಪಷ್ಟವಾಗಿ ಪುರುಷ ಚಿಂತನೆಯನ್ನು ಪ್ರಶ್ನಿಸಿದವು. ಮಹಿಳೆಯ ಸಮಸ್ಯೆಯ ಮೂಲ ಕಾರಣಗಳನ್ನು ಹಿಂಜರಿಯದೆ ಹೇಳಿದವು. ಅವುಗಳನ್ನು ಎದುರಿಸುವಲ್ಲಿ ಸ್ವತಃ ಮಹಿಳೆಯು ತಾಳಬೇಕಾದ ನಿಲುವು, ಧೈರ್ಯಗಳ ಬಗ್ಗೆ ಅರಿವು ಮೂಡಿಸಿದವು. ಸಮಾಜಕ್ಕೆ ಛೀಮಾರಿ ಹಾಕಿ ಬುದ್ಧಿಯನ್ನೂ ಹೇಳಿದವು. ಈ ಕೆಲವು ದಶಕಗಳಲ್ಲಿ ಛಲದ ದನಿಯಾಗಿ ಕೇಳಿಸತೊಡಗಿರುವ ಮಹಿಳಾ ಜಾಗೃತಿ, ಸ್ತ್ರೀವಾದ ಮೊದಲ ಹೊಳಹುಗಳನ್ನು ತಿರುಮಲಾಂಬ ಅವರು ಕನ್ನಡದಲ್ಲಿ ಕಾಣಿಸಿದರು"[೪] ಎಂದಿರುವ ಎಸ್.ಎಚ್. ಶ್ರೀಮತಿಯವರು ತಿರುಮಲಾಂಬ ಅವರು ಹೊಸಗನ್ನಡ ಮಹಿಳಾ ಸಾಹಿತ್ಯಕ್ಕೆ ಅತ್ಯಂತ ಸಮರ್ಥವಾಗಿ ಚಾಲನೆ ಕೊಟ್ಟಿದ್ದನ್ನು ಗುರುತಿಸುತ್ತಾರೆ. ಇವರ ಸಮಕಾಲೀನರು, ಕಿರಿಯ ಸಮಕಾಲೀನರು ಆದ ಸರಸ್ವತಿಬಾಯಿ ರಾಜವಾಡೆ, ಬೆಳಗೆರೆ ಜಾನಕಮ್ಮ, ಆರ್. ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ಹೆಚ್.ವಿ. ಸಾವಿತ್ರಮ್ಮ, ಶ್ಯಾಮಲಾದೇವಿ ಮುಂತಾದವರು ೧೯ನೆಯ ಶತಮಾನದ ಮೊದಲ ಭಾಗದ ಲೇಖಕಿಯರು. ಇವರುಗಳ ಕಾಲವನ್ನು ತಿರುಮಲಾಂಬಾ (೧೮೮೭) ಅವರಿಂದ ಮೊದಲಾಗಿ

೧೯೫೦ರ ವರಗಿನ ಲೇಖಕಿಯರು ಎಂದು ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಎಲ್.ಜಿ. ಮೀರಾ ಅವರು ಗುರುತಿಸಿದ್ದಾರೆ. ಅದನ್ನು ನಾವು ಮಹಿಳಾ ಅಭಿವ್ಯಕ್ತಿಯನ್ನು ಕಾಲ ಘಟ್ಟಗಳಲ್ಲಿ ಗುರುತಿಸುವಾಗ ೨೦ನೆಯ ಶತಮಾನದ ೫೦-೬೦ ರ ದಶಕಗಳಲ್ಲಿ ಇದ್ದ ಬರವಣಿಗೆ ಎಂದು ಗುರುತಿಸಬಹುದು.

ಈ ಕಾಲಘಟ್ಟದಲ್ಲಿ ಕನ್ನಡ ಮಹಿಳಾ ಸಾಹಿತ್ಯ ಇನ್ನೂ ಶೈಶವಾಸ್ಥೆಯಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತಿದ್ದ ಕಾಲ. ಈಗಾಗಲೇ ಸಾಹಿತ್ಯ ಕ್ಷೇತ್ರದಲ್ಲಿ ತನ್ನನ್ನು ಬಲವಾಗಿ ಬೇರೂರಿಸಿಕೊಂಡ ಪುರುಷ ಸಾಹಿತ್ಯದ ಮಾದರಿ ಅವರ ಕಣ್ಣೆದುರಿಗಿತ್ತು. ಬೇಂದ್ರೆ, ಕುವೆಂಪು, ಕಾರಂತ, ಮಾಸ್ತಿ ಮುಂತಾದವರು ಸಾಹಿತ್ಯದ ಕ್ಷೇತ್ರದಲ್ಲಿ ತಮ್ಮ ಅಸ್ಮಿತೆಯನ್ನು ಕಂಡುಕೊಂಡಿದ್ದರು. ಇವರ ಸಾಹಿತ್ಯ, ಜೊತೆಗೆ ಸುಧಾರಣಾವಾದಿ ಚಿಂತನೆಗಳು ಅಂದಿನ ಬರಹಗಾರ್ತಿಯರನ್ನು ಪ್ರಭಾವಿಸಿದ್ದವು. ತಮ್ಮನ್ನು ಆವರಿಸಿದ್ದ ಸಾಮಾಜಿಕತೆಯಿಂದ ಆಚೆ ಬರಲಾರದ ಅಂದಿನ ಕಾಲದ ಲೇಖಕಿಯರು ಮಹಿಳೆಗೆ ಸಮಸ್ಯೆಗಳಿವೆ ಎಂದು ಗುರುತಿಸಿದರೆ ವಿನಾ ಅವುಗಳಿಗೆ ಪರಿಹಾರವನ್ನು ಸೂಚಿಸಲಿಲ್ಲ, ಪುರುಷರ ಮೌಲ್ಯಗಳನ್ನೆ ತಮ್ಮ ಮೌಲ್ಯಗಳಾಗಿ ಸ್ವೀಕರಿಸಿದರು. ಸಾಹಿತ್ಯದ ಅಭಿವ್ಯಕ್ತಿ ಅವರ ಬಿಡುಗಡೆಯ ಶೋಧವೇನೂ ಆಗಿರಲಿಲ್ಲ. ಎಲ್.ಜಿ. ಮೀರಾ ಅವರು ಗುರುತಿಸುವಂತೆ, "ಸೃಜನಶೀಲತೆಯ ಒತ್ತಡ ತಾಳಲಾರದೆಯೋ, ಇಲ್ಲ ಶೀಘ್ರ ವೈಧವ್ಯದಿಂದ ಬಾಳಿನುದ್ದಕ್ಕೂ ಹಾಸಿಕೊಂಡಿದ್ದ ವೈಧವ್ಯವನ್ನು ಎದುರಿಸುವ ಉದ್ದೇಶದಿಂದಲೋ ಬರೆದವರೇ ಹೆಚ್ಚು. ತಿರುಮಲಾಂಬ, ಕಲ್ಯಾಣಮ್ಮನವರಂತಹ ಪ್ರಕಾಶನ ಮತ್ತು ಪತ್ರಿಕೋದ್ಯಮಕ್ಕಿಳಿದ ಲೇಖಕಿಯರಲ್ಲಿ ಬರವಣಿಗೆಯ ಬಗ್ಗೆ ಸ್ವಲ್ಪ ಮಹತ್ವಾಕಾಂಕ್ಷೆ ಕಾಣಿಸುತ್ತದೆ........ ಇವರಿಗೆ ಸಿಕ್ಕ ಪ್ರೋತ್ಸಾಹವೂ ದಾತಾರ ಧೋರಣೆಯವೇ ಹೊರತು ಗೌರವಭರಿತ ವಿಮರ್ಶೆ ಅಲ್ಲ"[೫] ಎನ್ನುವ ಮಾತುಗಳು ಅಂದಿನ ಮಹಿಳಾ ಅಭಿವ್ಯಕ್ತಿಯ ಹಿಂದಿರುವ ಸಾಮಾಜಿಕ ವಾತಾವರಣವನ್ನು ಹೇಳುತ್ತವೆ. ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ಈ ಸಂದರ್ಭದಲ್ಲಿ ಮಹಿಳಾ ಅಭಿವ್ಯಕ್ತಿ ಪುರುಷ ಚಿಂತನೆಗಳನ್ನೆ ನಕಲಾಗಿ ದಾಖಲಿಸಿದರು. ಆದರೂ ಇವರು ತಮ್ಮ ಕೃತಿಗಳಲ್ಲಿ ಎತ್ತುವ ಪ್ರಶ್ನೆಗಳು, ಆ ಸಂದರ್ಭಕ್ಕೆ ಯಾವುದೇ ಪರಿಹಾರಗಳನ್ನು ಒದಗಿಸದಿದ್ದರೂ ಅವರ ನಂತರದ ಅನೇಕ ಲೇಖಕಿಯರಿಗೆ ಸ್ಫೂರ್ತಿಯನ್ನು ನೀಡಿದ್ದು ತುಂಬಾ ಮುಖ್ಯವಾದ ಸಂಗತಿ.

ಮುಂದೆ ಸುಧಾರಣಾವಾದಿ ಚಿಂತನೆಗಳು, ಸಮಾಜ ಸುಧಾರಕರು, ಸಹೃದಯ ತಂದೆ, ಗಂಡ ಇವರುಗಳ ಪ್ರೋತ್ಸಾಹದಿಂದ ಮಹಿಳೆಯರು ಶಿಕ್ಷಣ, ಪಾಶ್ಚಾತ್ಯ ಸಾಹಿತ್ಯದ

ಓದು, ಉದ್ಯೋಗಗಳ ಅವಕಾಶಗಳಿಗೆ ತಮ್ಮನ್ನು ತೆರೆದುಕೊಂಡರು. ಇಂಥ ಅವಕಾಶಗಳು ಮಹಿಳೆಯರು ಸಾಹಿತ್ಯ ಕ್ಷೇತ್ರದೊಳಗೆ ತಮ್ಮನ್ನು ಪ್ರವೇಶಿಸಿಕೊಳ್ಳಲು ಅನು ಮಾಡಿಕೊಟ್ಟವು. ೨೦ ನೆಯ ಶತಮಾನದ ೬೦-೭೦ರ ದಶಕಗಳಲ್ಲಿ ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತಮ್ಮನ್ನು ಸಾಹಿತ್ಯಾಭಿವ್ಯಕ್ತಿಯಲ್ಲಿ ತೊಡಗಿಸಿಕೊಂಡರು. ಶಿಕ್ಷಣ ಆರ್ಥಿಕ ಸೌಲಭ್ಯ, ಉದ್ಯೋಗ, ಆಧುನಿಕತೆ ಇವುಗಳಿಗೆ ತಮ್ಮನ್ನು ತೆರೆದುಕೊಂಡ ಕಾಲದಲ್ಲಿ ಪ್ರಮಾಣದ ದೃಷ್ಟಿಯಿಂದ ಮಹಿಳಾ ಬರವಣಿಗೆ ಹೆಚ್ಚಿದ್ದು ಒಂದು ಬೆಳವಣಿಗೆಯೇ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ೬೦-೭೦ರ ದಶಕದಲ್ಲಿ ಪ್ರಗತಿಶೀಲ ಸಾಹಿತ್ಯ ತನ್ನನ್ನು ಗುರುತಿಸಿಕೊಂಡ ಕಾಲ. ಪ್ರಗತಿಶೀಲರಲ್ಲಿ ಹೆಚ್ಚಿನ ಚಾಲನೆಯನ್ನು ಪಡೆದುಕೊಂಡ ಕಾದಂಬರಿಗಳ ರಚನೆ ಮತ್ತು ಓದು ಮಹಿಳಾ ಸಾಹಿತ್ಯದಲ್ಲೂ ಕಂಡು ಬಂದಿತು. ಆದರೆ "ಕನ್ನಡದಲ್ಲಿ ೧೯೫೦ ರಿಂದ ೧೯೭೫ ರ ದಶಕದಲ್ಲಿ ನೂರರ ಸಂಖ್ಯೆಯಲ್ಲಿ ಮಹಿಳೆಯರು ಬರೆಯುತ್ತಾರೆ. ಅವರ ಕಾಳಜಿ ಏನಿದ್ದರೂ ಕುಟುಂಬಕ್ಕೆ ಸಂಬಂಧಿಸಿದ್ದು. ಪ್ರಗತಿಶೀಲ ಯುಗದಲ್ಲಿ ಕುಳಿತು ನವೋದಯದ ಸಂವೇದನೆ ತುಂಬಿಕೊಂಡ ಬರಹಗಳು ಅವು. ತಮಗೆ ತಾವೇ ವಸ್ತು, ಅಭಿವ್ಯಕ್ತಿಗಳ ಮಿತಿಗಳನ್ನು ಹಾಕಿಕೊಳ್ಳುತ್ತ, ತೆರೆದುಕೊಂಡಿದ್ದ ವಿಸ್ತರಿಸಿಕೊಳ್ಳಬಹುದಾಗಿದ್ದ ಲೋಕದ ಪರಿಧಿಗಳು ಇಲ್ಲಿ ಮೊಟಕುಗೊಂಡು ಬಿಟ್ಟವು"[೬] ಎನ್ನುವ ಡಿ. ಮಂಗಳಾ ಪ್ರಿಯದರ್ಶಿನಿಯವರ ಮಾತುಗಳು ಅಂದಿನ ಮಹಿಳಾ ಸಾಹಿತ್ಯದ ಚೌಕಟ್ಟನ್ನು ಹೇಳುತ್ತವೆ. ಈ ಹಿಂದೆ ಚರ್ಚಿಸಿದಂತೆ ಕಳೆದ ಶತಮಾನದ ೫೦-೬೦ರ ದಶಕಗಳಲ್ಲಿ ಬಂದ ಮಹಿಳಾ ಸಾಹಿತ್ಯ ನಕಲು ಹಂತವನ್ನು ಸೂಚಿಸುತ್ತದೆ.

ಮುಂದೆ ೬೦-೭೦ರ ದಶಕಗಳಲ್ಲಿ ಬಂದ ಮಹಿಳಾ ಸಾಹಿತ್ಯ ಕೊಂಚ ಇದಕ್ಕಿಂತ ಭಿನ್ನವಾಗಿ ಕಂಡು ಬಂದಿತು. ಇಲ್ಲಿ ನಕಲಿನ ಹಂತವನ್ನು ದಾಟಿ 'ಅನುಕರಣೆಯ' ಹಂತಕ್ಕೆ ಬಂದಿದ್ದನ್ನು ಕಾಣಬಹುದು. ಪ್ರಾರಂಭದಲ್ಲಿನ ಪುನರುಚ್ಚರಣೆಯ ಹಂತವನ್ನು ದಾಟಿಬಂದ ಈ ಕಾಲದಲ್ಲಿ ಎಚ್.ವಿ. ಸಾವಿತ್ರಮ್ಮ, ಎಂ.ಕೆ. ಇಂದಿರಾ, ಅನುಪಮಾ ನಿರಂಜನ, ವಾಣಿ, ತ್ರಿವೇಣಿ, ಎಚ್.ಎಸ್. ಪಾರ್ವತಿ, ನೀಳಾದೇವಿ ಮುಂತಾದವರು ತಮ್ಮನ್ನು ಬರಹದಲ್ಲಿ ತೊಡಗಿಸಿಕೊಂಡಿದ್ದರು. ಹಿಂದಿನ ಮಹಿಳಾ ಸಾಹಿತ್ಯಕ್ಕಿಂತ ಭಿನ್ನವಾದ ಆಲೋಚನೆಗಳನ್ನು ತಮ್ಮ ಕೃತಿಗಳಲ್ಲಿ ಮೂಡಿಸಿದರು. ಮಹಿಳಾ ಶೋಷಣೆಯನ್ನು ಕುರಿತಂತೆ ಅನೇಕ ಪ್ರಶ್ನೆಗಳನ್ನು ಎತ್ತಿದರು. ಆದರೆ ಅವರಿಗೂ ಸಾಧ್ಯವಾಗಿದ್ದು ಪಿತೃಪ್ರಧಾನ ಚಿಂತನೆಗಳನ್ನು ಪ್ರಶ್ನಿಸಿದರೂ ಅನಿವಾರ್ಯವಾಗಿ ಅದನ್ನು ಒಪ್ಪಿ ಅನುಸರಿಸಬೇಕಾದ ಅಸಹಾಯಕ

ಸಂದರ್ಭ. ಏಕೆಂದರೆ ಮಹಿಳೆಯನ್ನು ಆವರಿಸಿಕೊಂಡಿರುವ ಸಾಮಾಜಿಕ ದಿಗ್ಬಂಧನಗಳನ್ನು ದಾಟುವುದು ತುಂಬಾ ಕಷ್ಟಕರವಾದ್ದರಿಂದ. ಸುಧಾರಣಾವಾದಿ ಚಿಂತನೆಗಳು ಕೊಂಚ ಪ್ರತಿಭಟನೆಯ ರೂಪಿನಲ್ಲಿ ಪ್ರಗತಿಶೀಲರಲ್ಲಿ ಕಾಣಿಸಿಕೊಂಡದ್ದನ್ನು ನಾವು ಗಮನಿಸಬಹುದು. ಅಂದಿನ ಕಾಲದಲ್ಲಿ ಸುಧಾರಣಾವಾದಿಗಳು ಮಹಿಳಾ ಸಮಸ್ಯೆಗಳು ಎಂದು ಗುರುತಿಸಿದ್ದ ಬಾಲ್ಯವಿವಾಹ, ವರದಕ್ಷಿಣೆ, ಸತಿಪದ್ಧತಿ, ವೇಶ್ಯಾಪದ್ದತಿ, ಸ್ತ್ರೀ ಶಿಕ್ಷಣ, ಉದ್ಯೋಗಗಳಂಥ ಸಮಸ್ಯೆಗಳನ್ನೇ ಮಹಿಳಾ ಸಾಹಿತ್ಯದಲ್ಲೂ 'ಮಹಿಳಾ ಸಮಸ್ಯೆಗಳು' ಎಂದು ಗುರುತಿಸಿದರು. ಆದರೆ ಆ ಸಮಸ್ಯೆಗಳಿಂದ ಹೊರಬರುವ ಮಾರ್ಗಗಳು ಮಹಿಳೆಯರ ಸಾಮಾಜಿಕ ವಾಸ್ತವದಲ್ಲಿಲ್ಲದ ಕಾರಣ ತಮ್ಮ ಕೃತಿಗಳಲ್ಲಿ ತಮ್ಮ ಪಾತ್ರಗಳಿಗೆ ಕೂಡಾ ಅವುಗಳನ್ನು ಕಲ್ಪಿಸಲು ಅವರಿಗೆ ಸಾಧ್ಯವಾಗಲಿಲ್ಲ. ಒಟ್ಟಾರೆ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿಯೂ ಕೂಡಾ ಅವರು ಎತ್ತಿಕೊಂಡ ಈ ಮೇಲಿನ ಸಮಸ್ಯೆಗಳ ಜೊತೆಗೆ ಬಡತನ, ನಿರುದ್ಯೋಗದಂಥ ಸಮಸ್ಯೆಗಳಿಗೆ ಕೊಟ್ಟ ಪರಿಹಾರಗಳು ಕೂಡಾ ವೈಚಾರಿಕ ಚೌಕಟ್ಟಿನಲ್ಲಿ ಮಾತ್ರ ಕಂಡ ಸತ್ಯಗಳಾಗಿರುವುದನ್ನು ಗಮನಿಸಬಹುದು.

ಇದೇ ಸಂದರ್ಭದಲ್ಲಿ ಬರಹದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಧ್ಯಮವರ್ಗ ಹಾಗೂ ನಗರಕೇಂದ್ರಿತ ಹಿನ್ನೆಲೆಯಿಂದ ಬಂದ ಬಹುಸಂಖ್ಯಾತ ಬರಹಗಾರ್ತಿಯರು ಪಿತೃಪ್ರಧಾನ ಸಮಾಜದ ಚಿಂತನೆಗಳ ಗಾಢವಾದ ಪ್ರಭಾವಕ್ಕೆ ಒಳಗಾಗುತ್ತಾರೆ. ಹಾಗಾಗಿ ಪುರುಷ ಚಿಂತನೆ ಹೆಣ್ಣನ್ನು ಗ್ರಹಿಸುವ ಕ್ರಮಕ್ಕೂ ಇವರುಗಳು ಹೆಣ್ಣನ್ನು ಚಿತ್ರಿಸುವ ಕ್ರಮಕ್ಕೂ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ ಎಂಬುದನ್ನು ಗಮನಿಸಬೇಕು. ಪಿತೃಪ್ರಧಾನ ವ್ಯವಸ್ಥೆ ಕಟ್ಟಿಕೊಡುವ ಸ್ಥಿರಮಾದರಿಯ ಹೆಣ್ಣೇ ಇವರ ಕತೆ-ಕಾದಂಬರಿಗಳಲ್ಲಿ ಚಿಂಬಿತವಾಗಿರುವುದನ್ನು ಕಾಣಬಹುದು. ಈ ಕುರಿತು ಪ್ರಸ್ತುತ ಅಧ್ಯಾಯದ ಮುಂದಿನ ಭಾಗದಲ್ಲಿ ವಿವರವಾದ ಚರ್ಚೆಯನ್ನು ಮಾಡಲಾಗಿದೆ. ಪುರುಷ ಪ್ರಧಾನ ಸಾಹಿತ್ಯ ಚಿಂತನೆ 'ಜನಪ್ರಿಯ' ಎಂದು ಗುರುತಿಸಿರುವ ಕಾದಂಬರಿಯ ಜಗತ್ತನ್ನು ಪ್ರಾಯೋಗಿಕ ವಿಮರ್ಶೆಯ ಮೂಲಕ ಗಮನಿಸಲಾಗಿದೆ.

ಮಹಿಳಾ ಅಭಿವ್ಯಕ್ತಿಯಲ್ಲಿ ಕಂಡು ಬರುವ ಮೂರನೇ ಹಂತ ಅಸ್ಮಿತೆಯ ಹಂತ. ೨೦ರ ದಶಕದಿಂದ ಈಚೆಗೆ ಮಹಿಳೆಯ ಸಾಹಿತ್ಯ ಹೊಸದಿಕ್ಕು, ವಿಸ್ತಾರಗಳಿಗೆ ತನ್ನನ್ನು ತೆರೆದುಕೊಂಡಿದೆ. ಸ್ತ್ರೀಯರಿಗೆ ದೊರೆತ ಉನ್ನತ ಶಿಕ್ಷಣದ ಅವಕಾಶಗಳು, ಉದ್ಯೋಗದ ಅವಕಾಶಗಳು, ಒದಗಿ ಬಂದ ಕಾನೂನುಗಳು ಎಲ್ಲಕ್ಕಿಂತ ಹೆಚ್ಚಾಗಿ ಪಾಶ್ಚಾತ್ಯ ಸಂದರ್ಭದಲ್ಲಿ

ಹುಟ್ಟಿಕೊಂಡ ಸ್ತ್ರೀವಾದಿ ಚಿಂತನೆಗಳು ಮಹಿಳಾ ಬದುಕಿನಲ್ಲಿ ಹೊಸ ಸಂಚಲನವನ್ನು ಮೂಡಿಸಿದವು. ಸ್ತ್ರೀವಾದಿ ಚಿಂತನೆ ಇದುವರೆಗೂ ಇದ್ದ ಪಿತೃಪ್ರಧಾನ ಧೋರಣೆಗೆ ಎರಡು ರೀತಿಯ ಪ್ರತಿಕ್ರಿಯಿಸಿತು. ೧) ಚಳುವಳಿಗಳ ಮೂಲಕ ೨) ಸೈದ್ಧಾಂತಿಕ ಚಿಂತನೆಗಳ ಮೂಲಕ. ಈ ಎರಡೂ ನೆಲೆಗಳಲ್ಲಿ ತನ್ನನ್ನು ತೀವ್ರವಾಗಿ ತೊಡಗಿಸಿಕೊಂಡ ಸ್ತ್ರೀವಾದ ಪಾರಂಪರಿಕ ಚಿಂತನೆಗಳಲ್ಲಿರುವ ಪುರುಷಶಾಹಿಯನ್ನು ಪ್ರಶ್ನಿಸಿತು. ಮಹಿಳಾ ಅಭಿವ್ಯಕ್ತಿಯ ಮಿತಿಗಳು ವೈಯಕ್ತಿಕ ನೆಲೆಯವಾಗಿರದೇ ಸಾಮಾಜಿಕ ನೆಲೆಯವು ಎಂಬ ಆಲೋಚನೆಯನ್ನು ಮಂಡಿಸಿತು. ಈ ಕಾರಣದಿಂದಲೇ ಸ್ತ್ರೀವಾದಿ ನೆಲೆಯ ಮರು ಓದು ನಿಜವಾದ ಅರ್ಥದಲ್ಲಿ ಮಹಿಳಾ ಸಾಹಿತ್ಯದ ನೆಲೆ-ಬೆಲೆಗಳನ್ನು ಕಂಡುಕೊಳ್ಳುವಲ್ಲಿ ಸಹಾಯಕವಾಗುತ್ತದೆ ಎಂಬುದನ್ನು ಖಚಿತಪಡಿಸಿತು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಉಂಟಾದ ಈ ಎಚ್ಚರ, ಹೊಸ ಅರಿವಿನ ಪ್ರಜ್ಞೆ ಮಹಿಳಾ ಅಭಿವ್ಯಕ್ತಿಯಲ್ಲೂ ಮೂಡಿಬಂದಿದೆ. ಈ ಸಂದರ್ಭದಲ್ಲಿ ಮಹಿಳೆಯರು ಕಾವ್ಯ, ಕತೆ, ಕಾದಂಬರಿ, ಹಾಸ್ಯ ಬರಹ, ಸಂಶೋಧನೆ, ನಾಟಕ ಎಲ್ಲ ಪ್ರಕಾರಗಳಲ್ಲೂ ತಮ್ಮನ್ನು ಅಭಿವ್ಯಕ್ತಿಸಿಕೊಂಡಿದ್ದನ್ನು ಗಮನಿಸಬಹುದು. ೮೦ರ ದಶಕದಲ್ಲಿ ತಮಗೆ ದಕ್ಕಿದ ಸ್ತ್ರೀವಾದಿ ಚಿಂತನೆಗಳ ಮೂಲಕ ತಮ್ಮ ಬರಹವನ್ನು ಹೊಸ ಎಚ್ಚರದ ಅರಿವಿನೊಂದಿಗೆ ಬರೆದ ಅನುಪಮಾ ನಿರಂಜನರವರು ಆ ಕುರಿತಂತೆ ತಮ್ಮ ಆತ್ಮಕತೆ 'ಬರಹಗಾರ್ತಿಯ ಬದುಕು'ನಲ್ಲಿ ಹೇಳಿಕೊಳ್ಳುತ್ತಾರೆ. ಅವರ 'ಮಾಧವಿ' ಅಂತಹ ಹೊಸ ಎಚ್ಚರದೊಂದಿಗೆ ಸೃಷ್ಟಿಗೊಂಡ ಪಾತ್ರವಾಗಿದೆ. ಹೆಣ್ಣನ್ನು ವಸ್ತುವಾಗಿ ಗ್ರಹಿಸಿ ಅವಳನ್ನು ಕುದುರೆಗಳ ಸಂಗ್ರಹಕ್ಕೆಂದು ರಾಜನಿಂದ, ರಾಜನಿಗೆ ಅಲೆಸುವ ಋಷಿ ಗಾಲವ ತನ್ನ ಗುರು ವಿಶ್ವಾಮಿತ್ರನಿಗೂ ಅವಳನ್ನ ಒಪ್ಪಿಸಿ ಮತ್ತೆ ಮರಳಿ ಮಾಧವಿಯನ್ನು ಅವಳ ತಂದೆಗೆ ಒಪ್ಪಿಸುವ ಕತೆ ಇದು. ಇಲ್ಲಿ ಮಾಧವಿಯ ನೋವು, ಅಪಮಾನ, ಅಸಹಾಯಕತೆ, ರೋಷ, ಪ್ರತಿಭಟನೆ, ಎಲ್ಲವೂ ಕಂಡು ಬರುತ್ತದೆ. ಪ್ರಾರಂಭದ ಬರವಣಿಗೆಗೂ ನಂತರದ ಬರವಣಿಗೆಗೂ ಅನುಪಮಾ ಅವರಲ್ಲಿ ವ್ಯತ್ಯಾಸವಿರುವುದರ ಹಿನ್ನೆಲೆಯಲ್ಲಿ ಸ್ತ್ರೀವಾದಿ ಚಿಂತನೆಯ ಪ್ರಭಾವವನ್ನು ಗ್ರಹಿಸಬಹುದು. ಇವರ ಹಾಗೆಯೇ ಎಚ್.ಎಸ್. ಪಾರ್ವತಿ, ನೀಳಾದೇವಿ ಅಂಥ ಕೆಲವು ಹಿರಿಯ ಲೇಖಕಿಯರು ತಮ್ಮ ಅಭಿವ್ಯಕ್ತಿಯನ್ನು ಹೊಸ ನೆಲಗಳಲ್ಲಿ ಮೂಡಿಸಿದರು. ಮುಂದೆ ನವ್ಯದ ಸಂದರ್ಭದಲ್ಲಿ ಬರೆದ ವೀಣಾ ಶಾಂತೇಶ್ವರ, ರಾಜಲಕ್ಷ್ಮಿ ಎನ್. ರಾವ್ ಮುಂತಾದವರು ನವ್ಯದ ಪ್ರಭಾವದಿಂದ ಬರೆದರು. ನಂತರದಲ್ಲಿ

ದಲಿತ ಬಂಡಾಯ ಚಳುವಳಿಯ ಹಿನ್ನೆಲೆಯಲ್ಲಿ ಬಂದ ಸಾರಾ ಅಬೂಬಕರ್, ಗೀತಾ ನಾಗಭೂಷಣ, ಲಲಿತಾ ನಾಯಕ, ವೈದೇಹಿ, ನೇಮಿಚಂದ್ರ, ಭಾನು ಮುಷ್ತಾಕ್, ಎಂ.ಎಸ್. ವೇದಾ, ಎಚ್.ನಾಗವೇಣಿ ಮುಂತಾದ ಬರಹಗಾರ್ತಿಯರ ಬರಹಗಳಲ್ಲಿ ಹೆಣ್ಣಿನ ಇತ್ಯಾತ್ಮಕ ಮಾದರಿಗಳನ್ನು ಗುರುತಿಸಬಹುದು. ಈ ಕಾಲದಲ್ಲಿ ಬಂದ ಬರಹಗಾರ್ತಿಯರಿಗೆ ಹೆಣ್ಣಿನ ಸಮಸ್ಯೆಗಳ ಬಗ್ಗೆ ಸ್ಪಷ್ಟ ಅರಿವಿದೆ. "ಕಥೆ ಹೇಳುವ ತುಡಿತಕ್ಕಿಂತ ಅದರ ಮೂಲಕ ಪ್ರತಿಪಾದಿಸಬೇಕೆಂದಿರುವ ಧೋರಣೆಯೇ ಇವರಿಗೆ ಮುಖ್ಯ. ಶೋಷಣೆಯ ಮೂಲವನ್ನು ಅರಿಯುವ ಪ್ರಯತ್ನ ಇವರ ಬರವಣಿಗೆಯಲ್ಲಿದೆ. ಸಾಹಿತ್ಯದ ವಸ್ತು ಹಾಗೂ ಅಭಿವ್ಯಕ್ತಿ ಎರಡರ ಬಗ್ಗೆಯೂ ಗಂಭೀರ ದೃಷ್ಟಿಕೋನವಿರುವುದನ್ನು ಇಲ್ಲಿ ಕಾಣಬಹುದು'[೭] ಎಂದು ಇಂದಿನ ಬರಹಗಾರ್ತಿಯರ ಬರಹದ ಬದ್ಧತೆಯನ್ನು ಕುರಿತಂತೆ 'ಕೆ.ಆರ್. ಸಂಧ್ಯಾರೆಡ್ಡಿ' ಅವರು ಹೇಳುವ ಮಾತುಗಳು ಸರಿಯಾಗಿವೆ. (ಕ.ಮ.ಸಾ.ಚ. ಪುಟ೩೬೪) ತಮ್ಮ ಅನೇಕ ಕತೆಗಳಲ್ಲಿ 'ಹೊಸ ಹೆಣ್ಣ'ನ್ನು ಚಿತ್ರಿಸಿರುವ ನೇಮಿಚಂದ್ರರವರು ಲೇಖ-ಲೋಕದ ತಮ್ಮ ಆತ್ಮಕಥಾನಕದಲ್ಲಿ ಮಹಿಳೆಯ ಅಭಿವ್ಯಕ್ತಿಯ ಸ್ವರೂಪವನ್ನು ಹೇಳುತ್ತಲೇ ಅವುಗಳು ಮೂಡಿಸಿದ ಎಚ್ಚರವನ್ನು ಹೇಳುತ್ತಾರೆ. "ಹೆಣ್ತನಕ್ಕೆ ಅಂಟಿಸಿದ ಆತಂಕಗಳು ಬಹುಶಃ ನಮ್ಮ ಲೇಖಕರನ್ನು ಕಾಡಿಸಿರಲಿಕ್ಕಿಲ್ಲ. ಇದೇ ಕಾರಣಕ್ಕಿರಬೇಕು ನಾವು ಸ್ತ್ರೀಯರು ನಮ್ಮ ಅನುಭವಗಳನ್ನು ತೆರೆದುಕೊಂಡದ್ದು ತೀರಾ ಕಡಿಮೆ. ಆಳಕ್ಕಿಳಿದು ನಮ್ಮ ನಿಜವಾದ ಅನಿಸಿಕೆಗಳನ್ನು ಮುಟ್ಟಲು ಬೆಚ್ಚಿದ್ದೇವೆ. ಸೀತೆ, ಸಾವಿತ್ರಿಯರ ನಾಡಿನಲ್ಲಿ ನಮಗೆ ಹೀಗನ್ನಿಸುವುದಿಲ್ಲ ಎಂಬ ಭಯಕ್ಕೆ. ಬಹುಶಃ ಸೀತೆ, ಸಾವಿತ್ರಿಯರಿಗೂ ಹೀಗನ್ನಿಸಿರಬಾರದೇಕೆ ಎಂದು ಪ್ರಶ್ನಿಸಿದ್ದು ಎಚ್.ವಿ. ಸಾವಿತ್ರಮ್ಮನವರಂಥ ಅಲ್ಲೊಬ್ಬ, ಇಲ್ಲೊಬ್ಬ ಲೇಖಕಿಯರು ಮಾತ್ರ. ನಮ್ಮ ಅನುಭವಗಳನ್ನು ಮುಟ್ಟಿದಾಗಲೂ ಮೆಟ್ಟಿಬಿದ್ದಿದ್ದೇವೆ. ತೆರೆದಿಡಲು ಹಿಂಜರಿದಿದ್ದೇವೆ........... ಯಾರಾದರೂ ಇದು ನಿಮ್ಮದೇ ಅನುಭವಾನಾ ಎಂದು ಕೇಳಿಬಿಟ್ಟರೆ ಎಂಬ ಭಯ. ಇಂಥ ಸಂಕೋಚ ಮುಜುಗರಗಳಲ್ಲಿ ಸರ್ವಕಾಲಕ್ಕೂ ಹೇಳಿಕೊಂಡು ಬಂದದ್ದನ್ನೇ, ಅನಿಸದಿದ್ದರೂ ಅನಿಸಬೇಕೆಂದದ್ದನ್ನೇ, ಜನ ನಿರೀಕ್ಷಿಸಿದ್ದನ್ನೇ, ಸಮಾಜ ಅಂಗೀಕರಿಸಿದ್ದನ್ನೇ, ಹೇಳುತ್ತಾ ಬಂದೆವು. ನಾವು ಗಂಡು ಮೌಲ್ಯಗಳಿಗೆ, ಗಂಡು ಮಾದರಿಗಳಿಗೆ, ಗಂಡು ನಿರೀಕ್ಷೆಗಳಿಗೆ ತಕ್ಕಂತೆ ಬರೆದೆವು. ಹೆಣ್ಣಾಗಿ ಬರೆದದ್ದು ಗಟ್ಟಿ ನಿಂತ ಕೆಲವು ಲೇಖಕಿಯರು ಮಾತ್ರ". [೮] ಎಂದಿರುವ ಮಾತುಗಳು ಕೆಲವು ಲೇಖಕಿಯರಿಂದಲಾದರೂ ೨೦ನೆಯ ಶತಮಾನದ ಕೊನೆಯ ಭಾಗದಲ್ಲಿ ಮಹಿಳಾ

ಬರವಣಿಗೆ ತನ್ನ ಬಿಡುಗಡೆಯ ದಾರಿಯ ಹುಡುಕಾಟದಲ್ಲಿ ತನ್ನ ಹೆಜ್ಜೆಗಳನ್ನು ಧೃಡವಾಗಿ ಇಡುತ್ತಿರುವುದನ್ನು ಗಮನಿಸಬಹುದು. ಈಗ ತಾನೆ ತನ್ನನ್ನು ನಿಜವಾದ ಅರಿವಿನ ನೆಲೆಯಲ್ಲಿ ಪ್ರಕಟಗೊಳಿಸಿಕೊಳ್ಳುವ ಪ್ರಯತ್ನದಲ್ಲಿರುವ ಮಹಿಳಾ ಅಭಿವ್ಯಕ್ತಿ ಬಹಳಷ್ಟು ಎಚ್ಚರದೊಂದಿಗೆ ತನ್ನ ಹಾದಿಯನ್ನು ಕ್ರಮಿಸಬೇಕಾಗುತ್ತದೆ. ಇಂದಿನ ಮಹಿಳಾ ಅಭಿವ್ಯಕ್ತಿಯಲ್ಲಿ ವಸ್ತು, ತಂತ್ರ ಹಾಗೂ ವಿನ್ಯಾಸಗಳು ಹೊಸ ರೂಪಗಳಲ್ಲಿ ಬರುತ್ತಿರುವುದುನ್ನು ಗಮನಿಸಬಹುದು. ಆದರೆ ಸಾಹಿತ್ಯ ವಿಮರ್ಶೆಯ ಮಾನದಂಡಗಳಾಗಿ ಇಂದೂ ಚಾಲ್ತಿಯಲ್ಲಿರುವುವು ಪುರುಷ ಚಿಂತನೆಯ ನೆಲೆಗಳೇ. ಪುರುಷ ಲೋಕ ಒಪ್ಪಿಡುವಂಥ ಶಿಕ್ಷಣ, ಉದ್ಯೋಗಗಳೇ ಹೆಣ್ಣಿನ ಸಬಲೀಕರಣ ಎನ್ನುವ ಹುಸಿ ಭ್ರಮೆಯಲ್ಲಿದ್ದರೆ, ಪಿತೃ ಪ್ರಧಾನತೆಯ ನೆಲೆಗಳನ್ನೇ ಸ್ತ್ರೀಪರ ನೆಲೆಗಳೆಂದು ಭ್ರಮಿಸಿಕೊಂಡರೆ ಮತ್ತದೇ ಪಿತೃಪ್ರಧಾನ ವ್ಯವಸ್ಥೆಯ ಜಾಲದೊಳಗೆ ಬೀಳುವ ಅಪಾಯವಿರುತ್ತದೆ. ಆದ್ದರಿಂದ ಇಂದು ಮಹಿಳಾ ಅಭಿವ್ಯಕ್ತಿ, ಸಾಹಿತ್ಯವನ್ನು ತನ್ನ ಅಸ್ತಿತ್ವದ ಶೋಧದ ಪರಿಕರವಾಗಿ ರೂಪಿಸಿಕೊಳ್ಳುವ ಹಂತದಲ್ಲಿ ಸ್ವಸಾಮರ್ಥ್ಯ, ಧೈರ್ಯ, ಎಚ್ಚರಗಳನ್ನು ಬೆಳೆಸಿಕೊಳ್ಳುವ ಅಗತ್ಯ ಹಿಂದಿಗಿಂತಲೂ ಹೆಚ್ಚಾಗಿದೆ.

ಇಂದಿನ ಅಸ್ತಿತ್ವದ ಶೋಧಕ್ಕಾಗಿ ಹಿಂದಣ ಹೆಜ್ಜೆಗಳನ್ನು ಅರಿಯುವ ಪ್ರಯತ್ನ ತುಂಬಾ ಮುಖ್ಯವಾದುದು. ಆದ್ದರಿಂದಲೇ ನಮ್ಮ ಹಾದಿಗಳನ್ನು ಕಟ್ಟಿಕೊಳ್ಳಲು, ನಮ್ಮದೇ ಆದ ವಿಧಿವಿಧಾನಗಳನ್ನು ಕಂಡುಕೊಳ್ಳಲು ಹಿಂದಿನ ಮಹಿಳಾ ಸಾಹಿತ್ಯವನ್ನು ಮುಖ್ಯ ಆಕರವನ್ನಾಗಿ ಮಾಡಿಕೊಳ್ಳಬೇಕಾಗಿದೆ. ಮಹಿಳೆಯ ಸೃಜನತೆಗಿರುವ ಅಡ್ಡಿ ಆತಂಕಗಳೂ ಅವು ಹೊರಬರುವಾಗ ಎದುರಾಗುವ ಸಮಸ್ಯೆಗಳು, ಪ್ರಕಟಗೊಂಡ ನಂತರದ ಪರೀಕ್ಷೆಗಳು ಎಲ್ಲ ಸಂಗತಿಗಳ ಅರಿವು ಇದರಿಂದ ಉಂಟಾಗುತ್ತದೆ.

ಈ ಎಲ್ಲ ಕಾರಣಗಳಿಂದ ಕಳೆದ ಶತಮಾನದ ೬೦-೭೦ರ ದಶಕದಲ್ಲಿ ಮೂಡಿ ಬಂದ ಮಹಿಳಾ ಸಾಹಿತ್ಯವನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆಯ್ದ ಬರಹಗಾರ್ತಿಯರ ಕೆಲವು ಕಾದಂಬರಿಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವುದರ ಮೂಲಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಕಾದಂಬರಿ ಲೋಕದೊಳಗೆ ಬಿಂಬಿತಳಾಗಿರುವ ಹೆಣ್ಣಿನ ಮಾದರಿಗಳನ್ನು ಗಮನಿಸಲಾಗಿದೆ. ಕಾದಂಬರಿಗಳ ಆಯ್ದ ಭಾಗಗಳನ್ನು ಉಲ್ಲೇಖಿಸುವುದರ ಮೂಲಕ ಕಾದಂಬರಿಯಲ್ಲಿ ಬಿಂಬಿತವಾಗಿರುವ ಲೋಕ ಎಂಥದ್ದು ಎಂಬುದನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಕಾದಂಬರಿಗಳ ರಚನೆ-ಓದು,

ಇವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮಹಿಳಾ ಲೋಕ ಈ ಪ್ರಕ್ರಿಯೆಯಲ್ಲಿ ಪಡೆದುಕೊಂಡಿದ್ದೇನು ಎನ್ನುವುದಕ್ಕೆ ಉತ್ತರಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

### ೫.೨ ಮಹಿಳಾ ಅಭಿವ್ಯಕ್ತಿ – ಜನಪ್ರಿಯ ಕಾದಂಬರಿಗಳು

ಮಹಿಳೆಯ ಅಭಿವ್ಯಕ್ತಿ ಪ್ರಕಟಗೊಳ್ಳಲು ಇರುವ ಅಡೆತಡೆಗಳು ಅದನ್ನು ನಿವಾರಿಸಿಕೊಳ್ಳಲು ಮಹಿಳಾ ಚೇತನ ಕಂಡು ಕೊಳ್ಳಬೇಕಾದ ದಾರಿಗಳು, ಇವುಗಳನ್ನು ಕುರಿತಂತೆ ಹಿಂದೆ ಚರ್ಚಿಸಲಾಗಿದೆ. ಕನ್ನಡ ಸಂದರ್ಭದಲ್ಲಿ ಆಧುನಿಕ ಸಾಹಿತ್ಯದಲ್ಲೇ ಮಹಿಳಾ ಸಾಹಿತ್ಯ ಹಲವಾರು ನೆಲೆಗಳಲ್ಲಿ ತನ್ನನ್ನು ಪ್ರಕಟಗೊಳಿಸಿಕೊಳ್ಳುತ್ತಾ ಬಂದಿರುವುದನ್ನು ಗಮನಿಸುತ್ತೇವೆ.

ಮಹಿಳಾ ಸೃಜನತೆ ತನ್ನನ್ನು ಪ್ರಕಟಿಸಿಕೊಂಡ ನಂತರ ಅದಕ್ಕೆ ಎದುರಾದುದು ವಿಮರ್ಶಾ ಲೋಕ. ಅದು ಪಿತೃಪ್ರಧಾನ ಚಿಂತನೆಯ ನೆಲೆಯದ್ದು. ೨೦ನೆಯ ಶತಮಾನದ, ೬೦-೭೦ರ ದಶಕಗಳಲ್ಲಿ ಬಹು ಸಂಖ್ಯಾತ ಮಹಿಳೆಯರು ತಮ್ಮನ್ನು ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿದ್ದನ್ನು ಈಗಾಗಲೇ ಗಮನಿಸಿದೆ. ಪುರುಷ ಪ್ರಧಾನ ಸಾಹಿತ್ಯ ಕ್ಷೇತ್ರದಲ್ಲಿ ತನ್ನ ಹೆಜ್ಜೆಗಳನ್ನಿಡುವ ಸಂದರ್ಭದಲ್ಲಿ ವಿಮರ್ಶೆ, ಮಹಿಳಾ ಸಾಹಿತ್ಯಕ್ಕೆ ಇರಬಹುದಾದ ಭಿನ್ನ ಸ್ವರೂಪ, ಸಾಮಾಜಿಕತೆ ಈ ಯಾವ ಅಂಶಗಳನ್ನು ಪರಿಗಣಿಸದೆ ವಸ್ತು ತಂತ್ರ, ವಿನ್ಯಾಸ, ಭಾಷೆ ಎಂಬ ವಿಮರ್ಶಾ ಮಾನದಂಡಗಳನ್ನು ಝಳಪಿಸಿ ನಿಂತಿದ್ದನ್ನು ಕಾಣಬಹುದು. ಮಹಿಳೆಯ ಅಭಿವ್ಯಕ್ತಿಯನ್ನು ಕುಗ್ಗಿಸುವ ಮಾತುಗಳು ಅವಳಿಗೆ ಎದುರಾದವು. 'ಕಣ್ಣೀರಿನ ಕತೆ', 'ಭಾವುಕ', 'ಪೇಲವ ನಿರೂಪನೆ', 'ಅಡಿಗೆ ಮನೆ ಸಾಹಿತ್ಯ', ಪೇಜಿಗೊಮ್ಮೆ ಸೀರೆಯ, ಒಡವೆಯ ವರ್ಣನೆಯಿರುವ ಕೃತಿಗಳು ಎಂಬೆಲ್ಲಾ ವಿಮರ್ಶೆಗಳು ಎದುರಾದವು. ವಿಮರ್ಶಕರು ತ್ರಿವೇಣಿಯವರನ್ನೂ ಒಳಗೊಂಡಂತೆ ವಾಣಿ, ಉಷಾ ನವರತ್ನರಾಮ್, ಸಾಯಿಸುತೆ, ಎಚ್.ಜಿ. ರಾಧಾದೇವಿ, ಆರ್ಯಾಂಭ ಪಟ್ಟಾಭಿ, ಪ್ರೇಮಭಟ್, ಅಶ್ವಿನಿ, ಈಚನೂರು ಜಯಲಕ್ಷ್ಮೀ, ಸಿ.ಎನ್. ಮುಕ್ತಾ, ಆರತಿ ವೆಂಕಟೇಶ್ ಇವರನ್ನೆಲ್ಲಾ 'ಜನಪ್ರಿಯ ಕಾದಂಬರಿಕಾರ್ತಿ'ಯರೆಂದು ಗುರುತಿಸಿ ಇವರ ಕೃತಿಗಳನ್ನು 'ಜನಪ್ರಿಯ ಕಾದಂಬರಿ'ಗಳೆಂದು ಗುರುತಿಸಿದರು. ಪ್ರಸ್ತುತ ಅಧ್ಯಯನದಲ್ಲಿ ಆಯ್ದ ಐದು ಜನ ಬರಹಗಾರ್ತಿಯರ ಕಾದಂಬರಿಗಳನ್ನು ಗಮನಿಸಲಾಗಿದೆ. ಈ ಒಬ್ಬೊಬ್ಬ ಬರಹಗಾರ್ತಿಯರು. ತ್ರಿವೇಣಿ, ಆರತಿ ವೆಂಕಟೇಶ್ ಅವರನ್ನು ಹೊರತುಪಡಿಸಿ ಉಷಾ, ಸಾಯಿಸುತೆ, ರಾಧಾದೇವಿ

ಅವರು ನೂರಕ್ಕೂ ಮಿಕ್ಕಿ ಕೃತಿಗಳನ್ನು ರಚಿಸಿದ್ದಾರೆ. ಅಧ್ಯಯನಕ್ಕೆ ಹಿನ್ನೆಲೆಯಾಗಿ ಇನ್ನೂರು, ಮುನ್ನೂರು ಕಾದಂಬರಿಗಳನ್ನು ಓದಿದ್ದರೂ, ಪ್ರಾಯೋಗಿಕ ವಿಮರ್ಶೆಯಲ್ಲಿ ಕೆಲವು ಕಾದಂಬರಿಗಳನ್ನು ಮಾತ್ರ ಉದಾಹರಿಸಲಾಗಿದೆ.

ಕಾದಂಬರಿಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವುದರ ಮೂಲಕ ಈಗಾಗಲೇ ಸ್ತ್ರೀವಾದಿ ಚಿಂತನೆಗಳು ಗುರುತಿಸಿರುವ ಮಹಿಳಾ ಅಭಿವ್ಯಕ್ತಿಯ ಮೂರು ನೆಲೆಗಳನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಮೂರೂ ನೆಲೆಗಳು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಪಠ್ಯಗಳಲ್ಲೇ ದೊರಕುತ್ತವೆ ಎಂದಲ್ಲ. ಮೂರು ನೆಲೆಗಳಲ್ಲಿ ತನ್ನನ್ನು ಕಂಡು ಕೊಳ್ಳುತ್ತಿರುವ ಕನ್ನಡ ಮಹಿಳಾ ಸಾಹಿತ್ಯದ ಅಧ್ಯಯನ ಪ್ರಸ್ತುತ ಅಧ್ಯಯನದ ಮಿತಿಗೆ ಮೀರಿದ್ದು. ಪ್ರಸ್ತುತ ಅಧ್ಯಯನದಲ್ಲಿ ಪಾರಂಪರಿಕ ಪಿತೃಪ್ರಧಾನ ವಿಮರ್ಶೆ 'ಜನಪ್ರಿಯ' ಎಂದು ಗುರುತಿಸಿರುವ ಮಹಿಳಾ ಸಾಹಿತ್ಯದಲ್ಲಿ, ಮಹಿಳಾ ಬರವಣಿಗೆಯ ವಿಸ್ಮೃತಿ ಮತ್ತು ಅನುಕರಣೆಯ ಹಂತಗಳನ್ನು ಗಮನಿಸುವ ಪ್ರಯತ್ನ ಮಾಡಲಾಗಿದೆ. ಮೂರನೆಯ ಹಂತ ಮಹಿಳಾ ಪ್ರಜ್ಞೆಯ ಜಾಗೃತಿಯ ಹಂತ. ಅದು ಮಹಿಳಾ ಅಸ್ಮಿತೆಯ ಶೋಧದ ಹಂತ. ಆಗ ಮಾತ್ರ ಮಹಿಳೆ ನಿಜವಾದ ಅರ್ಥದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ. ಮಹಿಳಾ ಬದುಕು ಮತ್ತು ಬರಹಗಳೆರಡರಲ್ಲೂ ನಾವು ಈ ಮೂರು ಹಂತಗಳನ್ನು ಗುರುತಿಸಬಹುದು.

ಆದ್ದರಿಂದಲೇ ಪ್ರಸ್ತುತ ಅಧ್ಯಯನದಲ್ಲಿ ಕಾದಂಬರಿಗಳನ್ನು 'ಕಲಾಕೃತಿ'ಗಳಾಗಿ ಓದುತ್ತಿಲ್ಲ ಮತ್ತು ಮನರಂಜನೆಗಾಗಿಯೂ ಓದುತ್ತಿಲ್ಲ, ಮಹಿಳಾ ಸ್ಥಿತಿಗತಿಗಳ ಅವಲೋಕನದ ಬಹು ಮುಖ್ಯ ಪರಿಕರವಾಗಿ ಈ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದೊಂದು ಉದ್ದೇಶಪೂರ್ವಕ ಪ್ರಯತ್ನ. ಇದನ್ನು ಸ್ತ್ರೀವಾದದಲ್ಲಿ ಪ್ರಜ್ಞಾಪೂರ್ವಕ ತಿಳುವಳಿಕೆಯೊಂದಿಗೆ ನಡೆಯುವ ಒಂದು ಪ್ರಕ್ರಿಯೆಯನ್ನಾಗಿ ಗುರುತಿಸುತ್ತಾರೆ. ಮಹಿಳೆ ಅನೇಕ ನೆಲೆಗಳಲ್ಲಿ ಹಾಯ್ದು ಬಂದ ನಡೆಯನ್ನು ಸಾಹಿತ್ಯ ಕೃತಿಗಳ ಮೂಲಕ ಗ್ರಹಿಸುವ ಕ್ರಮ ಇಲ್ಲಿದೆ. ಆದ್ದರಿಂದಲೇ ಸಾಂಪ್ರದಾಯಿಕ ಅಧ್ಯಯನಗಳಲ್ಲಿ ಬಳಸುವ ವಿಧಿವಿಧಾನಗಳನ್ನು ಅನುಸರಿಸದೆ ಕೃತಿಗಳು ಕಟ್ಟಿಕೊಡುವ ಭಾಷಿಕ ಜಗತ್ತನ್ನು ವಿವರಿಸಿಕೊಳ್ಳುವ ಮೂಲಕವೇ ಬರಹಗಾರ್ತಿಯರ ಸೃಜನತೆಯ ವಿವಿಧ ಮಾದರಿಗಳನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿದೆ. ಭಾಷೆ ಎನ್ನುವ ಸಾಮರ್ಥ್ಯ ಮಹಿಳೆಯ ಅಭಿವ್ಯಕ್ತಿಯಲ್ಲಿ ಬಿಡುಗಡೆಯ ಪರಿಕರವಾಗಿ ಬಂದಿದೆಯಾ ಎನ್ನುವುದಕ್ಕೆ ಉತ್ತರಿಸಿಕೊಳ್ಳಲು

ಪ್ರಯತ್ನಿಸಲಾಗಿದೆ. ಕಾದಂಬರಿಗಳಲ್ಲಿ ಬಳಕೆಗೊಳ್ಳುವ ವಸ್ತು, ವಿನ್ಯಾಸ ತಂತ್ರ, ಭಾಷೆ ಪರಿಕರಗಳು ಹೆಣ್ಣಿನ ಚಹರೆಗಳನ್ನು ಹೇಗೆ ಮೂಡಿಸಿವೆ. ಅಲ್ಲಿ ಹೆಣ್ಣು ಲೋಕ ಬಿಂಬಿತವಾಗಿರುವ ಬಗೆ ಹೇಗೆ ಎಂಬುದನ್ನು ಕಾದಂಬರಿಗಳ ವಿವರಣೆಗಳ ಮೂಲಕವೇ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಕಾದಂಬರಿಗಳ ಲೋಕ ಕಾಣಿಸುವ ಸತ್ಯ ಹೆಣ್ಣಿನ ಬದುಕಿನ ಬವಣೆ, ಶೋಷಣೆಯನ್ನು ಧೃಡಪಡಿಸುತ್ತವೆ. ಸಾಮಾಜಿಕತೆ ಹೆಣ್ಣನ್ನು ಆವರಿಸಿರುವ ಬಹು ದೊಡ್ಡ ಸಮಸ್ಯೆ. ಆದ್ದರಿಂದ ಅವಳಿಗೆ ಸುಲಭದಲ್ಲಿ ಮುಕ್ತಿಯೇ ಇಲ್ಲ ಅಂಥ ಸಂದರ್ಭದಲ್ಲಿ ಮೂಡುವ ಮಹಿಳೆಯ ಅಭಿವ್ಯಕ್ತಿ ಹೇಗೆ ತಾನೇ ಬಿಡುಗಡೆಯ ಹಾದಿ ಆಗಬಲ್ಲದು ಎಂಬ ಹಪಾಹಪಿ (ಹಳವಂಡ) ಮಾತ್ರವೇ ಈ ಅಧ್ಯಯನದ ಉದ್ದೇಶವಲ್ಲ. ನಮ್ಮ ಇಂದಿನ ಧೃಡ ಹೆಜ್ಜೆಗಳಿಗೆ, ನಿಲುವುಗಳಿಗೆ, ಚಿಂತನೆಗಳಿಗೆ, ಹಿಂದಿನ ಬದುಕು, ಸಾಹಿತ್ಯ ದಾರಿದೀಪವಾಗಬಹುದು. ಅಲ್ಲದೆ ಬಹುಸಮುದಾಯದ ಬದಲಾವಣೆ ಸಾಮೂಹಿಕವಾದ ಪ್ರಯತ್ನದಿಂದ ಮಾತ್ರವೇ ಸಾಧ್ಯ. ಸಾಹಿತ್ಯ ಕೃತಿಗಳು ಈ ನೆಲೆಯಲ್ಲಿ ಬದುಕನ್ನು ಬದಲಿಸಲು ಮುಖ್ಯ ಆಕರಗಳಾಗುತ್ತವೆ ಎಂಬ ಧೃಡ ನಿಲುವು ಈ ಅಧ್ಯಯನಕ್ಕಿದೆ.

ಈಗಾಗಲೇ ಅಧ್ಯಯನದಲ್ಲಿ ಗುರುತಿಸಿರುವಂತೆ ಕಾಲದ ದೃಷ್ಟಿಯಿಂದ ತ್ರಿವೇಣಿಯವರನ್ನು ಮೊದಲ ಗುಂಪಿನವರೆಂದೂ, ಉಷಾ, ಸಾಯಿಸುತೆ, ರಾಧಾದೇವಿ ಅವರನ್ನು ಎರಡನೆಯ ಗುಂಪಿನವರೆಂದೂ, ಆರತಿಯವರನ್ನು ಮೂರನೆಯ ಗುಂಪಿನವರೆಂದು ವಿಭಾಗಿಸಿಕೊಂಡಿದೆ. ಈ ವಿಭಾಗವನ್ನು ಅಧ್ಯಯನದ ಅನುಕೂಲಕ್ಕಾಗಿ ಮಾಡಿಕೊಳ್ಳಲಾಗಿದೆ. ಈ ವಿಭಾಗಗಳನ್ನು ಮಹಿಳೆಯ ಅಭಿವ್ಯಕ್ತಿಯ ಮೂರು ನೆಲೆಗಳಿಗೆ ಅನ್ವಯಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಒಬ್ಬರೇ ಬರಹಗಾರ್ತಿಯಲ್ಲಿ (ಅನುಪಮಾ ನಿರಂಜನ) ಈ ಹಂತಗಳನ್ನು ಗುರುತಿಸಲೂ ಸಾಧ್ಯ. ಕಾಲದಿಂದ ಆಧುನಿಕವಾಗಿದ್ದರೂ ಚಿಂತನೆಗಳು ಪ್ರಾರಂಭದ ಹಂತಗಳಲ್ಲಿ ಉಳಿದಿರುವ ಸಾಧ್ಯತೆಯೂ ಉಂಟು. ಆದ್ದರಿಂದಲೇ ಆಯಾ ಗುಂಪಿನ ಬರಹಗಾರ್ತಿಯರಲ್ಲಿ ಮೂಡಿಬಂದಿರುವ ವಸ್ತು, ವಿನ್ಯಾಸ, ತಂತ್ರ, ಭಾಷೆ ಈ ಪರಿಕರಗಳ ಮೂಲಕವೇ ಅವರ ಬರಹಗಳನ್ನು ಗಮನಿಸಲಾಗಿದೆ.

ಚರ್ಚೆಯ ಪ್ರಾರಂಭದಲ್ಲಿ ಸ್ತ್ರೀವಾದಿ ತಾತ್ವಿಕತೆಯ ಅರಿವಿನೊಂದಿಗೆ ತ್ರಿವೇಣಿ ಕಾದಂಬರಿಗಳನ್ನು ಗಮನಿಸಬಹುದು. ಮಹಿಳಾ ಬದುಕಿನ ಹಲವು ಮಗ್ಗಲುಗಳನ್ನು ತೆರೆದು ತೋರುವ ಸಾಧ್ಯತೆಯನ್ನು ಉಳ್ಳ ತ್ರಿವೇಣಿ ಅವರ ಸಾಹಿತ್ಯವನ್ನು ಸಾಂಪ್ರದಾಯಿಕ

ವಿಮರ್ಶೆ, 'ದ್ವಿತೀಯ ದರ್ಜೆ'ಯದು, ಜನಪ್ರಿಯ ಸಾಹಿತ್ಯ ಎಂದು ಗುರುತಿಸುತ್ತದೆ. ಮಹಿಳೆಯ ಸೃಜನತೆ, ಸಾಹಿತ್ಯಗಳನ್ನು ಅವುಗಳ ಸಾಮಾಜಿಕ ಸಾಂಸ್ಕೃತಿಕ ನೆಲೆಗಳಲ್ಲಿ ಗ್ರಹಿಸುವ ಸ್ತ್ರೀವಾದಿ ಚಿಂತನೆ ಪಾರಂಪರಿಕ ಚಿಂತನೆಗಿಂತ ಭಿನ್ನವಾಗಿ ತ್ರಿವೇಣಿ ಅವರ ಕಾದಂಬರಿಗಳನ್ನು ಗ್ರಹಿಸಲು ಪ್ರಯತ್ನಿಸುತ್ತದೆ. ಅವರ ಕಾದಂಬರಿಗಳು ಮಹಿಳಾ ಲೋಕವನ್ನು ಪ್ರವೇಶಿಸುವುದಕ್ಕೆ ಮುಖ್ಯ ಆಕರಗಳೆಂದು ಗುರುತಿಸಲಾಗುತ್ತದೆ. ತ್ರಿವೇಣಿಯವರ ಕಾದಂಬರಿಗಳಲ್ಲಿ ಕಾಣಬರವುದು ಮಹಿಳೆಯ ಬಹು ಮುಖ್ಯ ಸಮಸ್ಯೆಯಾದ ವಿವಾಹ. ಅದು ಅವಳ ಸಾಮಾಜಿಕ ವಾಸ್ತವವೂ ಆಗಿರುವುದನ್ನು ಎಚ್.ಎಸ್. ಶ್ರೀಮತಿಯವರು, 'ತ್ರಿವೇಣಿಯವರ ಕಾದಂಬರಿಗಳ ಮರು ಓದು' ಕೃತಿಯಲ್ಲಿ ಬಹಳ ವಿವರವಾಗಿ ಚರ್ಚಿಸುತ್ತಾರೆ. "ಬಹುತೇಕ ಅವರ ಎಲ್ಲ ಕತೆ, ಕಾದಂಬರಿಗಳಲ್ಲೂ ಮಹಿಳೆಗೂ ಈ ವಿವಾಹ ಸಂಸ್ಥೆಗೂ ಇರುವ ಸಂಬಂಧಗಳನ್ನೂ, ಸ್ವರೂಪಗಳನ್ನೂ ಗುರುತಿಸುವ ಪ್ರಕ್ರಿಯೆಯೇ ಪ್ರಧಾನವಾದುದು. ವಿವಾಹ ಸಂಸ್ಥೆಯು ಮಹಿಳೆಯ ಎದುರು ನಿಲ್ಲಿಸುವ ಸಮಸ್ಯೆಗಳ ಎಲ್ಲ ವೈವಿಧ್ಯಗಳನ್ನು ತ್ರಿವೇಣಿಯವರು ಚರ್ಚೆಗೆ ಬಳಸಲು ಯತ್ನಿಸಿದ್ದಾರೆ. ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯ ಬದುಕಿನ ಕೇಂದ್ರ ಬಿಂದುವಾಗಿ, ಪ್ರಧಾನ ಸಮಸ್ಯೆಯೇ ಆಗಿ ವಿವಾಹ ಸಂಸ್ಥೆ ಇದೆ ಎನ್ನುವುದು ಮಹಿಳೆಯ ಬದುಕಿನ ವಾಸ್ತವ. ಇದನ್ನು ಕುರಿತ ಮಹಿಳೆಯ ಪ್ರತಿಕ್ರಿಯೆಯನ್ನು ಗ್ರಹಿಸುವ ಒಂದು ಪ್ರಧಾನ ಆಕರ, ಅವಳು ಅಭಿವ್ಯಕ್ತಿಗಾಗಿ ಬಳಸುವ ಸಾಹಿತ್ಯ ಸೃಷ್ಟಿ, ಮಹಿಳೆಯ ಪ್ರತಿನಿಧಿಯಾಗಿ ತ್ರಿವೇಣಿಯವರ ಅಭಿವ್ಯಕ್ತಿಯನ್ನು ಅಧ್ಯಯನ ಮಾಡುವುದು, ಆ ಮೂಲಕ ವಿವಾಹ ಸಂಸ್ಥೆಯನ್ನು ಮಹಿಳೆಯೊಂದಿಗೆ ಅದರ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯ"[೬] ಎನ್ನುವ ಮಾತುಗಳು ತ್ರಿವೇಣಿಯವರ ಕಾದಂಬರಿಗಳನ್ನು ಮರು ಅಧ್ಯಯನ ಮಾಡುವ ಅಗತ್ಯವನ್ನು ಮನಗಾಣಿಸುತ್ತವೆ.

೧೯೨೮ರಲ್ಲಿ ಹುಟ್ಟಿ, ೧೯೬೩ರಲ್ಲಿ ತೀರಿಕೊಂಡ ಅನಸೂಯಾರವರು 'ತ್ರಿವೇಣಿ' ಕಾವ್ಯನಾಮದಿಂದ ಪ್ರಸಿದ್ಧರು. ಇವರು ಸಾಹಿತ್ಯ ಕ್ಷೇತ್ರದಲ್ಲಿದ್ದುದು ಮೂವತ್ತೈದು ವರ್ಷಗಳು ಮಾತ್ರ. ಇದನ್ನು ಏಕೆ ಪರಿಗಣಿಸಬೇಕೆಂದರೆ, ಕನ್ನಡ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಮಧ್ಯ ವಯಸ್ಸಿನ ಸುಮಾರಿಗೆ ಈ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಅನೇಕ ಮಹಿಳಾ ಲೇಖಕಿಯರಿದ್ದಾರೆ. ಬಹುಶಃ ಇನ್ನೂ ಹೆಚ್ಚು ಕಾಲ ಬದುಕಿದ್ದರೆ ತ್ರಿವೇಣಿಯವರ ಸಾಹಿತ್ಯ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವುದರಲ್ಲಿ ಭಿನ್ನ ಮಾರ್ಗ ಹಿಡಿಯುತ್ತಿತ್ತೇನೋ. ಗೊತ್ತಿಲ್ಲ.

'ಅನುಪಮಾ ನಿರಂಜನ' ಅವರು ತಮ್ಮ ಪ್ರಾರಂಭದ ಬರಹಕ್ಕೂ ನಂತರದ ಬರಹಕ್ಕೂ ವ್ಯತ್ಯಾಸ ಇದ್ದುದನ್ನು ಸ್ವತಹ ತಾವೇ ತಮ್ಮ 'ಬರಹಗಾರ್ತಿಯರ ಬದುಕು' ಆತ್ಮಕತೆಯಲ್ಲಿ ಹೇಳಿಕೊಳ್ಳುತ್ತಾರೆ. ಎಂ.ಕೆ. ಇಂದಿರಾ ತಮ್ಮ ಬರಹವನ್ನು ಪ್ರಾರಂಭಿಸಿದ್ದೇ ಮಧ್ಯವಯಸ್ಸಿನಲ್ಲಿ ಎನ್ನುವುದನ್ನು ಇಲ್ಲಿ ಗಮನಿಸಬೇಕು. ತ್ರಿವೇಣಿಯವರು ತಮ್ಮ ಬರವಣಿಗೆಯನ್ನು ೧೯೪೦ರ ಸುಮಾರಿಗೆ ಪ್ರಾರಂಭಿಸಿದರು. ಅವರ ಕೊನೆಯ ಕಾದಂಬರಿ 'ಅವಳ ಮಗಳು' ಪ್ರಕಟಗೊಂಡದ್ದು ೧೯೬೩ರಲ್ಲಿ. ಅಪೂರ್ಣವಾದ ಈ ಕಾದಂಬರಿಯನ್ನು ಎಂ.ಸಿ. ಪದ್ಮ ಪೂರ್ಣಗೊಳಿಸಿದರು. ಒಟ್ಟು ೨೧ ಕಾದಂಬರಿಗಳು ಮತ್ತು ೩ ಕಥಾ ಸಂಕಲನಗಳನ್ನು ರಚಿಸಿರುವ ತ್ರಿವೇಣಿಯವರ ಸಾಹಿತ್ಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಂಭೀರವಾಗಿ ಚರ್ಚೆಗೆ ಒಳಗಾಗಬೇಕಾದರೆ, ಕಳೆದ ಎರಡು ದಶಕಗಳವರೆಗೆ ಕಾಯಬೇಕಾಯಿತು. ನಾಮಕಾವಸ್ಥೆಗೆ ಎಂಬಂತೆ ಸಾಹಿತ್ಯ ಚರಿತ್ರೆಯ ಪಠ್ಯಗಳಲ್ಲಿ ತ್ರಿವೇಣಿಯವರ ಹೆಸರಿರುತ್ತಿತ್ತು. ಚರ್ಚೆಯಂತೂ ಇಲ್ಲವೇ ಇಲ್ಲ. ಮಾಡಿದರೂ 'ಜನಪ್ರಿಯ ಕಾದಂಬರಿಕಾರ್ತಿ', ಮಹಿಳೆಯರಿಗೆ ಪ್ರಿಯವಾಗುವಂಥ ಕಾದಂಬರಿಗಳನ್ನು ಮನೋವಿಜ್ಞಾನದ ಹಿನ್ನೆಲೆಯಲ್ಲಿ ರಚಿಸಿದರು, ಎನ್ನುವಂಥ ವಿಮರ್ಶೆಗಳೇ ಇದ್ದವು. ಅದರಾಚೆಗೆ ಅವರ ಕಾದಂಬರಿಗಳಲ್ಲಿನ ಬಿಡಿ ಬಿಡಿ ಪಾತ್ರಗಳ ವಿಮರ್ಶೆ ಇರುತ್ತಿತ್ತು. 'ತ್ರಿವೇಣಿ' ಕುರಿತಂತೆ ವಿವಿಧ ವಿಮರ್ಶೆಗಳು ಎನ್. ಗಾಯತ್ರಿಯವರ ಸಂಪಾದಕೀಯದಲ್ಲಿ ಬಂದಾಗ ಬಿ.ಎನ್. ಸುಮಿತ್ರಾಬಾಯಿ, ವಿಜಯಾದಬ್ಬೆಯವರು ತ್ರಿವೇಣಿ ಸಾಹಿತ್ಯವನ್ನು ಸ್ತ್ರೀವಾದಿ ಆಲೋಚನೆಯ ಹಿನ್ನೆಲೆಯಲ್ಲಿ ಗ್ರಹಿಸಿದರು. ನಂತರ 'ತ್ರಿವೇಣಿಯವರ ಕಾದಂಬರಿಗಳ ಮರು ಓದು' ಕೃತಿಯಲ್ಲಿ ಎಚ್.ಎಸ್. ಶ್ರೀಮತಿಯವರು ಸ್ತ್ರೀವಾದಿ ತಾತ್ವಿಕತೆಯ ಹಿನ್ನೆಲೆಯಲ್ಲಿ ತ್ರಿವೇಣಿ ಕಾದಂಬರಿ ಲೋಕವನ್ನು ವಿವರಿಸುತ್ತಾರೆ.

ಈಗಾಗಲೇ ಚರ್ಚಿತವಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ತ್ರಿವೇಣಿಯವರ ಕಾದಂಬರಿಗಳಲ್ಲಿ ಹೆಣ್ಣು ಲೋಕ ಹೇಗೆ ಅಭಿವ್ಯಕ್ತಿಗೊಂಡಿದೆ ಎಂಬುದನ್ನು ಗ್ರಹಿಸಲು ಪ್ರಯತ್ನಿಸುತ್ತದೆ ಮತ್ತು ಈ ಮಾದರಿಯ ಅಭಿವ್ಯಕ್ತಿ ಅವರಿಗೆ ಯಾವ ನೆಲೆಯ ಬಿಡುಗಡೆಯನ್ನು ತಂದು ಕೊಟ್ಟಿದೆ. ಕೊಟ್ಟಿಲ್ಲವಾದರೆ ಅದಕ್ಕಿರುವ ಕಾರಣಗಳನ್ನು ಚರ್ಚೆಗೆತ್ತಿಕೊಳ್ಳುತ್ತದೆ.

ತ್ರಿವೇಣಿಯವರು ತಮ್ಮ ಹಿರಿಯ ಲೇಖಕಿಯರಿಗಿಂತ ಉತ್ತಮ ಸಾಮಾಜಿಕ ವಾತಾವರಣದ ಹಿನ್ನೆಲೆಯನ್ನು ಹೊಂದಿದವರು. ಬಾಲ್ಯದಲ್ಲಿ ಅವರಿಗಿದ್ದ ಉಬ್ಬಸ ರೋಗದ

ಯಾತನೆಯನ್ನು ಮರೆಯಲು ಕತೆ ಕಾದಂಬರಿಗಳನ್ನು ಮನೆಯಲ್ಲಿ ಓದಲು ಹಚ್ಚಿದರು ಎಂದು ಅವರ ಪತಿ ಶಂಕರ್ ಅವರು ಲೇಖನವೊಂದರಲ್ಲಿ ಉಲ್ಲೇಖಿಸುತ್ತಾರೆ. ಹಾಗೆ ಓದಿನಲ್ಲಿ ತೊಡಗಿಸಿಕೊಂಡ ತ್ರಿವೇಣಿ ಆಂಗ್ಲ ಸಾಹಿತ್ಯವನ್ನು ಓದಿಕೊಂಡವರು. ಆಗಿನ ಕಾಲದಲ್ಲಿ ಬಿ.ಎ. ಪದವಿಯಲ್ಲಿ ಮನಶಾಸ್ತ್ರವನ್ನು ಆಯ್ಕೆಮಾಡಿಕೊಂಡಿದ್ದರು. ಸುಶಿಕ್ಷಿತ ಬ್ರಾಹ್ಮಣ ಕುಟುಂಬದಿಂದ ಬಂದವರಾಗಿದ್ದರು.

ಈ ಎಲ್ಲ ವೈಯಕ್ತಿಕ ವಿವರಗಳು ಅವರ ಕಾದಂಬರಿಗಳನ್ನು ರೂಪಿಸುವಲ್ಲಿ ಸಹಾಯ ಮಾಡುತ್ತವೆ. ತ್ರಿವೇಣಿಯವರ ಕಾದಂಬರಿಯಲ್ಲಿ ಹೆಣ್ಣಿನ ನಾನಾ ಮಾದರಿಗಳನ್ನು ಅವರು ಸೃಷ್ಟಿಸುವ 'ಹೆಣ್ಣು ಜಗತ್ತು' ವಾಸ್ತವದಲ್ಲಿ ಹೆಣ್ಣು ಬದುಕುತ್ತಿರುವ ಬಗೆಯನ್ನು ಚಿತ್ರಿಸುತ್ತದೆ. ಮಧ್ಯಮ ವರ್ಗ ಅಪರೂಪಕ್ಕೆ ಕೆಳಮಧ್ಯಮ ವರ್ಗಕ್ಕೆ ಸೇರಿದ ಹೆಣ್ಣುಗಳ ಭಾವ, ಭಾಷೆ, ಅತಂತ್ರದ ಬದುಕು, ಸಾಮಾಜಿಕರಣದ ಪ್ರಕ್ರಿಯೆಯಲ್ಲಿ ಸಿಲುಕಿರುವ ಅಸಹಾಯಕ ಸ್ಥಿತಿ ಇವೆಲ್ಲವನ್ನು ಕಾದಂಬರಿ ಲೋಕ ಅನಾವರಣಗೊಳಿಸುತ್ತದೆ. ವಿವಾಹ ಕೇಂದ್ರಿತವಾದ ಹೆಣ್ಣಿನ ಬದುಕಿನ ಸುಖ, ಸಂತೋಷ, ಆತಂಕ, ತಲ್ಲಣ, ಬವಣೆಗಳನ್ನು ಚಿತ್ರಿಸುತ್ತದೆ.

ಎಚ್.ಎಸ್. ಶ್ರೀಮತಿಯವರು ಗುರುತಿಸಿರುವಂತೆ ತ್ರಿವೇಣಿ ಅವರ ಮುಖ್ಯ ಪಾತ್ರಗಳು ಕೆಲವು ಸಾಮಾನ್ಯ ಲಕ್ಷಣಗಳನ್ನು ಪ್ರಕಟಿಸುತ್ತದೆ.

೧) ಈ ಪಾತ್ರಗಳೆಲ್ಲ ಕೌಮಾರ್ಯದ ಕೊನೆಯ ಘಟ್ಟದಿಂದ ಮೊದಲಾಗಿ ವಯಸ್ಕ ಜೀವನದ ಮೊದಲ ಕೆಲವು ವರ್ಷಗಳ ವ್ಯಾಪ್ತಿಯಲ್ಲಿ ಬರುತ್ತವೆ. ಈ ನಿರ್ದಿಷ್ಟ ವ್ಯಾಪ್ತಿಯ ವಯೋಮಾನ ಕೇವಲ ಕಾಕತಾಳಯವಲ್ಲ. ಚಿಕ್ಕ ವಯಸ್ಸಿನ ಮಕ್ಕಳು, ಪಕ್ವಗೊಂಡ ವೃದ್ಧೆಯರು, ಕೇಂದ್ರ ಸ್ಥಾನದಲ್ಲಿ ಪುರುಷರು ಅವರ ಕೃತಿಗಳಲ್ಲಿ ಬರುವುದಿಲ್ಲ. 'ಕಾಶೀಯಾತ್ರೆ'ಯ ಪಾತಮ್ಮ, 'ಹಣ್ಣೆಲೆ ಚಿಗುರಿದಾಗ' ಅನಂತರಾಯ- ಇಂತಹ ಒಂದೆರಡು ವಿನಾಯಿತಿಗಳಿವೆಯಷ್ಟೆ.

೨) ಈ ಎಲ್ಲ ನಾಯಕಿಯರೂ ವಿವಿಧ ಪ್ರಮಾಣದ ಅಕ್ಷರಸ್ಥರು. ಒಂದೆರಡು ತರಗತಿಗಳನ್ನು ಓದಿದವರಿಂದ ಹಿಡಿದು ವೈದ್ಯ ಶಿಕ್ಷಣವನ್ನು ಮುಗಿಸಿದವರವರೆಗೆ ಇವರ ಶಿಕ್ಷಣದ ವ್ಯಾಪ್ತಿ ಇದೆ. ಸಾಂಪ್ರದಾಯಿಕ ಅರ್ಥದ ಕುಟುಂಬ ನಿರ್ವಹಣೆಯ ಶಿಕ್ಷಣದ ಬದಲಾಗಿ ಈ ಆಧುನಿಕ ಅರ್ಥದ ಶಿಕ್ಷಣವನ್ನು ಅವರು ಪಡೆದಿದ್ದಾರೆ.

ಗೌಣವಾಗಿ ಕೇವಲ ಕುಟುಂಬ ನಿರ್ವಹಣೆಯ ಶಿಕ್ಷಣವನ್ನು ಪಡೆದ ಪಾತ್ರಗಳೂ ಇವೆ. ಆದರೆ ಪ್ರಧಾನವಾಗಿ ಇವರೆಲ್ಲ ಮನೆಯಿಂದಾಚೆಗೆ ಹೋಗಿ ಕಲಿತವರು.

೩) ಕಾದಂಬರಿಯಲ್ಲಿ ದೊರೆತಿರುವ ಆಂತರಿಕ ವಿವರಗಳಿಂದ ನೋಡಿದಾಗ ಈ ಎಲ್ಲ ನಾಯಕಿಯರು ಬ್ರಾಹ್ಮಣ ಕುಟುಂಬಗಳಿಗೆ ಸೇರಿರುವುದು ಗೊತ್ತಾಗುತ್ತದೆ. ಈ ಮಾತಿಗೆ ಒಂದೇ ಒಂದು ಮುಖ್ಯ ವಿನಾಯಿತಿ 'ಹಣ್ಣೆಲೆ ಚಿಗುರಿದಾಗ'ದ ಜಯಂತಿ. ಅದೂ ಆಕೆ 'ಅನ್ಯ' ಜಾತಿಯವಳಾಗಿದ್ದು ಬ್ರಾಹ್ಮಣ ಕುಟುಂಬದ ಸೊಸೆಯಾಗಿ ಬರುತ್ತಾಳೆ. ಇಂಥಾ ಮದುವೆಗಳು ಸಾಂಪ್ರದಾಯಿಕ ಕುಟುಂಬಗಳಲ್ಲಿ ಉಂಟುಮಾಡುವ ತಳಮಳಗಳನ್ನು ಚಿತ್ರಿಸಲು ಈ ಪಾತ್ರವನ್ನು ಕಲ್ಪಿಸಿಕೊಳ್ಳಲಾಗಿದೆ. ಈ ಮಾತನ್ನು ಕೇವಲ ವಿವರಣೆಯನ್ನಾಗಿ ಮಾತ್ರ ಹೇಳುತ್ತಿಲ್ಲ. ಮೇಲೆ ಹೇಳಿದ ಎರಡು ಲಕ್ಷಣಗಳಿಗೂ ಈ ಜಾತಿಯ ಹಿನ್ನೆಲೆಗೂ ಇರುವ ಸಂಬಂಧ ಮುಖ್ಯವಾಗಿವೆ. ಮತ್ತು ತ್ರಿವೇಣಿಯವರು ಕೃತಿ ರಚನೆಮಾಡಿದ ಕಾಲದ ಹಿನ್ನೆಲೆಯಲ್ಲಿ ಇದು ಒಂದು ಮುಖ್ಯ ಅಂಶವಾಗಿ ತೋರುತ್ತದೆ"[೧೦] ಎಂದು ಗುರುತಿಸಿದ್ದಾರೆ.

ಹೀಗೆ ಗುರುತಿಸಿಕೊಂಡ ತ್ರಿವೇಣಿಯವರ ಹೆಣ್ಣು; ಸುಶಿಕ್ಷಿತ, ವಿದ್ಯಾವಂತ, ಮೇಲ್ಜಾತಿಯ ಹೆಣ್ಣಾಗಿದ್ದಾಳೆ. ಸುಧಾರಣಾವಾದಿ ಚಳುವಳಿಯ ಪ್ರಭಾವದಿಂದ ದೊರೆತ ಕೆಲವು ರಿಯಾಯತಿಗಳು ಹೆಣ್ಣಿನ ಬದುಕಿನಲ್ಲಿ ಮೇಲಿನ ಪದರದಲ್ಲಿ ಆದರೂ ಸರಿ ಬದಲಾವಣೆಯನ್ನು ತಂದು ಕೊಟ್ಟಿದ್ದವು. ಆ ಕಾರಣದಿಂದಲೇ ತ್ರಿವೇಣಿ ಹೆಣ್ಣು ಲೋಕ ತನ್ನ ಕಾಲದ ಈ ಸುಧಾರಣವಾದಿ ಸೌಲಭ್ಯಗಳಿಗೆ ತನ್ನನ್ನು ತೆರೆದುಕೊಂಡಿತ್ತು. ಕೌಟುಂಬಿಕ ಚೌಕಟ್ಟಿನಾಚೆ ಬರುವ ಅವಕಾಶವನ್ನು ಹೆಣ್ಣು ಪಡೆದುಕೊಂಡಾಕ್ಷಣವೇ ಕೆಲವು ಜವಾಬ್ದಾರಿಗಳಿಗೂ ಅವಳು ಬದ್ಧಳಾಗಿರುತ್ತಾಳೆ. ಶಿಕ್ಷಣ ಸೌಲಭ್ಯ, ಉದ್ಯೋಗದ ಅವಕಾಶಗಳು ಅವಳನ್ನು ಕುಟುಂಬದಿಂದ ವಿಮುಖಳನ್ನಾಗಿಸುತ್ತವೆ. ಆಯ್ಕೆ ವೈಯಕ್ತಿಕ ನೆಲೆಯದಾದರೂ ಅವಳಿಗೆ ಆ ಸಮಸ್ಯೆಯಿಂದ ಪರಿಹಾರ ದೊರಕಬೇಕಾದುದು ಸಾಮಾಜಿಕ ನೆಲೆಯಲ್ಲಿಯೇ ಆ ಕಾರಣದಿಂದಲೇ ತ್ರಿವೇಣಿಯವರ ಕಾದಂಬರಿಗಳಲ್ಲಿ ಬರುವ ಹೆಣ್ಣುಗಳು ಹಲವು ನೆಲೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

೧) ಕುಟುಂಬವೇ ಸರ್ವಸ್ವ. ಅದರಲ್ಲಿಯೇ ತನ್ನ ಸುಖ ಸಂತೋಷಗಳು ಅಡಗಿವೆ ಎನ್ನುವ ನೆಲೆ.

೨) ವೈಯಕ್ತಿಕ ಕಾರಣಗಳಿಂದ ತೆಗೆದುಕೊಂಡ ನಿರ್ಧಾರಗಳಿಂದ ಕೌಟುಂಬಿಕ ಸಾಮರಸ್ಯ ಛಿದ್ರಗೊಳ್ಳುವ ನೆಲೆ.

೩) ಸಾಮಾಜಿಕ ಕಾರಣಗಳಿಗಾಗಿ ದಿಕ್ಕು ತಪ್ಪುವ ಮತ್ತೊಂದು ನೆಲೆ.

ಹೀಗೆ ಮೇಲೆ ಗುರುತಿಸಿಕೊಂಡಿರುವ ನೆಲೆಗಳು ಅಧ್ಯಯನದ ಅನುಕೂಲಕ್ಕಾಗಿ ಮತ್ತು ಹೆಣ್ಣಿನ ಬದುಕು ಯಾವೆಲ್ಲಾ ಸೂಕ್ಷ್ಮತೆಗಳೊಂದಿಗೆ ಸಾಗುತ್ತದೆ ಎಂಬುದನ್ನು ಅರಿತುಕೊಳ್ಳುವ ಸಲುವಾಗಿ ಈ ಮೂರು ನೆಲೆಗಳನ್ನು ಮುಂದೆ ವಿಸ್ತರಿಸಿಕೊಳ್ಳಲಾಗಿದೆ.

೧) ತ್ರಿವೇಣಿಯವರ ಕಾದಂಬರಿಗಳಲ್ಲಿನ ಹೆಣ್ಣು ಜಗತ್ತು ಆಗ ತಾನೇ ವಿದ್ಯಾಭ್ಯಾಸಕ್ಕೆ ತನ್ನನ್ನು ತೆರೆದುಕೊಳ್ಳುತ್ತಿರುವ ಜಗತ್ತು. ಯಾವುದೇ ಹೊಸ ಸಂಗತಿಗಳು ನಮಗೆ ಏಕಕಾಲಕ್ಕೆ ಬಂಧನ ಮತ್ತು ಬಿಡುಗಡೆ ಎರಡನ್ನೂ ಒದಗಿಸುತ್ತವೆ. ಶಿಕ್ಷಣ, ವೈಚಾರಿಕತೆ ತ್ರಿವೇಣಿಯವರ ಹೆಣ್ಣು ಲೋಕಕ್ಕೆ ಏಕಕಾಲದಲ್ಲಿ ಸ್ವಾತಂತ್ರ್ಯ ಮತ್ತು ಬಂಧನ ಎರಡನ್ನೂ ಕಲ್ಪಿಸಿದವು. ಪ್ರೇಮವಿವಾಹ, ವಿವಾಹಪೂರ್ವ ಪ್ರಣಯ, ಮರುವಿವಾಹ ಎಲ್ಲವನ್ನು ಕಾದಂಬರಿಯ ಹೆಣ್ಣುಗಳಿಗೆ ಕಲ್ಪಿಸಿದ ತ್ರಿವೇಣಿ ಅದರಿಂದ ಒದಗುವ ಬಿಕ್ಕಟ್ಟುಗಳನ್ನು ಚಿತ್ರಿಸುತ್ತಾರೆ. ವಿವಾಹವೆನ್ನುವ ಸಂಗತಿಯೇ ಹೆಣ್ಣಿನ ಬದುಕಿಗೆ ಸಮಸ್ಯೆಯನ್ನು ಸೃಷ್ಟಿಸುತ್ತದೆ. ಇನ್ನು ಆಯ್ಕೆ ಮತ್ತು ಜವಾಬ್ದಾರಿಯನ್ನು ಬೇಡುವ ಮೇಲಿನ ವಿವಾಹಗಳ ಪ್ರಸ್ತಾಪದಲ್ಲಂತೂ ಈ ಸಮಸ್ಯೆಗಳು ಸಹಜವೇ. ತನ್ನ ಸಾಮಾಜಿಕ ವಾಸ್ತವದಲ್ಲಿರುವ ಅಭದ್ರತೆಯ ಕಾರಣಗಳಿಂದ ಹೆಣ್ಣು ಸದಾ ಅಸುರಕ್ಷತೆಯ ಭಾವದಲ್ಲಿರುತ್ತಾಳೆ. ತನ್ನದೇ ಆದ ಸುರಕ್ಷಿತ ತಾಣಗಳನ್ನು ಹುಡುಕುತ್ತಿರುತ್ತಾಳೆ. ಕುಟುಂಬ ಆಕೆಗೆ ಸಮಾಜವೇ ಕಲ್ಪಿಸಿದ ಅಂಥ ಒಂದು ಸುರಕ್ಷಿತ ತಾಣ! ವಿವಾಹ ಪ್ರಕ್ರಿಯೆಯ ಮೂಲಕ ಅವಳಿಗೆ ಅದು ದತ್ತವಾಗುತ್ತದೆ. ದತ್ತವಾದ ಬದುಕು ಸಹ್ಯವೋ, ದುರ್ಭರವೋ ಬದುಕಲೇ ಬೇಕು. ಅಂಥ ಅನಿವಾರ್ಯತೆಯಲ್ಲಿ ಬದುಕುವ ವಿವಿಧ ಹೆಣ್ಣುಲೋಕವನ್ನು ತ್ರಿವೇಣಿ ತೆರೆದಿಡುತ್ತಾರೆ. 'ದೂರದ ಬೆಟ್ಟ' ಕಾದಂಬರಿಯಲ್ಲಿ ಶೇಖರ-ಸುನಂದೆಯರ ಮೊದಲ ಭೇಟಿಯ ಸಂದರ್ಭದಲ್ಲಿನ ಮಾತುಗಳು ಗಂಡು -ಹೆಣ್ಣಿನ ಸಾಮಾಜಿಕ ನೆಲೆಗಳನ್ನು ಪರಿಚಯಿಸುತ್ತವೆ. "ಮದುವೆ ಮನೆಯಲ್ಲಿ ಶೇಖರನ ದೃಷ್ಟಿಯನ್ನು ಸಂಧಿಸಿದಾಗ ಜೀವನದಲ್ಲಿ ಮೊಟ್ಟಮೊದಲ ಬಾರಿ ತರುಣನ ದೃಷ್ಟಿಯೆದುರಿಗೆ ಪರಾಜಯುವನ್ನೊಪ್ಪಿಕೊಂಡು ಸುನಂದಾ ತಲೆ ತಗ್ಗಿಸಿದಳು" "ಮದುವೆಯ ಮೂಲಕ ತಾನಾಗಿ ತನ್ನನ್ನು ಪುರುಷನೊಬ್ಬನಿಗೆ ಒಪ್ಪಿಸಿಕೊಳ್ಳುವುದು ಬಹಳ ದೊಡ್ಡ ಜವಾಬ್ದಾರಿ ಎನಿಸಿತು ಸುನಂದಳಿಗೆ. ಅವನ ........ ಏಕವಚನದಲ್ಲಿ ಆತನನ್ನು ಕರೆಯಲು

ಮನಸ್ಸು ಹಿಂತೆಗೆಯಿತು ಅವರ ಆನಂದ, ಸುಖ, ದುಃಖವನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕು. ಎಂತಹ ಜವಾಬ್ದಾರಿ!" ಎಂದು ಕೊಳ್ಳುವ ಸುನಂದೆ ಮದುವೆಯ ಬಗ್ಗೆ ಕನಸು ಮತ್ತು ತಲ್ಲಣ ಎರಡನ್ನು ಏಕಕಾಲದಲ್ಲಿ ಅನುಭವಿಸುತ್ತಾಳೆ.

ತನ್ನ ಮದುವೆ ನಿಶ್ಚಯ ಆದ ನಂತರ ಸುನಂದೆಯ ಮನಸ್ಸಿನ ತುಂಬಾ ಮದುವೆಯ ಕನಸೇ. ಒಮ್ಮೊಮ್ಮೆ ಹಗಲುಗನಸು ಕಾಣುತ್ತ ಕಲ್ಪನೆಯ ಸುಳಿಗೆ ಸಿಕ್ಕಿ ಅವಳ ಮುಗ್ಧ ಮನಸ್ಸು ತಿರುಗುತ್ತಿತ್ತು. ಇಲ್ಲಿ ತ್ರಿವೇಣಿಯವರು 'ಹಗಲುಗನಸನ್ನು' 'ಕಲ್ಪನೆಯ ಸುಳಿ' ಎಂದು ಗ್ರಹಿಸಿದ್ದನ್ನು ಗಮನಿಸಬೇಕು. ದಾಂಪತ್ಯದ ವಾಸ್ತವಗಳಿಂದ ಪಾರಾಗಲು ಕನಸಿನ ಲೋಕದ ಸುಳಿಯನ್ನು ಹೆಣ್ಣು ಆಶ್ರಯಿಸುವುದು ಅವಾಸ್ತವ. ಆದರೆ ಹೆಣ್ಣಿಗದು ತಾತ್ಕಾಲಿಕವಾಗಿ-ಯಾದರೂ ಅನಿವಾರ್ಯ. 'ದೂರದ ಬೆಟ್ಟ'ದ ಸುನಂದ ಕೆಲವು ಬಾರಿ ತನಗೆ ಮದುವೆ ಎಂದು ಜ್ಞಾಪಿಸಿಕೊಂಡು ಬೆಚ್ಚುತ್ತಿದ್ದಳು. ಮದುವೆ ಎಂದರೆ ಅಷ್ಟೇನೂ ಹೆದರಿಕೊಳ್ಳ ಬೇಕಾಗಿಲ್ಲ, ಯಾವಾಗಲೂ ಬೆಳದಿಂಗಳಿನಿಂದ ತುಂಬಿದ ಪಿಸುನಗೆಯ, ಮೇಲು ಮಾತಿನ, ಒಲವಿನ ನೋಟಗಳಿಂದ ತುಂಬಿದ್ದು ದಾಂಪತ್ಯ ಜೀವನ ಎಂದು ಸುನಂದಾ ಸಮಾಧಾನ ಮಾಡಿಕೊಂಡರೂ ಒಮ್ಮೊಮ್ಮೆ ಕಗ್ಗಲ್ಲುಗಳಿಂದ ತುಂಬಿದ ಆಳವಿಲ್ಲದ ಭಾರಿ ಪ್ರಪಾತ ಎನಿಸುತ್ತಿತ್ತು".

ತ್ರಿವೇಣಿಯವರ ಕಾದಂಬರಿಗಳು ಹೆಣ್ಣು ಲೋಕದ ಆತಂಕ ತಲ್ಲಣಗಳಿಗೆ ಧ್ವನಿಯಾಗುತ್ತವೆ. ಮದುವೆ, ಪರಪುರಷನಿಗೆ ತನ್ನನ್ನು ಒಪ್ಪಿಸಿಕೊಳ್ಳುವ ಬಗ್ಗೆ ಹೆಣ್ಣಿನಲ್ಲಿರುವ ಆತಂಕವನ್ನು ತ್ರಿವೇಣಿ ಚಿತ್ರಿಸುತ್ತಾರೆ. ಪರಂಪರೆ, ಮದುವೆ, ಕಾಮದ ಬಗ್ಗೆ ಹೆಚ್ಚಿನ ತಿಳುವಳಿಕೆಯನ್ನು ನೀಡದೆ 'ಗಂಡಾಂದ್ರೆ ಪ್ರತ್ಯಕ್ಷ ದೇವರು ತಿಳಿಯಿತೆ', 'ನಿನ್ನ ಗಂಡ ಹೇಳಿದ ಹಾಗೆ ಕೇಳು, ಮೊಂಡುತನ ಹಟ ಮಾಡಬೇಡ', 'ಗಂಡನ ಮಾತಿಗೆ ಎದುರಾಡಬೇಡ, 'ಗಂಡನ ಸೇವೆಯಿಂದ ದೇವರನ್ನು ಮೆಚ್ಚಿಸಬಹುದು' ಎಂದು ತಿಳುವಳಿಕೆ ನೀಡುತ್ತಾಳೆ! ಸೀತೆಯ ತಾಯಿ. ಈ ಮಾತುಗಳನ್ನು 'ಕೀಲುಗೊಂಬೆ' ಕಾದಂಬರಿಯಲ್ಲಿ ಸೀತೆಯ ತಾಯಿ ಸೀತೆಯ ಮೊದಲ ರಾತ್ರಿಗೆ ಮುನ್ನ ಹೇಳುತ್ತಾಳೆ. ಅಂದು ಸೀತೆಗೆ ದಕ್ಕಿದ್ದು, ಎದುರಾದುದು ಗಂಡನ ಅತ್ಯಾಚಾರವೇ ಹೊರತು ಪ್ರೀತಿಯಲ್ಲ. ಅಂದಿನಿಂದ ಸಾವಿನ ಕಡೆಯ ಗಳಿಗೆಯವರೆಗೆ ಸೀತೆ 'ಕೀಲುಗೊಂಬೆ'ಯೇ ಆಗಿರುವುದನ್ನು ಕಾದಂಬರಿ ಸಾಂಕೇತಿಕವಾಗಿ ಕಟ್ಟಿಕೊಡುತ್ತದೆ. ತನ್ನ ಮೊದಲ ರಾತ್ರಿಯಿಂದ ಹಿಡಿದು ಕಾದಂಬರಿಯ ಉದ್ದಕ್ಕೂ ಸೀತೆ 'ಗಂಡ' ನರಸಿಂಹಯ್ಯನ ಕ್ರೌರ್ಯಕ್ಕೆ ಸಿಕ್ಕು, ಎದುರಿಸುವ ಧೈರ್ಯವಿಲ್ಲದೆ ಸ್ವಂತದ ಆಸೆ,

ಆಕಾಂಕ್ಷೆಗಳನ್ನು ಬದಿಗೊತ್ತಿಗೊಂಡು ನಿರಂತರವಾಗಿ ಬಸಿರು, ಗರ್ಭಪಾತ, ಬಾಣಂತನಗಳಲ್ಲಿ ರೋಗದ ಗೂಡಾಗಿ ಸಾವನ್ನಪ್ಪುವ ದುರಂತಕ್ಕೆ ಒಳಗಾಗುತ್ತಾಳೆ.

'ವಸಂತಗಾನ'ದಲ್ಲಿ ಸರಳೆ ವಾಸುವನ್ನು ಹೊಂದಿಕೊಂಡು ಸರಸದ ದಾಂಪತ್ಯವನ್ನು ಬಾಳುತ್ತಿರುತ್ತಾಳೆ. ಆದರೆ ಸರಳೆ ಗರ್ಭಿಣಿಯಾದಾಗ ತನ್ನ ಗಂಡ ಎಲ್ಲಿ ಬೇರೊಬ್ಬ ಹೆಂಗಸನ್ನು ಪ್ರೀತಿಸಿ ತನ್ನನ್ನು ಕಡೆಗಣಿಸಿ ಬಿಡಬಹುದೆಂಬ ಅಭದ್ರತೆ ಆತಂಕ ಇರುತ್ತದೆ. 'ಹೃದಯಗೀತ'ದಲ್ಲಿನ ಪದ್ಮಿನಿ ಗೆಳತಿ ಗೀತಳ ತಂದೆಯನ್ನು ಮದುವೆಯಾಗುವ ಸಂದರ್ಭ ಅವಳ ಅಸುರಕ್ಷತೆಯ ಭಾವವನ್ನು ಹೇಳುತ್ತದೆ. ಗೀತಾಳ ತಂದೆ ಮೂರ್ತಿ 'ನನಗಿಂತ ಚಿಕ್ಕವಯಸ್ಸಿನ ನೀನು ನಿನ್ನ ವಯಸ್ಸಿನ ಹುಡುಗನನ್ನೇ ಮದುವೆಯಾಗು' ಎಂದಾಗ ಪದ್ಮಿನಿ ತನಗೆ ಆ ವಯಸ್ಸಿನ ಹುಡುಗರ ಪ್ರೀತಿಯ ಬಗ್ಗೆ ನಂಬಿಕೆಯಿಲ್ಲ ಎಂದು ನುಡಿಯುತ್ತಾಳೆ. ಎರಡನೆಯ ಮದುವೆಯಾಗುವ ಹುಡುಗಿಯರು ತಂದೆಯಂಥ ಗಂಡನಲ್ಲಿ ಸುರಕ್ಷಿತತೆಯ ಭಾವವನ್ನು ಕಾಣುವುದನ್ನು ಗಮನಿಸಬೇಕು. 'ತಾವರೆ ಕೊಳ' ಕಾದಂಬರಿಯಲ್ಲಿ ತನ್ನ ಅತ್ತಿಗೆಯ ಸಾವಿನಿಂದ ನೊಂದ ರಮೇಶ ಮುಂಬೈನಲ್ಲಿರುವ ಅಣ್ಣನ ಗೆಳೆಯ ಶೇಷಾದ್ರಿ ರತ್ನರ ಕುಟುಂಬದೊಳಕ್ಕೆ ಪ್ರವೇಶಿಸುತ್ತಾನೆ. ಅತ್ತಿಗೆ ಶಾಂತಾನೊಂದಿಗೆ ವಿಪರೀತದ ಸಲುಗೆಯ ಒಡನಾಟವನ್ನು ಇಟ್ಟುಕೊಂಡಿದ್ದ ರಮೇಶ ರತ್ನಳಲ್ಲೂ ಶಾಂತಳನ್ನೇ ಕಾಣತೊಡಗಿದ. ಅತ್ತಿಗೆಯ ಒಡನಾಟದಲ್ಲಿದ್ದ ನೈತಿಕತೆಯು ರತ್ನಳೊಂದಿಗಿನ ಸಂಬಂಧದಲ್ಲಿ ಇಲ್ಲವಾಗುತ್ತದೆ. ರತ್ನಳ ಗಂಡ ಶೇಷಾದ್ರಿ ತುಂಬಾ ಸುಸಂಸ್ಕೃತ ವ್ಯಕ್ತಿಯಾದರೂ ರತ್ನಳ ಭಾವಲೋಕದ ಬಗ್ಗೆ ತುಂಬಾ ನಿರ್ಲಿಪ್ತತನವನ್ನು ಹೊಂದಿದವನು. ರಮೇಶನೊಂದಿಗಿನ ಸಲುಗೆ ಅವಳು ತನ್ನ ದಾಂಪತ್ಯದಲ್ಲಿ ಹೊಂದಿದ್ದ ಅತೃಪ್ತಿಯನ್ನು ಹೇಳುತ್ತದೆ. ಕಾದಂಬರಿಯ ಕೊನೆಯಲ್ಲಿ ರಮೇಶ ಮತ್ತೆ ತನ್ನ ಊರಿಗೆ ಹೋಗುತ್ತಾನೆ. ಗಂಡ ಮಾತನಾಡಿಸಲು ಪ್ರಯತ್ನಿಸಿದಾಗ ಗುಳಿಗೆ ನುಂಗಿ ತಿರುಗಿ ಮಲಗುವ ರತ್ನಳ ಮನಸ್ಸನ್ನು ತಾವರೆಕೊಳಕ್ಕೆ ಲೇಖಕಿ ಅತ್ಯಂತ ಸಮರ್ಥವಾಗಿ ಹೋಲಿಸುತ್ತಾರೆ. ತನ್ನ ಮನಸ್ಸಿನಲ್ಲಿ ಎಷ್ಟೇ ತೊಳಲಾಟಗಳಿದ್ದರೂ ಕುಟುಂಬದ ಆಸರೆಯಾಚೆ ರತ್ನ ಹೋಗದಿರುವುದಕ್ಕೆ ಕಾರಣ ಅವಳ ಅಸುಕ್ಷಿತ ಭಾವವೇ. 'ಹಣ್ಣೆಲೆ ಚಿಗುರಿದಾಗ" ವಿಧವೆ ಮಾಲತಿ ವಿಧುರ ಪ್ರಸಾದನನ್ನು ಮದುವೆಯಾಗುವುದು ಈ ಕಾರಣಕ್ಕಾಗಿಯೇ. ಹೀಗೆ ತ್ರಿವೇಣಿ ತಮ್ಮ ಕಾದಂಬರಿಗಳಲ್ಲಿ ಕುಟುಂಬದ ವಲಯದೊಳಗೆ ನಾನಾ ರೀತಿಯ ಬದುಕನ್ನು ಬದುಕುತ್ತಿರುವ ಹೆಣ್ಣಿನ ಲೋಕವನ್ನು ತೆರೆದಿಡುತ್ತಾರೆ.

೨) ತ್ರಿವೇಣಿ ಕಾದಂಬರಿಗಳಲ್ಲಿ ತಮ್ಮ ನಾಯಕಿಯರಿಗೆ ಸ್ವಾತಂತ್ರ್ಯ ಹಾಗೂ ಬಂಧನಗಳೆರಡನ್ನೂ ಕಲ್ಪಿಸುತ್ತಾರೆಂಬುದನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆ. ತ್ರಿವೇಣಿಯವರ ನಾಯಕಿಯರು ಪಡೆದಿರುವ ಶಿಕ್ಷಣ ಅವರನ್ನು ಸಂಪೂರ್ಣವಾಗಿ ಸಾಮಾಜಿಕ ಮತ್ತು ಅರ್ಥಿಕ ಬಿಡುಗಡೆಯನ್ನು ದೊರಕಿಸಿಕೊಟ್ಟಿಲ್ಲ. "ತ್ರಿವೇಣಿಯವರ ಈ ನಾಯಕಿಯರು ಆಯ್ಕೆಯ ಜವಾಬ್ದಾರಿ ಮತ್ತು ಅವಕಾಶಗಳನ್ನು ಪಡೆದಿರುವುದು ಒಂದು ಸಾಮಾಜಿಕ ಸಂಗತಿ; ವೈಯಕ್ತಿಕ ನೆಲೆಯ ಸಾಧನೆಯಲ್ಲ"[೧೧] ಎಂದು ಎಚ್.ಎಸ್. ಶ್ರೀಮತಿಯವರು ಸರಿಯಾಗಿ ಗುರುತಿಸುತ್ತಾರೆ. ತಮ್ಮ ವಯಸ್ಸು, ಶಿಕ್ಷಣ, ಜಾತಿಯ ಕಾರಣಗಳಿಂದ ತಮ್ಮ ಕುಟುಂಬಗಳಲ್ಲೇ ಒಂಟಿಯಾಗಿ ಬಾಳುವ ಈ ನಾಯಕಿಯರು ಅದರ ಜವಾಬ್ದಾರಿಗಳನ್ನು ವೈಯಕ್ತಿಕ ನೆಲೆಯಲ್ಲಿ ಹೊರುತ್ತಾರೆ. 'ಅಪಸ್ವರ' – 'ಅಪಜಯ' ಕಾದಂಬರಿಗಳ ನಾಯಕಿ ಮೀರಾ ಡಾಕ್ಟರ ಆಗಬೇಕೆಂಬ ಹಂಬಲವಿದ್ದವಳು. ತಂದೆ-ತಾಯಿಗಳ ಆಸರೆ ಇಲ್ಲದ್ದ ಮೀರಾಳನ್ನು ಸಾಕಿದವರು 'ಮೀರಾ ಓದಿ ಕೆಲಸ ಮಾಡಬೇಕಾಗಿಲ್ಲ. ಈಗಿನ ಕಾಲದ ಹೆಣ್ಣುಮಕ್ಕಳು ಅತೀ ಓದುತ್ತಿರುವುದರಿಂದಲೇ ನಿಶ್ಯಕ್ತರಾಗುತ್ತಿದ್ದಾರೆ.'......... ಎಂದು ಮದುವೆ ಮಾಡುತ್ತಾರೆ. ಮುಂದೆ ಓದುತ್ತೇನೆ ಎಂದ ಮೀರಾಳಿಗೆ ಅವಳ ಗಂಡ ಶಾಮು ಹೇಳಿದ ಮಾತುಗಳವು "ನೀನು ಓದಿ ಏನು ಮಾಡಬೇಕಾಗಿದೆ? ನನ್ನ ಹೃದಯದ ರಾಣಿಯಾಗಿ ನನ್ನನ್ನು ಆಳು. ಕಾಲೇಜಿನ ಹುಡುಗರನ್ನು ನೀನು ಆಳಬೇಕಾಗಿಲ್ಲ" ಎನ್ನುತ್ತಾನೆ. ಹೀಗೆ ತನ್ನ ಆಸೆಗಳಿಗೆ ಸ್ಪಂದಿಸದ ಗಂಡನೊಂದಿಗೆ ಮಗಳು ಹುಟ್ಟುವವರೆಗೂ ಹೊಂದಾಣಿಕೆ ಮಾಡಿಕೊಂಡು ಬದುಕುತ್ತಿದ್ದ ಮೀರಾ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೋಗಿ ಕಲಿತು ವೈದ್ಯಳಾಗುತ್ತಾಳೆ. ಗಂಡನ ಕುಟುಂಬ ಸೌಖ್ಯಕ್ಕಾಗಿ ಆತನಿಗೆ ಇನ್ನೊಂದು ಹೆಣ್ಣನ್ನು ತಂದು ಮದುವೆ ಮಾಡಿಸುತ್ತಾಳೆ. ತನ್ನ ಬದುಕಿನ ಆಯ್ಕೆಯಲ್ಲಿ ಮೀರಾ ತಾನೇ ಅಪಸ್ವರ – ಅಪಜಯವನ್ನು ಅನುಭವಿಸುತ್ತಾಳೆ ಎಂಬುದು ಗಮನಾರ್ಹ. 'ಹೂವು-ಹಣ್ಣು'ವಿನ ರಮಳಿಗೆ ವೇಶ್ಯೆಯಾಗುವ ಬಿಡುವ ಆಯ್ಕೆ ಇರಲಿಲ್ಲ. ಆರ್ಥಿಕ ದುಃಸ್ಥಿತಿ ಅವಳನ್ನು ಈ ಆಯ್ಕೆಗೆ ನೂಕಿತ್ತು. ಅದರಿಂದ ಸಮಾಜ ಬಾಹಿರಳಾಗುತ್ತಾಳೆ. 'ಬೆಳ್ಳಿಮೋಡ'ದ ಇಂದಿರಾ ತನ್ನ ಆಸ್ತಿಯನ್ನು ತನಗಿಂತ ಮುಖ್ಯವೆಂದು ಭಾವಿಸಿದ ಮೋಹನನ್ನು ತಿರಸ್ಕರಿಸುತ್ತಾಳೆ. ವಿವಾಹ ಪೂರ್ವ ಪ್ರಣಯದ ಕನಸುಕಂಡ ಅವಳ ಮನಸ್ಸು ತನ್ನ ಆಯ್ಕೆಯಿಂದಾಗಿ ಒಡೆಯುತ್ತದೆ. ತನ್ನ ತಮ್ಮನೊಂದಿಗೆ ಇರುವ ಆಯ್ಕೆ ಅವಳನ್ನು ವಿಷಾದದ ಬದುಕಿನತ್ತ ನೂಕುತ್ತದೆ. ಕಾದಂಬರಿಯ ಕಡೆಯಲ್ಲಿ ಮೋಹನನಿಗೆ

ಆಕೆ ಹೇಳುವ ಮಾತುಗಳು – "ಈಗ ಎರಡು ವರ್ಷಗಳ ಹಿಂದೆ ಬದುಕಿನಿಂದ ನಾನು ಪಡೆಯುತ್ತಿದ್ದ ನಿರ್ಮಲ ಮುಗ್ಧ ಆನಂದ ಇನ್ನು ಎಂದೆಂದಿಗೂ ಪಡೆಯಲಾರೆ. ಮುದುಕಿಯ ಪಾಲಿಗೆ ಯೌವನ ಒಂದು ನೆನಪು ಮಾತ್ರ. ನನಗೂ ಹಾಗೆಯೇ ಆ ಎಳೆತನದ ಆನಂದ ಒಂದು ನೆನಪು. 'ಬೆಳ್ಳಿ ಕರಗಿ ಹೋಯಿತು ಇನ್ನು ನನಗುಳಿದಿರುವುದು ಮೋಡ ಮಾತ್ರ'. ಎನ್ನುವ ಮಾತು ಅವಳ ಕನಸು ಕರಗಿ ಹೋದ ವಿಷಾದವನ್ನು ಹೇಳುತ್ತದೆ.

೩) ತ್ರಿವೇಣಿಯವರ ಕಾದಂಬರಿಗಳಲ್ಲಿ ಹೆಣ್ಣು ಅನೇಕ ಮನೋವೈಕಲ್ಯಕ್ಕೀಡಾಗಿ-ರುವುದನ್ನು ಕಾಣಬಹುದು. ಅಂಥ ಮನೋವೈಕಲ್ಯಗಳಿಗೆ ಕಾರಣಗಳು ವೈಯಕ್ತಿಕ ನೆಲೆ ಮತ್ತು ಸಾಮಾಜಿಕ ನೆಲೆಯಲ್ಲಿರುತ್ತವೆ. 'ಶರಪಂಜರ'ದ ಕಾವೇರಿ ವಿವಾಹ ಪೂರ್ವದಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗಿ ಸತೀಶ್‌ನೊಂದಿಗೆ ಸುಖೀ ಕುಟುಂಬದ ಕಲ್ಪನೆಯಿಂದ ಮದುವೆಯಾಗುತ್ತಾಳೆ. ಆದರೆ ಎರಡನೆಯ ಬಾಣಂತನದಲ್ಲಿ ಅವಳ ಒಳಗಿದ್ದ ಅಪರಾಧಿ ಪ್ರಜ್ಞೆ ಉನ್ಮಾದದ ರೂಪ ತಳೆಯುತ್ತದೆ. ಆಸ್ಪತ್ರೆ ಸೇರಿದ ಕಾವೇರಿಯನ್ನು ಮತ್ತೇ ಕುಟುಂಬ ಸಮಾಜ ಒಳ ಸೇರಿಸುವುದೇ ಇಲ್ಲ. ಸತೀಶನ ಅನೈತಿಕ ಸಂಬಂಧದ ಬಗ್ಗೆ ಚಕಾರವೆತ್ತದ ಕುಟುಂಬ ಸಮಾಜ ಕಾವೇರಿಯನ್ನು ಮತ್ತೆ ಆಸ್ಪತ್ರೆಗೆ ಕಳಿಸುವಲ್ಲಿ ತನ್ನ ದ್ವಂದ್ವದ ಧೋರಣೆಯನ್ನು ತಳೆಯುತ್ತವೆ.

'ಹೂವು-ಹಣ್ಣು' ಕಾದಂಬರಿಯ ರಮಾಳ ಆರ್ಥಿಕ ಸಂಕಷ್ಟಕ್ಕೆ ಸ್ಪಂದಿಸದ ಸಮಾಜ ಅನಿವಾರ್ಯವಾಗಿ ಅವಳನ್ನು ವೇಶ್ಯಾ ಜೀವನದತ್ತ ತಳ್ಳುತ್ತದೆ. "ಬಡತನ, ಕಾಮುಕ ದೃಷ್ಟಿಯಿಂದಷ್ಟೆ ಹೆಣ್ಣನ್ನು ನೋಡುವ ಸಮಾಜ, ಇವು ಹೊರಗಿನ ದುಡಿಮೆಗೆ ಪಳಗಿರದ ರಮೆಯನ್ನು ವೇಶ್ಯಾಜೀವನದತ್ತ ತಳ್ಳುವುದನ್ನು ಕಾಣಿಸಲು 'ಹೂವು-ಹಣ್ಣು' ಯತ್ನಿಸಿದೆ. 'ಪಾವಿತ್ರ್ಯದ' ಮೌಲ್ಯಗಳ ಮೂಲಕ ಹೆಣ್ಣಿನ ಮೇಲೆಯೇ ಹೆಚ್ಚಾಗಿ ಹೇರಲ್ಪಟ್ಟ ಲೈಂಗಿಕ ವಿಧಿ-ನಿಷೇಧಗಳು ಹಾಗು ವಿಟ-ವೇಶ್ಯಾ ಸಂಬಂಧದಲ್ಲಿ ವಿಟನ 'ಕೊಳ್ಳುವ' ಶಕ್ತಿಯಿಂದಾಗಿ ವೇಶ್ಯೆಯಾದ ಹೆಣ್ಣು ಸಮಾಜದ ದೃಷ್ಟಿಯಲ್ಲಿ ವ್ಯಕ್ತಿತ್ವದ ಘನತೆ, ಮಾನ್ಯತೆಯನ್ನು ಕಳೆದುಕೊಳ್ಳುತ್ತಾಳೆ"[೧೨] ಎಂದು ವಿಜಯಾದಬ್ಬೆ ಅವರು ಹೆಣ್ಣು ದಿಕ್ಕು ತಪ್ಪುವಲ್ಲಿ ಸಮಾಜದ ಪಾತ್ರವನ್ನು ಗುರುತಿಸುತ್ತಾರೆ.

ಕೇವಲ ಪುರುಷ ಪ್ರಧಾನ ನೆಲೆಯಿಂದಲೇ ತ್ರಿವೇಣಿಯವರನ್ನು ಅಧ್ಯಯನ ಮಾಡಿದ್ದರೆ ಒದಗುತ್ತಿದ್ದ ಅಂಶಗಳಿಗಿಂತ ಭಿನ್ನವಾದ ಅಂಶಗಳನ್ನು ಸ್ತ್ರೀವಾದಿ ಚಿಂತನೆಗಳ

ಹಿನ್ನೆಲೆಯಲ್ಲಿ ಗುರುತಿಸಲಾಗಿದೆ. ಇಷ್ಟಲ್ಲದೆ ತ್ರಿವೇಣಿಯವರ ನಾಯಕಿಯರು ತಮ್ಮ ಸಮಸ್ಯೆಗಳಿಂದ ಹೊರಬರಲು ಪರ್ಯಾಯ ಮಾರ್ಗವೆಂಬಂತೆ ಕನಸುಗಳನ್ನು ಬಳಸುವುದನ್ನು ಗಮನಿಸಬಹುದು. ಬೆಳ್ಳಿಮೋಡದ ಇಂದಿರಾ, ಹೃದಯಗೀತದ ಪದ್ಮಿನಿ, ಅಪಸ್ವರದ ಮೀರಾ, 'ಅವಳ ಮಗಳು' ಕಾದಂಬರಿಯಲ್ಲಿನ ಭವಾನಿ ಇವರೆಲ್ಲಾ ಕನಸನ್ನು ತಮ್ಮ ಲೋಕದ ಕಟುತ್ವಕ್ಕೆ ಪರ್ಯಾಯವೆಂಬಂತೆ ಬಳಸುವುದನ್ನು ಗಮನಿಸಬೇಕು.

ಈ ಮಾದರಿಗಳಲ್ಲಿ ತ್ರಿವೇಣಿಯವರ 'ಹೆಣ್ಣು ಲೋಕ' ಅಭಿವ್ಯಕ್ತಿಗೊಂಡಿರುವುದನ್ನು ಗಮನಿಸಬಹುದು. ಕಾದಂಬರಿಕಾರ್ತಿ ತಮ್ಮ ಕಾದಂಬರಿಗಳಲ್ಲಿ ಹೆಣ್ಣಿನ ಬದುಕಿನಲ್ಲಿರುವ ಶೋಷಣೆಯ ಬಗ್ಗೆ ಬರೆದಿದ್ದಾರೆ. ಕುಟುಂಬ, ವಿವಾಹ ಅವಳ ಬದುಕಿನ ಬಹುದೊಡ್ಡ ಸಮಸ್ಯೆಗಳಾಗಿರುವುದನ್ನು ಗುರುತಿಸಿದ್ದಾರೆ, ಆ ಕುರಿತು ಅನೇಕ ಪ್ರಶ್ನೆಗಳನ್ನೆತ್ತಿದ್ದಾರೆ. ಆದರೆ ಅವುಗಳಿಗೆ ಪರಿಹಾರವನ್ನು ಒದಗಿಸುವಲ್ಲಿ ಸೋತಿದ್ದಾರೆ. ಇಂಥ ಸೋಲಿಗೆ ಕಾರಣಗಳನ್ನು ವೈಯಕ್ತಿಕ ನೆಲೆಯಲ್ಲಿ ಗುರುತಿಸದೆ ಸಾಮಾಜಿಕ ನೆಲೆಯಲ್ಲಿ ಗುರುತಿಸಬೇಕಾಗುತ್ತದೆ. ಅಂದಿನ ಕಾಲದ ಮಹಿಳಾ ಬದುಕಿನ ಸ್ವರೂಪದಲ್ಲಿ ತ್ರಿವೇಣಿಯವರು ಹೆಚ್ಚಿನ ಆಳಕ್ಕೆ ಇಳಿಯಲು ಸಾಧ್ಯವಾಗಿಲ್ಲವೆನ್ನಿಸುತ್ತದೆ. ತ್ರಿವೇಣಿ ಅವರ ಕಾದಂಬರಿಗಳ ನೆಲೆ-ಬೆಲೆಗಳನ್ನು ಶುದ್ಧ ಸಾಹಿತ್ಯಿಕ ಮಾನದಂಡಗಳಾಚೆ ಇಟ್ಟು ನೋಡಿದಾಗ ಮಾತ್ರ ಮಹಿಳಾ ಲೋಕದ ಅನೇಕ ಮಗ್ಗಲುಗಳು ನಮಗೆ ದಕ್ಕುತ್ತವೆ ಎಂಬುದನ್ನು ಈವರೆಗೆ ಚರ್ಚಿಸಲಾಗಿದೆ.

ತ್ರಿವೇಣಿಯವರ ಕಾದಂಬರಿಗಳಷ್ಟೇ ಮುಖ್ಯವಾಗಿ ಇನ್ನುಳಿದ ನಾಲ್ಕು ಜನ ಕಾದಂಬರಿಕಾರ್ತಿಯರು ಮಹಿಳಾ ಪ್ರಶ್ನೆಗಳನ್ನು ಎತ್ತಿದ್ದಾರೆಯೇ ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರಿಸಲು ಹೊರಟಾಗ; ಅಲ್ಲಿ 'ಕನಸುಗಣ್ಣಿನ ಮಧ್ಯಮವರ್ಗದ ಮಹಿಳಾ ಲೋಕ'ವೊಂದು ಅನಾವರಣವಾಗಿರುವುದು ಕಾಣುತ್ತದೆ. ಅಲ್ಲೊಂದು ಭ್ರಮೆಯ ಲೋಕ ಸೃಷ್ಟಿಯಾಗುತ್ತದೆ. ಅಲ್ಲಿರುವ ಪಾತ್ರಗಳು, ಸನ್ನಿವೇಶಗಳು, ಸಂಭಾಷಣೆಗಳು ವಾಸ್ತವದ ನೆಲೆಗಟ್ಟಿನಿಂದ ಹುಟ್ಟಿದವೆಂದು ಭಾಸವಾಗುತ್ತಿದ್ದರೂ, ಸೂಕ್ಷ್ಮವಾಗಿ ಗಮನಿಸಿದಾಗ ಅಲ್ಲಿಲ್ಲದ ಲೋಕದ ಚಿತ್ರಣವಿರುತ್ತದೆ. ಹತ್ತಿಕ್ಕಲ್ಪಟ್ಟ ಮನಸ್ಸುಗಳಿಂದ ಸೃಷ್ಟಿಯಾದ ಈ ಭ್ರಮಾ ಸಾಹಿತ್ಯದ ಅಧ್ಯಯನ ಮುಖ್ಯವೇ, ಅದರಿಂದ ಒದಗುವ ಪ್ರಯೋಜನವೇನು ಎಂಬ ಪ್ರಶ್ನೆಗಳಿಗೆ ಉತ್ತರ 'ಮಹಿಳಾ ಲೋಕ'ವೊಂದರ ಅನ್ವೇಷಣೆ ಎಂಬುದೇ ಆಗಿದೆ.

'ಜನಪ್ರಿಯ' ಎಂದು ಗುರುತಿಸಿರುವ ಈ ಬಗೆಯ ಮಹಿಳಾ ಸಾಹಿತ್ಯ ಪುರುಷ ಚಿಂತನೆಯ ನೆಲೆಗಟ್ಟಿನಿಂದಲೇ ಬಂದಿದೆ. ಈ ಕಾದಂಬರಿಗಳಲ್ಲಿನ ನಾಯಕಿ-ನಾಯಕರು

ಸಂಪ್ರದಾಯ ವಿರೋಧಿಗಳಲ್ಲ. ಸನಾತನ ಸಂಪ್ರದಾಯ, ಆಚಾರ-ವಿಚಾರಗಳಲ್ಲಿ ಅನನ್ಯ ನಂಬಿಕೆ ಅವರಿಗೆ. ಸಮಾಜ ಕಲ್ಪಿಸಿರುವ ಆರೋಪಿತ ಸ್ತ್ರೀತ್ವದ ಕಲ್ಪನೆಯೇ ಇಲ್ಲೂ ಇರುವುದು. ಇಲ್ಲಿನ ಹೆಣ್ಣು ವಿನಯೆ, ಗಂಭೀರೆ, ಜಾಣೆ, ಸುಂದರಿ, ಒಳ್ಳೆಯ ಮಗಳು, ಸೊಸೆ, ಹೆಂಡತಿ, ತಾಯಿ, ಅತ್ತೆ- ಹೀಗೆ ಮಾದರಿ ಪಾತ್ರಗಳ ನಿರ್ವಹಣೆಯಲ್ಲಿ ತೃಪ್ತಳಾಗುವ ಸ್ವಭಾವದವಳು. ಆಧುನಿಕ ಗಂಡನಿದ್ದರೆ, ಹೆಂಡತಿಯೂ ಆಧುನಿಕವಾಗಿಯೇ ಚಿತ್ರಿತಳಾಗುತ್ತಾಳೆ. ಒಳ್ಳೆಯ ಅನುಕರಣಶೀಲೆ, ಇಂಥ ಹೆಣ್ಣಿಗೆ ತಕ್ಕನಾದ ಗಂಡನ ಚಿತ್ರಣ, ಮಕ್ಕಳ ಚಿತ್ರಣ, ಸುಖಸಂಸಾರದ ಚಿತ್ರಣ, ಬಡತನವನ್ನು ಗೆಲ್ಲುವ ಹೆಣ್ಣಿನ ಚಿತ್ರಣ....... ಹೀಗೆ ಕಾದಂಬರಿಯ ಲೋಕವಿರುತ್ತದೆ. ಇಡೀ ಕಾದಂಬರಿಗಳ ಓದು ಭಾವುಕ ಲೋಕಕ್ಕೆ ಪ್ರವೇಶವನ್ನು ಮೂಡಿಸುತ್ತದೆ. ವಾಸ್ತವದ ನೆಲೆಗಟ್ಟಿನಿಂದ ಬದುಕನ್ನು ಅರ್ಥೈಸಿಕೊಂಡಂಥವರಿಗೆ ಇಂಥದ್ದೊಂದು ಭ್ರಮೆಯ ಲೋಕವನ್ನು ಕಟ್ಟಿಕೊಳ್ಳುವ ಅಗತ್ಯ ವಿರುವುದಿಲ್ಲ. ಆದರೆ ಅದು ಸಾಧ್ಯವಿಲ್ಲದ ಬಹು ದೊಡ್ಡ ಮಹಿಳಾ ಸಮಾಜ ಇಂಥ ಲೋಕವನ್ನು ಕಟ್ಟುವ ಮತ್ತು ಓದುವ ಪ್ರಕ್ರಿಯೆಯಲ್ಲಿ ಸತತವಾಗಿ ತೊಡಗಿಕೊಂಡಿದ್ದಾರೆ. ಇಂಥದ್ದೊಂದು ನಿರರ್ಥಕವಾದ ಪ್ರಯತ್ನದಲ್ಲಿ ಬಹು ದೊಡ್ಡ ಮಹಿಳಾ ಸಮುದಾಯ ಯಾವ ಕಾರಣಗಳಿಗೋಸ್ಕರ ತನ್ನನ್ನು ತೊಡಗಿಸಿಕೊಂಡಿದೆ ಎಂಬುದನ್ನು ಸ್ತ್ರೀವಾದಿ ಚಿಂತನೆಗಳ ನೆಲೆಯಿಂದ ಗ್ರಹಿಸಿದರೆ ಮಹಿಳಾ ಲೋಕ ಮತ್ತದನ್ನು ಬಂಧಿಸಿರುವ ಅಡೆ-ತಡೆ ಎಲ್ಲವನ್ನು ಅರ್ಥೈಸಿಕೊಳ್ಳುವ ಸಾಧ್ಯತೆಗಳು ಸಾಧ್ಯವಾಗುತ್ತದೆ.

ಮಹಿಳೆಯ ಪ್ರತಿಭೆಗಿರುವ ತೊಡಕುಗಳನ್ನು ಕುರಿತು 'ಸಿಮನ್ ದ. ಬೋವಾ' ಹೀಗೆನ್ನುತ್ತಾಳೆ. "ಮಹಿಳೆ ಕುಟುಂಬ ಮತ್ತು ಸಮಾಜಕ್ಕೆ ಸೇರಿದ ಆಸ್ತಿ. ತಮ್ಮಷ್ಟಕ್ಕೆ ತಾವೇ ಸ್ವತಂತ್ರಳಲ್ಲದ ಆಕೆಗೆ ವಿದ್ಯೆ ದೈವದತ್ತವಾಗಿ ಬಂದರೂ ಸಾಮಾಜಿಕ ಸ್ಥಿತಿ ಹಾಗೂ ಪರಿಸರದ ಒತ್ತಡಗಳಿಂದ ಪ್ರತಿಭೆ ಬಳಕೆಯಾಗದಿದ್ದರೆ ಅದು ಇಳಿದ ಗರ್ಭವೆಂದೇ ಅರ್ಥ"[೧೩] ಎಂದಿರುವ ಮಾತುಗಳು ಮಹಿಳೆಯ ಸೃಜನತೆಯ ಬೇರುಗಳಲ್ಲಿ ಇಳಿದಿರುವ ಪಿತೃಪ್ರಧಾನತೆಯ ಪ್ರಭಾವವನ್ನು ಹೇಳುತ್ತವೆ. ಹಿಂದಿನ ಅಧ್ಯಾಯಗಳಲ್ಲಿನ ಚರ್ಚೆ ಮಹಿಳೆಯ ಸೃಜನಶೀಲತೆಯ ನೆಲೆಯಲ್ಲೇ ಇರುವ ತೊಡಕುಗಳನ್ನು ಮತ್ತು ಅದು ಅಭಿವ್ಯಕ್ತಿಯಾಗುವಾಗಿನ ಸಂದರ್ಭಗಳಲ್ಲಿ ಎದುರಿಸಬೇಕಾದ ಸಂಗತಿಗಳನ್ನು ಹೇಳುತ್ತದೆ. ಇಡಿಯ ಸಾಹಿತ್ಯ ಚರಿತ್ರೆ, ಮಹಿಳೆಯನ್ನು ದಾಖಲಿಸುವಲ್ಲಿ ಮತ್ತು ದಾಖಲಿತ ಮಹಿಳಾ ಸಾಹಿತ್ಯವನ್ನು ಕುರಿತು ಲಕ್ಷಿಸುವಲ್ಲಿ ಹೆಚ್ಚಿನ ಆಸಕ್ತಿಯನ್ನೇನೂ ತೋರಿಲ್ಲ. ಇದುವರೆಗೂ

ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಮಹಿಳಾ ಸಾಹಿತ್ಯವನ್ನು ಕುರಿತಂತೆ ಬೀಸು ಹೇಳಿಕೆಗಳಿವೆ ಮತ್ತು ಕೆಲವೇ ಕೆಲವು ಜನ ಮಹಿಳಾ ಲೇಖಕಿಯರನ್ನು ಕುರಿತಂತೆ ಚರ್ಚೆ ನಡೆದಿವೆ. ಉಳಿದ ಬಹು ಸಮುದಾಯದ ರಚನೆಯನ್ನು ಅಲಕ್ಷಿಸಲಾಗಿದೆ. ಇದನ್ನೇ ಇಲೇನ್ ಶೋವಾಲ್ಟರ್ ತನ್ನ ಕೃತಿ 'ಎ ಲಿಟರೇಚರ್ ಆಫ್ ದೇರ ಓನ್'ನಲ್ಲಿ ಚರ್ಚಿಸುತ್ತಾಳೆ. ಕೇವಲ ಮಹಾನ್ ಎನ್ನಿಸಿಕೊಳ್ಳುವ ನಾಲ್ಕು-ಐದು ಜನ ಕಾದಂಬರಿಕಾರ್ತಿಯರನ್ನು ಗುರುತಿಸಿ ಉಳಿದವರನ್ನು ಚರ್ಚಿಸದಿರುವುದನ್ನು ಗುರುತಿಸುತ್ತಾಳೆ. "Criticism of women novelists, while focusing on these happy few, has ignored those who are not 'great' and left them out of anthologies, histories, textbooks and minor novelists who were the links in the chain that bound one generation to the next"[೧೪.]....... ಎನ್ನುವ ಮಾತುಗಳು ಕನ್ನಡದ ಸಂದರ್ಭಕ್ಕೂ ಅನ್ವಯಿಸುತ್ತವೆ. ಮಹಿಳಾ ಸಾಹಿತ್ಯದ ಚರ್ಚೆಯಲ್ಲಿ ನಗಣ್ಯ ಮಾಡಿರುವ ಬಹುಸಮುದಾಯ ಪರಂಪರೆಯ ಮುಖ್ಯ ಎಳೆಗಳೇ ಆಗಿರುತ್ತಾರೆ. ಆದ್ದರಿಂದ, ಇವರನ್ನು 'ಜನಪ್ರಿಯ ಲೇಖಕಿಯರು ಎಂತಲೋ, ಅವರದು ಸತ್ವಹೀನ ಬರಹಗಳು ಎಂತಲೋ ಇಡೀ ಸಾಹಿತ್ಯದ ಚರ್ಚೆಯಿಂದ ಹೊರಗಿಡುವ ಜಾಯಮಾನ ಬಹುಸಮುದಾಯದ ಬದುಕಿನ ಬಗೆಗಳನ್ನು ಗಮನಿಸದಿರುವ ಧೋರಣೆಗಳನ್ನು ಸೂಚಿಸುತ್ತದೆ. ಸಮಾಜದಲ್ಲಿ ಬಹು ಜನರಿಂದ ಮಾನ್ಯತೆಯನ್ನು ಪಡೆದುಕೊಳ್ಳುವ ಸಂಗತಿಗಳನ್ನು ಗಮನಿಸುವುದು ಮುಖ್ಯವಾಗುತ್ತದೆ.

ಮೊದಲನೆಯದಾಗಿ ಚರ್ಚಿತವಾಗಬೇಕಾದ ಸಂಗತಿಯೆಂದರೆ, ಈ ರೀತಿಯ ಭ್ರಮೆಯ ಲೋಕವನ್ನು ನಿರ್ಮಿಸುವ ಸೃಜನತೆ ತನ್ನ ಬೇರುಗಳಲ್ಲಿಯೇ ಕೆಳದರ್ಜೆಯದೇ, ಅದು ಗುಣಾತ್ಮಕವಾದುದಲ್ಲವೇ ಎಂದರೆ ಖಂಡಿತವಾಗಿಯೂ ಮಹಿಳಾ ಸೃಜನತೆ ಕೀಳುನೆಲೆಯದಾಗಲಿ, ದ್ವಿತೀಯ ದರ್ಜೆಯದಾಗಲಿ ಅಲ್ಲ ಎನ್ನುವ ಸಂಗತಿ ಸ್ಪಷ್ಟವಾಗುತ್ತದೆ. ಸಮಸ್ಯೆಗಳು ಇರುವುದೆಲ್ಲಾ ಅದನ್ನು ವ್ಯಾಖ್ಯಾನಿಸುವ ನೆಲೆಯಲ್ಲಿ ಇದೆ ಮತ್ತು ಮಹಿಳಾ ಸೃಜನತೆ ಶಾಬ್ದಿಕ ನೆಲೆಯಲ್ಲಿ ಹೊರಬರುವಾಗ ಆಯ್ದುಕೊಳ್ಳುವ ಪರಿಕರಗಳಲ್ಲಿದೆ ಎಂಬುದನ್ನು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಗಮನಿಸಲಾಗಿದೆ.

ಮಹಿಳೆಯರ ಸಾಹಿತ್ಯದ ಮಿತಿಗಳನ್ನು ಗುರುತಿಸುವಂಥ ಸಂದರ್ಭಗಳಲ್ಲಿ ಬಹು ಮುಖ್ಯವಾಗಿ ಗುರುತಿಸುವ ಮಿತಿ ಎಂದರೆ ಅದು ಅವಳ ವಸ್ತುವಿನ ಆಯ್ಕೆಗೆ ಸಂಬಂಧಿಸಿದ್ದು. ಸದಾ ಕುಟುಂಬ ವಿವಾಹ, ಸಂಬಂಧಗಳಾಚೆ ಮಹಿಳೆಯರು ಭಿನ್ನ ವಸ್ತುಗಳನ್ನು ತಮ್ಮ

ಕೃತಿಗಳಲ್ಲಿ ತರುವುದಿಲ್ಲ. ಎನ್ನುವ ಆಕ್ಷೇಪಣೆಗೇ ಸ್ತ್ರೀವಾದಿ ಓದು ಕಾರಣಗಳನ್ನು ಒದಗಿಸುತ್ತದೆ. ಮಹಿಳೆಯ ಇಡೀ ಅಸ್ತಿತ್ವ ಹುದುಗಿಕೊಂಡಿರುವುದೇ ಈ ನೆಲೆಯಲ್ಲಿ, ಆದ್ದರಿಂದ ಸಹಜವಾಗಿಯೇ ಅದು ಚಿತ್ರಿತವಾಗುವಾಗ ತನ್ನ ಲೋಕಗ್ರಹಿಕೆಯನ್ನೇ ವ್ಯಕ್ತಪಡಿಸುತ್ತದೆ. ಇಷ್ಟಲ್ಲದೆ ಮಹಿಳೆಯ ಬದುಕಿನ ಕೇಂದ್ರ ಬಿಂದುವಾಗಿ ವಿವಾಹ, ಗೃಹಿಣಿತ್ವಗಳು ಅವಳನ್ನು ಆವರಿಸಿಕೊಂಡಿರುವುದರಿಂದ, ಸಹಜವಾಗಿಯೇ ಮಹಿಳಾ ಬರಹದ ಮೂಲ ಸೆಲೆಯು ಅಲ್ಲಿಂದಲೇ ಬರುತ್ತದೆ. 'ಜನಪ್ರಿಯ' ಕಾದಂಬರಿಗಳು ಎಂದು ಗುರುತಿಸಿರುವ ಆಯ್ದ ಐದು ಜನ ಲೇಖಕಿಯರ ಕಾದಂಬರಿಗಳನ್ನು ಅವಲೋಕಿಸಿದಾಗಲೂ ಇಂಥದ್ದೊಂದು ಮಹಿಳಾ ಲೋಕವೇ ಕಂಡುಬರುತ್ತದೆ. ಅವಳ ಸುಖ-ದುಃಖ-ಆಸೆ- ನಿರಾಶೆ ಅವಲಂಬನದ ಬದುಕು ಎಲ್ಲವೂ ಈ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ.

ಕೇವಲ ದ್ವಿತೀಯ ದರ್ಜೆಯ ಸಾಹಿತ್ಯವೆಂದು ಗುರುತಿಸಿ ಬಿಟ್ಟರೆ ಅದರಿಂದ ಮಹಿಳಾ ಬದುಕಿಗೆ ಯಾವ ಲಾಭವೂ ದೊರೆಯುವುದಿಲ್ಲ. ಮಹಿಳಾ ಲೋಕದ ವಾಸ್ತವಗಳನ್ನು ನಾವು ಗ್ರಹಿಸಬೇಕಾದರೆ ಇಂಥ ನಗಣ್ಯ ಸಾಹಿತ್ಯವನ್ನು ಮರು ಓದಿಗೆ ಒಳಪಡಿಸಬೇಕಾದ ತುರ್ತು ಖಂಡಿತವಾಗಿಯೂ ಇದೆ. ಅನೇಕ ಸ್ತ್ರೀವಾದಿ ವಿಮರ್ಶಕರು ಇಂಥ ವಿಮರ್ಶೆಗಳಿಗೆ ಸರಿಯಾಗಿಯೇ ಪ್ರತಿಕ್ರಿಯಿಸಿದ್ದಾರೆ. ಇಂಥ ಪ್ರಯತ್ನಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆದು ಕಾಣೆಯಾದ ಮಹಿಳಾ ಸಾಹಿತ್ಯ ಚರಿತ್ರೆಯೊಂದನ್ನು ರೂಪಿಸಿಕೊಳ್ಳುವ ಅಗತ್ಯ ಇಂದಿನದು. ಕನ್ನಡದ ಸಂದರ್ಭದಲ್ಲಿ ಹಿರಿಯ ಮಹಿಳಾ ಸಾಹಿತಿಗಳ ಸಮಗ್ರ ಸಾಹಿತ್ಯದ ಅಧ್ಯಯನ ಒಂದು ಕಡೆ ರೂಪುಗೊಳ್ಳುತ್ತಿದ್ದರೆ, ಇನ್ನೊಂದೆಡೆ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಗಳು ರೂಪುಗೊಳ್ಳುತ್ತಿವೆ. ಅನೇಕ ಸಂಶೋಧನೆಗಳು ಸ್ತ್ರೀವಾದಿ ನೆಲೆಗಳಿಂದ, ಮಹಿಳಾ ಬದುಕಿನ ಹಲವಾರು ಮಗ್ಗಲುಗಳನ್ನು ಶೋಧಿಸುವ ಪ್ರಯತ್ನದಲ್ಲಿ ತೊಡಗಿವೆ. ಈ ಅಧ್ಯಯನ ಕೂಡಾ ಅಂಥದ್ದರ ಪ್ರಯತ್ನಕ್ಕೂ ಒಂದು ಸಣ್ಣ ಜೋಡಣೆ ಎಂಬ ಆಶಾಭಾವ ಈ ಅಧ್ಯಯನದ್ದು. ಅಧ್ಯಯನದಲ್ಲಿ ಆಯ್ಕೆಮಾಡಿಕೊಂಡಿರುವ ಐದೂ ಜನರನ್ನು ಜನಪ್ರಿಯ ಕಾದಂಬರಿಕಾರ್ತಿಯರೆಂದು ಗಮನಿಸಿದರೂ, ತ್ರಿವೇಣಿಯವರ ಕಾದಂಬರಿಗಳನ್ನು ಕುರಿತಂತೆ ಒಂದಿಷ್ಟು ಚರ್ಚೆ, ಸ್ತ್ರೀವಾದಿ ನೆಲೆಯಲ್ಲಿ ಗುರುತಿಸುವ ಪ್ರಯತ್ನಗಳು ನಡೆದಿರುವುದನ್ನು ಈಗಾಗಲೇ ಗಮನಿಸಲಾಗಿದೆ. ಅವರ ಕಾದಂಬರಿಗಳಲ್ಲಿ ಕಾಣುವ ಹೆಣ್ಣುಲೋಕದ ಅನಾವರಣ ಮುಖ್ಯವಾದ್ದು ಎಂದೂ ಗುರುತಿಸಿಕೊಳ್ಳಲಾಗಿದೆ.

ಎರಡನೆಯ ಹಂತದಲ್ಲಿ ಗುರುತಿಸಿಕೊಂಡಿರುವ ಉಷಾ ನವರತ್ನರಾಮ್, ಸಾಯಿಸುತೆ, ಹೆಚ್.ಜಿ. ರಾಧಾದೇವಿ – ಇವರುಗಳು ಎಲ್ಲೂ ಗಂಭೀರವಾಗಿ ಚರ್ಚಿತರಾಗಿಲ್ಲ. ಆಗಿದ್ದರೂ ಟೀಕಾರೂಪದ ವಿಮರ್ಶೆಗಳು ಒಂದು ಕಡೆಯಲ್ಲಿದ್ದರೆ, ಓದುಗರ ಮೆಚ್ಚುಗೆಯ ಪತ್ರಗಳಲ್ಲಿನ ವಿಮರ್ಶೆ ಇನ್ನೊಂದೆಡೆಗಿದ್ದುದ್ದನ್ನು ಗಮನಿಸಬಹುದು. ಇವರ ಕಾದಂಬರಿಗಳಲ್ಲಿನ ವಸ್ತು, ತಂತ್ರ, ಭಾಷೆಗಳು ತಮ್ಮ ಪುನರಾವರ್ತನೆಯ ಕಾರಣದಿಂದ ಸಾಮಾನ್ಯ ಓದುಗರನ್ನು ತಲುಪಿದಂತೆ, ಬೌದ್ಧಿಕ ವರ್ಗವನ್ನು ತಲುಫಲು ಸಾಧ್ಯವಾಗಲಿಲ್ಲ. ಸ್ತ್ರೀವಾದಿ ಚಿಂತನೆಯ ಮರು ಓದಿನ ಕಲ್ಪನೆಯ ಮುಖಾಂತರ ಇಂಥ ಲೋಕವನ್ನು ಕಟ್ಟುವ ಅನಿವಾರ್ಯತೆ ಹೆಣ್ಣಿನ ಯಾವ ಸಾಮಾಜಿಕ ಅನಿವಾರ್ಯವನ್ನು ಹೇಳುತ್ತದೆ ಎಂಬುದನ್ನು ಗ್ರಹಿಸಿಕೊಂಡಾಗ, ಈ ಕಾದಂಬರಿಗಳು ಹೆಣ್ಣಿನ ಅಭಿವ್ಯಕ್ತಿಯ ಸವಾಲುಗಳನ್ನು ಹೇಳುತ್ತವೆ. ಆ ಕಾರಣಕ್ಕಾಗಿ ಇಂಥ ಪುನರಾವರ್ತಿತ ಲೋಕದೊಳಗಿರುವ ಹೆಣ್ಣು ಲೋಕದ ವಿವಿಧ ಆಯಾಮಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವಿಲ್ಲದೆ. ಉಷಾ, ಸಾಯಿಸುತೆ, ರಾಧಾದೇವಿಯವರ ಕಾದಂಬರಿಗಳಲ್ಲಿ ಒಂದಿಷ್ಟು ಭಿನ್ನತೆಗಳು ಬಹಳಷ್ಟು ಸಾಮ್ಯತೆಗಳನ್ನು ಕಾಣಬಹುದು. ಉಷಾರ ಕಾದಂಬರಿ ಪಯಣ ಶುರುವಾಗಿದ್ದು ಹೊಂಬಿಸಿಲು ಕಾದಂಬರಿಯಿಂದ. ವೈದ್ಯ ದಂಪತಿಗಳ ನಡುವಿನ ಮುನಿಸು, ಪ್ರೀತಿ ಇವುಗಳನ್ನು ಮುಖ್ಯಾವಾಗಿಸಿಕೊಂಡ ಈ ಕೃತಿ ಚಲನಚಿತ್ರವೂ ಆಗಿ ಜನಪ್ರಿಯವಾಯಿತು. ಅವರ ಕೃತಿಗಳ ಜನಪ್ರಿಯತೆಗೆ ಪ್ರಭಾಮೂರ್ತಿ ಕಾರಣಗಳನ್ನು ಕೊಡುತ್ತಾರೆ. ಆಕರ್ಷಕ ಬರವಣಿಗೆಯ ಶೈಲಿ ಮತ್ತು ಕಥಾವಸ್ತುವಿನ ಆಯ್ಕೆ ಮುಖ್ಯವಾಗಿ ಯುವಕ ಯುವತಿಯರ ಮನದಲ್ಲಿನ ಸುಪ್ತಭಾವನೆಗಳಿಗೆ ಕಚಗುಳಿಯಿಡುವ, ಬೇಸರ ಹೊಂದಿದವರಿಗೆ ಕೊಂಚ ಮೋಜು ನೀಡುವ, ಭಾವನೆಗಳನ್ನು ಕಲಕುವ, ಬಡಿದೆಬ್ಬಿಸುವ, ಜನಜೀವನದ ನೈಜ ಸನ್ನಿವೇಶಗಳ ಸುತ್ತ ಹೆಣೆಯುವ ಕಥಾ ನಿರೂಪಣೆಯಲ್ಲಿ ಉಷಾರವರದು ಎತ್ತಿದ ಕೈ. ಮುಂದುವರೆಯುತ್ತಾ ಪ್ರಭಾಮೂರ್ತಿಯವರು "ಉಷಾ ನವರತ್ನರಾಂರವರು ಬದುಕಿನ ವಿವಿಧ ಸಮಸ್ಯೆಗಳನ್ನು ಕಾದಂಬರಿ, ಸಣ್ಣಕತೆ, ನೀಳ್ಗತೆಗಳ ರೂಪದಲ್ಲಿ ರಚಿಸುವುದರಲ್ಲಿ ಪ್ರವೀಣರಾಗಿದ್ದರು. ಬದುಕಿನ ವಿವಿಧ ಮುಖಗಳು, ಕ್ಷೇತ್ರಗಳು, ಸ್ತ್ರೀಯ ಬದುಕಿನ ಸಮಸ್ಯೆಗಳು, ಮಕ್ಕಳ ಶೋಷಣೆ, ಪರಿಸರ ಸಂರಕ್ಷಣೆ ಹೀಗೆ ಹಲವು ಹತ್ತು ಸಾಮಾಜಿಕ ಸಮಸ್ಯೆಗಳನ್ನು ಬಹಳ ಹತ್ತಿರದಿಂದ ತಮ್ಮ ಒಳಗಣ್ಣಿನಿಂದ ವೀಕ್ಷಿಸಿದ್ದರು ಎಂಬುದು ಅವರ ಕಾದಂಬರಿಗಳನ್ನು ಓದುವುದರಿಂದ ತಿಳಿಯುತ್ತದೆ"" ಎನ್ನುತ್ತಾರೆ. ೬೦-೭೦ ರ ದಶಕದಲ್ಲಿ

ಯುವ ಜನತೆಗೆ ಉಷಾರವರ ಕಾದಂಬರಿಗಳನ್ನು ಓದುವ ಹುಚ್ಚು ಹಿಡಿದಿತ್ತೆಂದರೆ ತಪ್ಪಾಗಲಾರದು. ಆಂಗ್ಲ ಭಾಷೆಯ ಮಿಲ್ಸ್-ಎನ್-ಬೂನ್ ಕಾದಂಬರಿಗಳಂತೆ ಕನ್ನಡದಲ್ಲಿ ಉಷಾರವರ ಕಾದಂಬರಿಗಳು ಯುವಜನತೆಯ ಹೃದಯಕ್ಕೆ ಲಗ್ಗೆ ಹಾಕಿದ್ದವು. ಅವರು ಜನಪ್ರಿಯತೆಯ ಶಿಖರವನ್ನೇರಿದ್ದರು. ಎಂದು ಹೇಳುವ ಮಾತುಗಳು ಉಷಾರವರು ಜನರ ಮಧ್ಯೆ ಪಡೆದುಕೊಂಡ ಜನಪ್ರಿಯತೆಯನ್ನು ಹೇಳುತ್ತವೆ. ೧೦೮ ಕಾದಂಬರಿಗಳನ್ನು ಬರೆದಿರುವ ಇವರ ಎಲ್ಲ ಕೃತಿಗಳು ಪ್ರಕಟಗೊಂಡಿಲ್ಲ, ಕತೆ, ಕಾದಂಬರಿಗಳೆರಡನ್ನು ಇವರು ರಚಿಸಿದರೂ ಕಾದಂಬರಿಕಾರ್ತಿಯೆಂದೇ ಪ್ರಸಿದ್ಧರಾಗಿದ್ದಾರೆ. ಉಷಾರವರು ಇತಿಹಾಸದಲ್ಲಿ ಎಂ.ಎ. ಪದವಿಯನ್ನು ಪಡೆದವರು. ಓದು, ಆರ್ಥಿಕತೆ ಎರಡರಲ್ಲೂ ಸಬಲರಾದ ಉಷಾರಿಗೆ ಗಂಡ ನವರತ್ನರಾಮ್ ಅವರ ಪ್ರೋತ್ಸಾಹವೂ ಇತ್ತು. ದಿನಕ್ಕೆ ಒಂದೆರಡು ಪುಟಗಳನ್ನಾದರೂ ಹೆಂಡತಿ ಬರೆಯಬೇಕೆನ್ನುವ ಹಂಬಲ ನವರತ್ನರಾಮ್ ಅವರಿಗೆ ಇತ್ತಂತೆ.

ಈ ಎಲ್ಲದರ ಜೊತೆಗೆ ಇವರಿಗೆ ಮಹಿಳಾ ಬರಹಗಾರ್ತಿಯರ ಬರಹದ ಮಾದರಿಗಳು ಇದ್ದವು. ತಮಗಿಂತ ಹಿಂದಿನ ತ್ರಿವೇಣಿ, ಎಂ.ಕೆ. ಇಂದಿರಾ, ಹೆಚ್.ವಿ. ಸಾವಿತ್ರಮ್ಮ, ಅನುಪಮಾ ನಿರಂಜನ ಇವರುಗಳು ಆಗಲೇ ಕನ್ನಡದಲ್ಲಿ ತಮ್ಮ ಕೃತಿಗಳನ್ನು ರಚಿಸಿದ್ದರು. ಆದರೂ ಉಷಾ ತಮ್ಮ ಕಾದಂಬರಿಗಳಲ್ಲಿ ಪುರುಷ ಲೋಕದ ಮನೋಭಾವವನ್ನೇ ಚಿತ್ರಿಸಿದ್ದರು.

ಖಂಡಿತವಾಗಿಯೂ ಅವರು 'ಹಗಲುಗನಸು', 'ಹೊಟ್ಟೆಗಾಗಿ ಗೇಣುಬಟ್ಟೆಗಾಗಿ', 'ಬೆಳ್ಳತೆರೆ' ಮುಂತಾದ ಕಾದಂಬರಿಗಳಲ್ಲಿ ವಸ್ತು ವೈವಿಧ್ಯವಾಗಿದೆ. ಮತ್ತು ಅವು ಹೆಣ್ಣಿನ ಶೋಷಣೆಯ ಅನೇಕ ಮಗ್ಗಲುಗಳನ್ನು ಚಿತ್ರಿಸುತ್ತವೆ. ಆದರೂ ಹೆಣ್ಣಿನ ಸಮಸ್ಯೆಗಳಿಗೆ ಕೊಡುವ ಪರಿಹಾರ ಮಾತ್ರ ಗಂಡಿನ ಧೋರಣೆಯದೇ ಉಷಾರ ಸಮಕಾಲೀನರಾದ ಸಾಯಿಸುತೆಯವರು ಸುಮಾರು ೧೨೫ಕ್ಕೂ ಮಿಕ್ಕಿ ಕಾದಂಬರಿಗಳನ್ನು ರಚಿಸಿದ್ದಾರೆ. 'ವಿವಾಹ ಬಂಧನ' ಪ್ರಕಟಗೊಂಡ ಮೊದಲ ಕಾದಂಬರಿ. ಆ ಸಂದರ್ಭದಲ್ಲಿ ಮ.ನ. ಮೂರ್ತಿಯವರು ಹೇಳಿದ ಮಾತುಗಳನ್ನು ನೆನಪಿಸಿಕೊಳ್ಳುತ್ತಾರೆ. "ಸೃಜನಶೀಲತೆಗೆ ಏಕಾಗ್ರತೆ ಜೀವಾಳ. ಸಾಮಾನ್ಯರಿಗೆ ಏನು ಅನ್ನಿಸದ ಪ್ರಕೃತಿಯಲ್ಲಿನ ಸಣ್ಣ, ಸಣ್ಣ ತುಣುಕುಗಳು ಕೂಡಾ ಕಲಾಕಾರನಿಗೆ ಶ್ರೇಷ್ಠ.......... ನಿಮ್ಮ ಬರವಣಿಗೆ ಓದುಗರಿಗೆ ಇಷ್ಟವೆನಿಸಿದೆ. ಮುಂದೂ ಕೂಡ ಬರಹದಲ್ಲಿ ಸರಳತೆ ಇರಲಿ. ಹಾಲು ಕುಡಿಯೋಕೆ ಚಡಪಡಿಸುವ ಮಗುವಿನ ಗಂಟಲೊಳಗೆ

ಕಡಬು ತುರುಕುವ ಪ್ರಯತ್ನ ಬೇಡ ಎಂದ ಮಾತುಗಳು ತಮ್ಮ ಬರಹಕ್ಕೆ ಸ್ಫೂರ್ತಿ ನೀಡಿದವರು ಎನ್ನುತ್ತಾರೆ ಸಾಯಿಸುತೆ. ತಮ್ಮ ೧೨೫ನೆಯ ಕಾದಂಬರಿ ವಸುಧೈವ ಕುಟುಂಬದ ಪ್ರಾರಂಭದಲ್ಲಿ ತಮ್ಮ ಸಾಹಿತ್ಯವನ್ನು ಕುರಿತಂತೆ ವಿವರಣೆಯನ್ನು ನೀಡುತ್ತಾರೆ. ಆ ಮಾತುಗಳು ಸಾಯಿಸುತೆಯವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಸಹಾಯಕವಾಗುತ್ತವೆ. ವಿಸ್ತಾರ ಬದುಕನ್ನು ಚಿತ್ರಿಸಲು ಕಾದಂಬರಿ ಪ್ರಕಾರವೇ ಸೂಕ್ತವೆನಿಸಿತು:............... 'ಬದುಕಿನ ಒಂದು ಮುಖ್ಯ ಗುರಿಯೆಂದರೆ ಅಭಿವ್ಯಕ್ತಿ. ನಾನು ಅಭಿವ್ಯಕ್ತಿಗಾಗಿ ಬರಹವನ್ನು ಆರಿಸಿಕೊಂಡಿದ್ದೇನೆ ಅದನ್ನು ನೀವು ಒಪ್ಪಿಕೊಂಡಿದ್ದೀರಾ ಎನ್ನುವುದೇ ಸಂತಸದ ವಿಷಯ' ಎಂದು ತಮ್ಮ ಓದುಗರಿಗೆ ಸಾಯಿಸುತೆ ಧನ್ಯವಾದಗಳನ್ನು ಅರ್ಪಿಸುತ್ತಾರೆ. ವಿವಿಧ ನಿಯತಕಾಲಿಕೆಗಳಲ್ಲಿ ಧಾರವಾಹಿಗಳು ಪ್ರಕಟಗೊಂಡಿವೆ. ದೂರದರ್ಶನದಲ್ಲಿ ಧಾರವಾಹಿಗಳ ಪ್ರಸಾರವಾಗಿದೆ. ರೇಡಿಯೋದಲ್ಲಿ ಮಕ್ಕಳ ಕತೆಗಳ ಪ್ರಸಾರವಾಗಿದೆ. ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿ ಮನ್ನಣೆಯನ್ನು ಪಡೆದುಕೊಂಡಿವೆ. ೧೨೫ಕ್ಕೂ ಮಿಕ್ಕು ಕಾದಂಬರಿಗಳನ್ನು ರಚಿಸಿರುವ ಸಾಯಿಸುತೆಯವರು ಓದುಗರಲ್ಲಿ ಬಹು ಮನ್ನಣೆಯನ್ನು ಪಡೆದುಕೊಂಡಿದ್ದಾರೆ. ಅವರ ಸುಮಾರು ಕಾದಂಬರಿಗಳು ಮರು ಮುದ್ರಣಗಳನ್ನು ಹೊಂದಿರುವುದು ಈ ಸಂಗತಿಯನ್ನು ಸ್ಪಷ್ಟಪಡಿಸುತ್ತವೆ. ೧೨೫ನೆಯ ಕಾದಂಬರಿ 'ವಸುಧೈವ ಕುಟುಂಬ' ಕಾದಂಬರಿಯವರೆಗೆ ಅವರ ಮುದ್ರಿತ ಸಾಹಿತ್ಯದ ಪುಟಗಳ ಸಂಖ್ಯೆ ೨೬, ೩೬೧; ಸಾಯಿಸುತೆಯವರ ಕಾದಂಬರಿಗಳ ಬಗ್ಗೆ ಶುದ್ಧ ಸಾಹಿತ್ಯಕ ಮಾನದಂಡಗಳ ವಿಮರ್ಶೆ ಏನೇ ಇದ್ದರೂ, ಇಷ್ಟು ಪ್ರಮಾಣದ ಪುಟಗಳಲ್ಲಿ ಕುಟುಂಬ ಸಂಬಂಧಿತ ವಿವರಗಳನ್ನು ಕಟ್ಟಿಕೊಟ್ಟ ಸಾಯಿಸುತೆ ಅವರ ಪ್ರಯತ್ನವಂತೂ ಸ್ವಾಗತಾರ್ಹವೇ. ತಮ್ಮ ಇಷ್ಟೂ ಕಾದಂಬರಿಗಳಲ್ಲಿ ಅವರು ಪುನರಾವರ್ತಿತ, ಪುರುಷ ಕಲ್ಪನೆಯ ಸಾಮಾಜಿಕ ಜೀವನವನ್ನು ಕಟ್ಟಿಕೊಡುತ್ತಾರೆ. ಅವರ ನಾಯಕಿಯರು, ಹೆಣ್ಣು ಪಾತ್ರಗಳು ಸಾಮಾಜಿಕವಾಗಿ ನಿಗದಿತ ಸ್ಥಿರಮಾದರಿಗಳ ಅನುಕರಣೆಯನ್ನು ಚಾಚೂ ತಪ್ಪದೆ ಮಾಡುತ್ತಿರುತ್ತವೆ. 'ಪುರುಷ ಭಾಷೆಯನ್ನು ಚಾಚೂ ತಪ್ಪದೆ, ಅನುಸರಿಸಿಕೊಂಡೇ ಈ ಪಾತ್ರಗಳು ಮುನ್ನೆಡೆಯುತ್ತದೆ. ಇಲ್ಲೊಂದು ಪ್ರೇಮಮಯಿ, ಆದರ್ಶ ಕುಟುಂಬದ ಚಿತ್ರಣವಿದೆ. ಸಾಯಿಸುತೆ ಎಲ್ಲೂ ಹೆಣ್ಣನ್ನು ಈ ಚೌಕಟ್ಟಿನಾಚೆ ಕಂಡವರೆ ಅಲ್ಲ. ಅದಕ್ಕಿರುವ ಕಾರಣಗಳನ್ನು ಮುಂದೆ ಕಾದಂಬರಿಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸುವ ಸಂದರ್ಭದಲ್ಲಿ ಚರ್ಚಿಸಲಾಗುತ್ತದೆ.

ಇವರ ಸಮಕಾಲೀನರಾದ ಮತ್ತೊಬ್ಬ ಜನಪ್ರಿಯ ಕಾದಂಬರಿಕಾರ್ತಿ ಹೆಚ್.ಜಿ. ರಾಧಾದೇವಿ. ೧೯೫೫–೨೦೦೩ ರಾಧಾದೇವಿಯವರ ಕಾಲ. ಮೊದಲ ಕಾದಂಬರಿ ಸುವರ್ಣ ಸೇತುವೆ. ಒಟ್ಟು ೧೫೩ ಕಾದಂಬರಿಗಳನ್ನು ರಚಿಸಿದ್ದಾರೆ. ಇವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿವೆ. ಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡಿವೆ. ಅನೇಕ ಪ್ರಶಸ್ತಿಗಳನ್ನು ಇವರು ಪಡೆದುಕೊಂಡಿದ್ದಾರೆ. 'ಸುವರ್ಣ ಸೇತುವೆ'ಯಿಂದ ಪ್ರಾರಂಭಗೊಂಡ 'ರಂಗು ಚೆಲ್ಲಿದ ರಂಗೋಲಿ'ವರೆಗೆ ೧೫೩ ಕಾದಂಬರಿಗಳಲ್ಲಿ ಮಧ್ಯಮ ವರ್ಗ, ಕೆಳಮಧ್ಯಮವರ್ಗ ಮತ್ತು ಮೇಲ್ವರ್ಗದ ವಿವಿಧ ಸ್ತರಗಳ ಬದುಕು ಇದೆ. ಡ್ಯಾನ್ಸರ್, ನಟಿ, ಗೃಹಣಿ, ಉದ್ಯೋಗಸ್ತೆ, ಸಾಹಿತಿ...... ಮುಂತಾದ ರಂಗಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಮಹಿಳಾ ಲೋಕ ಇಲ್ಲಿ ಸಿಕ್ಕುತ್ತದೆ. ಇವರ ಕಾದಂಬರಿಗಳಲ್ಲಿನ ದಿಟ್ಟ ಮಹಿಳೆಯರನ್ನು ತಮ್ಮ ಲೇಖನದಲ್ಲಿ ಗುರುತಿಸುವ ಭಾಗ್ಯ ಜಯಸುದರ್ಶನ ಇವರ ಕಾದಂಬರಿ ಲೋಕವನ್ನು ಕುರಿತು ಹೀಗೆ ಹೇಳುತ್ತಾರೆ. "ಇವರ ಕಾದಂಬರಿಗಳ ಒಳ ವ್ಯಾಪ್ತಿ ಅತ್ಯಂತ ಹಿರಿದು. ಇವರ ಕಾದಂಬರಿಗಳ ಅಧ್ಯಯನವೆಂದರೆ ಒಂದು ಸಮಾಜದ ಒಟ್ಟು ಅಧ್ಯಯನ ಒಂದು ಸಮಾಜಕ್ಕೆ ಹಿಡಿದ ಕೈಗನ್ನಡಿ. ಅವರು ಅತಿ ಸೂಕ್ಷ್ಮ ವಿವರಗಳ ಮೂಲಕ ಇಡೀ ಸಮಾಜದ ದರ್ಶನ ಮಾಡಿಸಬಲ್ಲರು, ಒಂದು ಸಾಂಸ್ಕೃತಿಕ ಆವರಣವನ್ನೇ ನಮ್ಮ ಕಣ್ಣ ಮುಂದೆ ತೆರೆಯಬಲ್ಲರು. ಬದುಕಿನ ಪ್ರತಿಯೊಂದು ದಟ್ಟ ವಿವರಗಳು, ತಿಂಡಿಗಳು, ಉಡುಗೆ–ತೊಡುಗೆಗಳು, ಅಲಂಕಾರಗಳು, ಜೀವನ ಶೈಲಿಯನ್ನು ಬಿಡಿಸಿಡಬಲ್ಲರು[೧೩] ಎಂದು ವಿವರಿಸುತ್ತಾರೆ. ಈ ರೀತಿಯಲ್ಲಿ ಇವರು ತೆರೆದಿಡುವ ಈ ಲೋಕವನ್ನು ಅತ್ಯಂತ ಆತ್ಮೀಯತೆಯಿಂದ ಕೈಗೆತ್ತಿಕೊಂಡು ತನ್ಮಯರಾಗುವ ಅಸಂಖ್ಯಾತ ಮಹಿಳೆಯರಿದ್ದಾರೆ.

ಈ ಮೂರು ಕಾದಂಬರಿಕಾರ್ತಿಯರ ಮುಂದಿನ ಕೊಂಡಿಯಾಗಿ ಅನೇಕ ಕಾದಂಬರಿಕಾರ್ತಿಯರಿದ್ದಾರೆ. ಅವರಲ್ಲಿ 'ಆರತಿ ವೆಂಕಟೇಶ್' ಅವರನ್ನೇ ಆಯ್ಕೆ ಮಾಡಿಕೊಂಡ ಮುಖ್ಯ ಕಾರಣವೇನೆಂದರೆ ಅವರು ಕಾದಂಬರಿಕಾರ್ತಿ ಉಷಾ ನವರತ್ನರಾಮ್ ಅವರ ಮಗಳು ಎಂಬುದು. ಎಚ್.ಜಿ. ರಾಧಾದೇವಿಯವರ ಮಗಳು ಶ್ರೀಲಕ್ಷ್ಮಿ ಅವರೂ ಕಾದಂಬರಿಕಾರ್ತಿಯೇ. ಆದರೆ ಆರತಿ ವೃತ್ತಿಯಲ್ಲಿ ವೈದ್ಯೆ. ಆಯ್ಕೆ ಮಾಡಿಕೊಂಡವರಲ್ಲಿಯಾರೂ ವೃತ್ತಿಯಲ್ಲಿ ಇಲ್ಲ. ವೈದ್ಯ ವೃತ್ತಿ ೬೦–೭೦ರ ದಶಕಗಳಲ್ಲಿನ ಅನುಪಮಾ ನಿರಂಜನ ಅವರ ಮೇಲೆ ಪರಿಣಾಮ ಬೀರಿದ ಹಾಗೆ ಇವರ ಮೇಲೆ ಪರಿಣಾಮ ಬೀರಿದೆಯಾ ಎಂಬ ಕುತೂಹಲವೂ ಇಲ್ಲಿ ಕೆಲಸ ಮಾಡಿದೆ. ಅಲ್ಲದೆ ಹಿಂದಿನ

ತಲೆಮಾರಿಗಿಂತ ಆಧುನಿಕ ಶಿಕ್ಷಣ, ಸವಲತ್ತುಗಳು, ಸ್ತ್ರೀ ಬದುಕಿನ ವಿಸ್ತಾರ ಇವರ ತಲೆಮಾರನ್ನು ಪ್ರಭಾವಗೊಳಸವೆಯಾ ಎಂಬ ಹುಡುಕಾಟವೂ ಇಲ್ಲಿದೆ. ಇದುವರೆಗೂ ೨೫ ಕಾದಂಬರಿಗಳು ಹಾಗೂ ಕೆಲವು ನೀಳ ಕತೆಗಳನ್ನು ಇವರು ರಚಿಸಿದ್ದಾರೆ. ೧೫ ಕಾದಂಬರಿಗಳು ವಿವಿಧ ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ದೂರದರ್ಶನದ ಧಾರಾವಾಹಿಗಳ ಕಥಾವಿಸ್ತರಣೆ ಮತ್ತು ಸಂಭಾಷಣೆಯನ್ನು ರಚಿಸಿದ್ದಾರೆ. ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ. ಸೌಂದರ್ಯ ಸಮಸ್ಯೆಗಳು ಹಾಗೂ ವೈದ್ಯಕೀಯ ತೊಂದರೆಗಳ ಕುರಿತು ಅನೇಕ ಲೇಖನವನ್ನು ಬರೆದಿದ್ದಾರೆ.

ಓದುಗರು ಆರತಿಯವರ ಕಾದಂಬರಿಗಳನ್ನು ಓದಿ ಮೆಚ್ಚಿ ಪತ್ರಗಳನ್ನು ಬರೆದಿದ್ದಾರೆ. ವೃತ್ತಿಯಲ್ಲಿನ ಅನೇಕ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳ ಚೌಕಟ್ಟಿನಲ್ಲಿ ಆರತಿ ತರುತ್ತಾರೆ. ಅವರ ಕಾದಂಬರಿಗಳು ಹಿಂದಿನ ತಲೆಮಾರಿನ ಕಾದಂಬರಿಗಳಗಿಂತ ಭಿನ್ನವಾಗಿ ಹೆಣ್ಣು ಲೋಕವನ್ನು ಗಮನಿಸಿದೆಯಾ ಅಥವಾ ಅದೇ ಮಾದರಿಯ ಪಾರಂಪರಿಕ ಚಿಂತನೆಗಳ ಅನುಕರಣೆ ಇಲ್ಲೂ ಮುದುವರಿದಿದೆಯಾ ಎನ್ನುವುದನ್ನು ಕಾದಂಬರಿಗಳ ಪ್ರಾಯೋಗಿಕ ವಿಮರ್ಶೆಯ ಭಾಗದಲ್ಲಿ ಚರ್ಚಿಸಲಾಗಿದೆ.

### ೫.೩ ಸ್ತ್ರೀವಾದಿ ನೆಲೆಯಲ್ಲಿ ಆಯ್ದ ಕಾದಂಬರಿಗಳ ಪ್ರಾಯೋಗಿಕ ವಿಮರ್ಶೆ

ಈ ಅಧ್ಯಯನದಲ್ಲಿ ಚರ್ಚಿತವಾಗುತ್ತಿರುವ ಐದು ಜನ ಬರಹಗಾರ್ತಿಯರು ಒಟ್ಟು ಜನಪ್ರಿಯ ಮಾದರಿಯ ಕಾದಂಬರಿಗಳ ರಚನೆಯಲ್ಲಿ ತೊಡಗಿಕೊಂಡಿರುವುವರ ಪ್ರತಿನಿಧಿಗಳು. ಸಾಹಿತ್ಯ ವಿಮರ್ಶೆ ಯಾವುದೇ ಸಾಹಿತ್ಯ ಕೃತಿಗಳನ್ನು ಗಮನಿಸುವಾಗ ವಸ್ತು, ತಂತ್ರ, ಭಾಷೆ ಎಂಬ ಪರಿಕರಗಳ ಮೂಲಕ ಅವುಗಳನ್ನು ಗ್ರಹಿಸುತ್ತದೆ. ಈ ಅಧ್ಯಯನದ ಪ್ರಸ್ತುತ ಅಧ್ಯಾಯದಲ್ಲೂ ವಸ್ತು, ವಿನ್ಯಾಸ, ಭಾಷೆಯೆಂಬ ಪರಿಕರಗಳನ್ನು ಬಳಸಿಯೇ ಕಾದಂಬರಿಗಳ ಒಟ್ಟು ರಚನೆಯನ್ನು ಗಮನಿಸಲಾಗಿದೆ. ಮುಖ್ಯ ಸಂಗತಿಯೆಂದರೆ ಸಾಹಿತ್ಯ ವಿಮರ್ಶೆಯ ಈ ಮಾನದಂಡಗಳು ಮಹಿಳೆಯ ಅಭಿವ್ಯಕ್ತಿಗೆ ಎಷ್ಟು ಪೂರಕವಾಗಿವೆ ಮತ್ತು ತೊಡಕಾಗಿವೆ ಎಂಬುದನ್ನು ಮುಖ್ಯವಾಗಿ ಇಲ್ಲಿ ಗಮನಿಸಲಾಗಿದೆ. ತ್ರಿವೇಣಿಯವರ ಕಾದಂಬರಿಗಳನ್ನು ಗಮನಿಸುವ ಸಂದರ್ಭದಲ್ಲಿ ಈಗಾಗಲೇ ಮಹಿಳೆಯ ಸಮಸ್ಯೆಗಳು ವಿವಾಹ ಕೇಂದ್ರಿತವಾದವು ಎಂಬುದನ್ನು ಗಮನಿಸಲಾಗಿದೆ. ಭ್ರೂಣಾವಸ್ಥೆಯಿಂದ ಹಿಡಿದು ಗೋರಿಗೆ ಹೋಗುವವರೆಗೂ ಮಹಿಳೆ ಈ ಬದುಕನ್ನು ಬದುಕಬೇಕು. ಅಲ್ಲಿಂದ ಅವಳಿಗೆ ಬಿಡುಗಡೆಯಿಲ್ಲ. ಇಂಥ ಉಸಿರು ಕಟ್ಟುವ ವಾತಾವರಣದಲ್ಲಿ ಸಾಹಿತ್ಯದ ಅಭಿವ್ಯಕ್ತಿ ಅವಳ

ಬಂಧನದ ಬದುಕಿಗೆ ಒಂದು ಹೊರದಾರಿಯಾಗಿ ಪರಿಣಮಿಸುತ್ತದೆ. ಆ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಆಕೆ ವಸ್ತುವನ್ನು ತಾನು ಬದುಕುತ್ತಿರುವ ಬದುಕಿನಿಂದಲೇ ಆಯ್ದುಕೊಳ್ಳುತ್ತಾಳೆ. ಕೆಲವು ಬಾರಿ ಸಾಹಿತ್ಯ ಲೋಕದಲ್ಲಾದರೂ ಸರಿ, ಬಂಧನದ ಬದುಕಿಗೆ ಒಂದಿಷ್ಟು ಹೊರಚಾಚುಗಳನ್ನು ನಿರ್ಮಿಸಿಕೊಳ್ಳುತ್ತಾಳೆ. ಆದರ್ಶ ಕುಟುಂಬ, ಬಡತನದ ಪರಿಹಾರ, ಪ್ರೇಮವಿವಾಹ, ವರದಕ್ಷಿಣೆಯಿಲ್ಲದ ಮದುವೆ, ದೊರಕುವ ಶಿಕ್ಷಣ, ಹೀಗೆ ತಕ್ಷಣ ಎಲ್ಲ ಸಮಸ್ಯೆಗಳಿಗೂ ಕಾದಂಬರಿಗಳಲ್ಲಿ ಪರಿಹಾರ ಸಿಕ್ಕುತ್ತದೆ. ಆದರೆ ಮೇಲು ನೋಟಕ್ಕೆ ಶುಭಂ ಎಂದು ಗೋಚರಿಸುವ ಕಾದಂಬರಿ ಲೋಕ ಮಹಿಳೆಯ ಸಮಸ್ಯೆಗಳಿಗೆ ಪರಿಹಾರಗಳನ್ನು ನೀಡಲು ಸಮರ್ಥವಾಗಿರುವುದಿಲ್ಲ. ಪ್ರಾತಿನಿಧಿಕವಾಗಿ ಗಮನಿಸುತ್ತಿರುವ ಕಾದಂಬರಿಗಾರ್ತಿಯರ ಕಾದಂಬರಿಗಳು ಕೂಡಾ ಇಂಥದ್ದೇ ಅನೇಕ ಸಮಸ್ಯೆಗಳನ್ನು ಕಾದಂಬರಿಯಲ್ಲಿ ತಂದಿದ್ದರೂ ಅವುಗಳಿಗೆ ಸಿಕ್ಕ ಪರಿಹಾರ ನಿಜಕ್ಕೂ ಹೆಣ್ಣಿನ ಬಿಡುಗಡೆಯ ನೆಲೆಗಳಾಗಿಲ್ಲ. ಪುರುಷ ಪ್ರಧಾನ ಚಿಂತನೆಯ ಪ್ರಭಾವದಿಂದ ಮಹಿಳಾ ಬದುಕಿನ ಸಮಸ್ಯೆಗಳಿಗೆ ಪುರುಷ ಲೋಕ ಯಾವ ಪರಿಹಾರಗಳನ್ನು ಒದಗಿಸಿದ್ದರೋ, ಅಂತಿಮವಾಗಿ ಮಹಿಳಾ ಅಭಿವ್ಯಕ್ತಿ ಅದನ್ನೇ ಪರಿಹಾರ ಎಂದು ಭಾವಿಸಿತು ಮತ್ತು ತನ್ನ ಕಾದಂಬರಿಗಳಲ್ಲೂ ಅದೇ ರೀತಿಯ ಬದುಕನ್ನು ಮಹಿಳೆಗೆ ಒದಗಿಸಿಕೊಟ್ಟವು. ಈ ಎಲ್ಲ ಮಾತುಗಳಿಗೆ ಉದಾಹರಣೆಯನ್ನು ನಾವು ಕೆಲವು ಕಾದಂಬರಿಗಳಲ್ಲಿ ಗಮನಿಸಬಹುದು. ಕಾದಂಬರಿಗಳಲ್ಲಿ ಬಳಕೆಯಾಗಿರುವ ವಸ್ತುವನ್ನು ಕುರಿತಂತೆ ಮುಂದೆ ಚರ್ಚೆ ಮಾಡಲಾಗಿದೆ.

### ೫.೩.೧ 'ಜನಪ್ರಿಯ' ಕಾದಂಬರಿಗಳಲ್ಲಿ ವಸ್ತುನಿರ್ವಹಣೆ

ಮಹಿಳಾ ಕಾದಂಬರಿಗಳಿಗೂ 'ಜನಪ್ರಿಯ' ಕಾದಂಬರಿಗಳಿಗೂ ಇರುವ ವ್ಯತ್ಯಾಸಗಳನ್ನು ಈ ಹಿಂದೆಯೇ ಗುರುತಿಸಿಕೊಳ್ಳಲಾಗಿದೆ. ಮಹಿಳಾ ಕಾದಂಬರಿಗಳು ತಮ್ಮ ಎಲ್ಲ ಕೃತಿಗಳಲ್ಲೂ ಕುಟುಂಬ ಸಂಬಂಧಗಳು, ಈ ಚೌಕಟ್ಟಿನೊಳಗೆ ಬರುವ ಹೆಣ್ಣಿನ ನಾನಾ ಮಾದರಿಗಳನ್ನು ವಸ್ತುವನ್ನಾಗಿ ಹೊಂದಿರುತ್ತವೆ.

ಈ ಕಾದಂಬರಿಗಳಲ್ಲಿನ ಹೆಣ್ಣಿನ ಲೋಕ ಮೇಲ್ನೋಟಕ್ಕೆ ಬಹಳ ವೈವಿಧ್ಯಮಯವಾಗಿ ಇರುವಂತೆ ಭಾಸವಾದರೂ ಎಲ್ಲವೂ ಗೃಹಣಿತ್ವ ಎಂಬ ಗಂಟಿನೊಳಗೆ ಜೋಡಣೆಯಾಗಿರುವಂಥವೇ. ತನ್ನ ಬೇರೆಲ್ಲಾ ಚಹರೆಗಳನ್ನು ಸಾಮಾಜಿಕ ದಿಗ್ಬಂದನಗಳಲ್ಲಿ ಕಳೆದುಕೊಂಡ ಹೆಣ್ಣಿನ ಚಹರೆ ಗೃಹಿಣಿ ಎಂಬುದಷ್ಟೇ. ಅನೇಕ ಸ್ತ್ರೀವಾದಿಗಳು ಮಹಿಳೆಯ

ಬದುಕನ್ನು ನಿಯಂತ್ರಿಸುವ ಬಹುದೊಡ್ಡ ನಿಯಂತ್ರಣ ಈ ಗೃಹಿಣಿತ್ವದ ಮೂಲದ್ದೇ ಎಂಬುದನ್ನು ಸರಿಯಾಗಿ ಗುರುತಿಸಿದ್ದಾರೆ. ಮಹಿಳೆಯ ಹುಟ್ಟಿನಿಂದ ಹಿಡಿದು ಅವಳ ಸಾವಿನವರೆಗೂ ತನ್ನ ಹಸ್ತವನ್ನು ಚಾಚಿಕೊಂಡಿರುವ ಈ ಸಂಗತಿ ಅವಳ ಭೂತ, ವರ್ತಮಾನ, ಭವಿಷ್ಯವನ್ನು ನಿರ್ಧರಿಸುತ್ತದೆ. ತನ್ನನ್ನು ಆವರಿಸಿರುವ ರೂಪಿಸುವ ಈ ಚೌಕಟ್ಟಿನಲ್ಲೇ ಆಕೆ ತನ್ನ ಪಾತ್ರಗಳನ್ನು ನಿರ್ವಹಣೆ ಮಾಡಬೇಕಾಗುತ್ತದೆ. ತನ್ನ ಮನೆಯಾಚೆ ಹೋಗಿ ಆಟ ಆಡಿದರೆ ಔಟ್ ಆಗುವ ಕುಂಟೆಬಿಲ್ಲೇ ಆಟದ ಪರಿಸ್ಥಿತಿಯೇ ಹೆಣ್ಣಿನದು. ತಾಯಿ, ಹೆಂಡತಿ, ಮಗಳು ಈ ಪಾತ್ರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕಾಗುತ್ತದೆ. ಮಾದರಿ ಪಾತ್ರಗಳನ್ನು ಎಷ್ಟೆಷ್ಟು ಚನ್ನಾಗಿ ನಿರ್ವಹಣೆ ಮಾಡಿದರೆ ಅಷ್ಟಷ್ಟು ಆಶ್ರಯ, ರಕ್ಷಣೆ ಇಲ್ಲದಿದ್ದರೆ ಬದುಕು ಕಷ್ಟಸಾಧ್ಯ. ಆರ್ಥಿಕ, ಸಾಮಾಜಿಕ, ಸ್ವಾತಂತ್ರಗಳಿಲ್ಲದ ಬದುಕಿನಲ್ಲಿ ಇರುವುದು ನಿಯಮಗಳಿಗನುಸಾರವಾಗಿ ಆಗಬೇಕಾದ ಅನಿವಾರ್ಯತೆಯಷ್ಟೇ.

ಮಹಿಳೆ ಹುಟ್ಟಿದಾಗಿನಿಂದ ಹೆಣ್ಣಾಗಿಯೇ ರೂಪಿತಗೊಳ್ಳುತ್ತಾಳೆ ಎಂಬುದನ್ನು ಆದಿಚಿಂತಕಿ ಸಿಮೊನ್ ದ ಬೋವಾ ಬಹಳ ಸ್ಪಷ್ಟವಾಗಿ ಹೇಳುತ್ತಾಳೆ. ವಿವಾಹದ ಪ್ರಕ್ರಿಯೆಗೆ ಸಿದ್ಧಪಡಿಸುವ ತರಬೇತಿ ಅಂದಿನಿಂದಲೇ ಶುರು. ಅವಳಿಗೆ ದೊರಕುವ ಶಿಕ್ಷಣ, ತರಬೇತಿಗಳು ಇಂಥ ನಿರ್ದಿಷ್ಟ ಕಾರ್ಯಗಳಿಗೆ ಪೂರಕವಾಗಿಯೇ ಇರುತ್ತವೆ. ಶಿಕ್ಷಣದ ನೆಪದಲ್ಲಿ ಹೆಂಗಸಿಗೆ ನೀಡುವ ತರಬೇತಿ ಹೇಗೆ ಮಾದರಿ ಹೆಂಡತಿ ಮತ್ತು ತಾಯಂದಿರನ್ನು ಸೃಷ್ಟಿಸುವ ಕಾರ್ಯಗಾರಗಳಾಗಿರುತ್ತವೆ ಎಂಬುದನ್ನು ಬೆಟ್ಟಿ ಫ್ರೀಡನ್ ತನ್ನ 'ಫೈಮಿನೈನ್ ಮಿಸ್ಟಿಕ್' ಕೃತಿಯಲ್ಲಿ ಬಹಳ ವಿಸ್ತೃತವಾಗಿ ಹೇಳಿದ್ದಾಳೆ. ಅದನ್ನು ಹಿಂದೆಯೇ ಚರ್ಚಿಸಲಾಗಿದೆ. ಮಹಿಳೆಯ ನಡೆ, ನುಡಿ, ಉಡುಗೆ, ಅಲಂಕಾರ, ಮೈಯ ಅಳತೆ ಎಲ್ಲವೂ ಸಾಮಾಜಿಕವಾಗಿ ನಿರ್ದೇಶಿತವಾದವುಗಳೇ. ತನ್ನ ಆಯ್ಕೆಯ ಸ್ವಾತಂತ್ರದಿಂದ ತಾನು ಕೆಲಸಮಾಡುತ್ತಿದ್ದೆನೆ ಎಂಬ ಭ್ರಮೆ ಕೆಲವು ಬಾರಿ ಮಹಿಳೆಗೆ ಉಂಟಾದರೂ ವಾಸ್ತವದಲ್ಲಿ ಅವಳ ಸ್ವಾತಂತ್ರವೆಂಬುದೂ ಭ್ರಮೆಯ ಸಂಗತಿಯೇ. ಅದೂ ಕೂಡಾ ಪುರುಷನಿಗೆ ಅನುಕೂಲವಾದದ್ದು. ತನ್ನದಲ್ಲದ ಬದುಕನ್ನು ಬದುಕುತ್ತಿರುವ ಮಹಿಳೆಗೆ ಅಸ್ತಿತ್ವದ ನಿರ್ಮಾಣ ಸಾಧ್ಯವಿಲ್ಲದಂತಾಗುತ್ತದೆ. ಕೇವಲ ವಿವಾಹ ಮಾತ್ರ ಅವಳನ್ನು ಗೃಹಿಣಿತ್ವದ ಜಾಲದಲ್ಲಿ ಸಿಕ್ಕಿಸುತ್ತದೆ ಎನ್ನುವ ಭಾವನೆ ಸುಳ್ಳು. ಅವಿವಾಹಿತ ಮಹಿಳೆಯರೂ ಕೂಡಾ ಈ ಸಮಸ್ಯೆಯಿಂದ, ಈ ಸೇವಾಕಾರ್ಯಗಳಿಂದ ಹೊರತಾಗುವಂತಿಲ್ಲ. ಪುರುಷನೇ

ಕೇಂದ್ರಬಿಂದುವಾಗಿ, ಅವನ ಸುತ್ತಲೇ ಸುತ್ತುವ ಬದುಕನ್ನು ಬೇಕಾಗಿಯೋ ಬೇಡವಾಗಿಯೋ ಮಹಿಳೆ ಬದುಕಲೇ ಬೇಕಾಗಿರುವುದು ಅವಳ ಸಾಮಾಜಿಕ ವಾಸ್ತವ.

ಇಂಥ ವಾಸ್ತವಗಳಲ್ಲಿ ತನ್ನ ಸುತ್ತಲೂ ಇರುವ ಸ್ತ್ರೀತ್ವದ ಮಿಥ್‌ಗಳಲ್ಲೇ ತನ್ನ ಸುಖಗಳು ಅಡಗಿವೆ. ಎಂಬುದಾಗಿ ಸ್ವತಃ ಮಹಿಳೆಯೂ ಭಾವಿಸುತ್ತಾಳೆ. ವಿಧೇಯ ಪತ್ನಿ, ಆದರ್ಶ ತಾಯಿಯಾಗಿ ತನ್ನ ಆದ್ಯ ಕರ್ತವ್ಯ ಪುರುಷನ ಆಜ್ಞೆಯನ್ನು ಪಾಲಿಸುವುದು ಆಗಿರುತ್ತದೆ ಎಂದು ನಂಬುತ್ತಾಳೆ ಮತ್ತು ಅವೇ ತನಗೆ ಅತ್ಯಂತ ಸೌಖ್ಯದ, ಸಮ್ಮಾನದ ಸ್ಥಿತಿ ಎಂದು ಭಾವಿಸುವಂಥ ಮನೋಭಾವವನ್ನು ರೂಢಿಸಿಕೊಳ್ಳುತ್ತಾಳೆ. ತನ್ನತನವನ್ನೇ ಮರೆತು ವಿಸ್ಮೃತಿಯ ಬದುಕನ್ನು ಬದುಕುತ್ತಾಳೆ. ಇದು ಸಮಾಜದಲ್ಲಿರುವ ಬಹುಮಹಿಳಾ ಸಮುದಾಯದ ವಾಸ್ತವ. ಇಂದು ದೊರೆಯುವ ಶಿಕ್ಷಣ, ಆಧುನಿಕ ಸೌಲಭ್ಯಗಳು, ಕಾನೂನುಗಳು ಮಹಿಳಾ ಬದುಕನ್ನು ಬದಲಾಯಿಸಿಬಿಟ್ಟಿವೆ ಎನ್ನುವ ನಿರ್ಧಾರಕ್ಕೆ ಬರುವುದು ಕೂಡಾ ಅವಾಸ್ತವದ ಸಂಗತಿಯೇ. ಪುರುಷ ಪ್ರಧಾನ ಸಮಾಜದಲ್ಲಿನ ಶಿಕ್ಷಣ, ತಂತ್ರಜ್ಞಾನ, ಕಾನೂನುಗಳು ಲಿಂಗರಾಜಕಾರಣದಿಂದ ಹೊರತಾಗುಳದಿಲ್ಲ ಎಂಬುದನ್ನು ಸ್ತ್ರೀವಾದಿಗಳು ತೋರಿಸಿಕೊಟ್ಟಿದ್ದಾರೆ. ವೈಯಕ್ತಿಕವಾದ ಮಹಿಳಾ ಸಾಧನೆಗಳು ಬಹು ಸಮುದಾಯದ ಬಿಡುಗಡೆಗೆ ಕಾರಣವಾಗುವುದಿಲ್ಲ. ಸಾಮಾಜಿಕ ವಾಸ್ತವಗಳಲ್ಲಿ ಸಿಕ್ಕು ನಲುಗತ್ತಿರುವವರು ಈ ಬಹು ಸಮುದಾಯದ ಮಹಿಳೆಯರೇ.

ಇಂಥ ಆವರಣದ ಭಾಗವೇ ಆದ ಬರಹಗಾರ್ತಿಯರು ತಮ್ಮ ಕಾದಂಬರಿ ಲೋಕದೊಳಗೆ ತರುವುದು ತಮಗೊದಗಿದ ಇಂಥ ಲೋಕಾನುಭವವನ್ನೇ. ಮಹಿಳಾ ಲೋಕದೊಳಗಿನ ಎಲ್ಲ ಸಮಸ್ಯೆಗಳು ಪುರುಷ ನೇತ್ರಕ್ಕೆ ಅಮುಖ್ಯವಾಗಿ ಕಾಣಬಹುದು. ಆದರೆ ಅಲ್ಲಿನ ಸಣ್ಣ-ಪುಟ್ಟ ಸುಖ, ಸಂತೋಷ, ದುಃಖಗಳು ಬರಹಗಾರ್ತಿಗೆ ಬಹು ಮುಖ್ಯವೇ. ಕಾದಂಬರಿಕಾರ್ತಿಯರು ತಮ್ಮ ಕಾದಂಬರಿಗಳ ಮುನ್ನುಡಿಯಲ್ಲಿ ತಾವು ಕೃತಿಗಳನ್ನು ಬರೆಯುತ್ತಿರುವುದರ ಹಿನ್ನಲೆಯನ್ನು, ಪ್ರೇರಣೆಯನ್ನು ಕುರಿತು ಬರೆದಿದ್ದಾರೆ. ತಮ್ಮ 'ಹಂಸ ಪಲ್ಲಕ್ಕಿ' ಕಾದಂಬರಿಯ ಮುನ್ನಡಿಯಲ್ಲಿ ಲೇಖಕಿ ಸಾಯಿಸುತೆ ಹೇಳುವ ಮಾತುಗಳು ಈ ಸಂದರ್ಭದಲ್ಲಿ ಮುಖ್ಯವಾಗುತ್ತವೆ. "ತೀರಾ ವಿಶಿಷ್ಟವೂ ಅಲ್ಲ: ವಿಭಿನ್ನವೂ ಅಲ್ಲದ ಕಥಾವಸ್ತು ಈ ಕಾದಂಬರಿ. ಬರೆಯುವ ಮುನ್ನ ಎಷ್ಟೋ ಸಂಸಾರಗಳಲ್ಲಿ ಇಣಕಿ ನೋಡಿದ್ದೇನೆ. ನೇರವಾಗಿ ಕೇಳಿದ್ದೇನೆ. ಆತ್ಮೀಯವಾಗಿ ಪ್ರಶ್ನಿಸಿದ್ದೇನೆ. ಅದೆಲ್ಲವನ್ನು ಕಲೆಹಾಕಿ ನಿಮ್ಮ ಮುಂದೆ ಇಟ್ಟಿದ್ದೇನೆ. ಓದಿದ ನಂತರ ಯೋಚಿಸುವಂತಾದರೆ ನನ್ನ ಶ್ರಮ ಸಾರ್ಥಕ"

ಎನ್ನುತ್ತಾರೆ. ತಮ್ಮ ಮತ್ತೊಂದು ಕಾದಂಬರಿ 'ಬಾಂದಳದ ನಕ್ಷತ್ರ' ಕಾದಂಬರಿಯಲ್ಲಿನ ಮುನ್ನುಡಿಯ ಮಾತುಗಳಿವು. "ಬದುಕು ಒಂದು ಸುಳಿಯ ಹಾಗೆ. ಎಚ್ಚರ ತಪ್ಪಿದರೆ ಜೀವವನ್ನು ಒಪ್ಪಿಸಿಬಿಡಬೇಕಾಗುತ್ತದೆ. ಒಂದು ನೊಂದ ಹೆಣ್ಣಿನ ಪತ್ರದ ಒಕ್ಕಣೆ ಎನ್ನುತ್ತಾ ಮುಂದುವರೆದು ಹೀಗೆ ಹೇಳುತ್ತಾರೆ. ಈಗೀಗ ಸಮಾಜದ ಬದುಕಿನಲ್ಲಿ ಮುಖ್ಯವಾಗಿ ಹೆಣ್ಣಿನ ಜೀವನದಲ್ಲಿ ಅಪಾರವಾದ ಬದಲಾವಣೆ ಬಂದಿದೆ. ಕೆಲವು ಸಮಸ್ಯೆಗಳಿಗೆ ಇದರಿಂದ ಪರಿಹಾರ ಸಿಕ್ಕಿದರೂ ಇನ್ನು ಹಲವು ಹೊಸ ಸಮಸ್ಯೆಗಳ ನಡುವೆ ಸಿಕ್ಕು ತೊಳಲಾಡುತ್ತಿದ್ದಾರೆ. ಅಂಥ ಕನಸುಗಣ್ಣಿನ ಹರೆಯದ ಹೆಣ್ಣು ತೋಡಿಕೊಂಡ ಚಿತ್ರವನ್ನು ಕಾದಂಬರಿಯ ಮೂಲಕ ನಿಮ್ಮ ಮುಂದೆ ಇಟ್ಟಿದ್ದೇನೆ............ ಆದರೆ ಈ ಸುಳಿಯಿಂದ ಒಬ್ಬ ಹೆಣ್ಣಾದರೂ ಪಾರಾದರೆ ನನ್ನ ಬರಹ ಸಾರ್ಥಕ" ಎನ್ನುವ ಲೇಖಕಿಯ ಮುನ್ನುಡಿಗಳ ಮಾತುಗಳಿಂದ ವ್ಯಕ್ತವಾಗುವ ಸಂಗತಿಯೆಂದರೆ, ಬರವಣಿಗೆಯ ಮೂಲಕ ಓದುಗರು ಬದಲಾಗುತ್ತಾರೆ ಎಂಬ ನಂಬಿಕೆ ಮತ್ತು ಕಾದಂಬರಿಗಳಿಗೆ ಓದುಗರಿದ್ದೇ ಇರುತ್ತಾರೆ ಎಂಬ ಖಚಿತ ಭಾವ. ಎರಡೂ ಅಂಶಗಳು ಬರಹಗಾರ್ತಿಯರ ಮತ್ತು ಓದುಗ ಸಮುದಾಕ್ಕಿರುವ ಸಂಬಂಧವನ್ನು ಸೂಚಿಸುತ್ತವೆ. ಬರಹಗಾರ್ತಿಯರು ಮಹಿಳಾ ಸಾಮಾಜಿಕತೆಯ ಕಟುವಾಸ್ತವವನ್ನು ಎದರಿಸುತ್ತಿರುವಂತೆ, ಅವುಗಳನ್ನು ಓದುವುದರ ಮೂಲಕ ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮಹಿಳಾ ಸಮುದಾಯವೂ ಅದೇ ಸಾಮಾಜಿಕತೆಯ ಭಾಗವೇ ಆಗಿರುತ್ತಾರೆ. ಬರಹಗಾರ್ತಿಯರಿಗೆ ಬರಹದ ಕಲೆ ಗೊತ್ತಿರುವುದರಿಂದ ಅವರು ಕಾದಂಬರಿಗಳಲ್ಲಿ ಭ್ರಮಾಲೋಕವನ್ನು ಕಟ್ಟುತ್ತಾರೆ. ಹಾಗೆ ಮಾಡಲಾಗುವವರು ಓದುವುದರ ಮೂಲಕ ಅವುಗಳಲ್ಲಿ ವಿಹರಿಸಿ ಬರುತ್ತಾರೆ. ಇಬ್ಬರಿಗೂ ಸಮಾನವಾದುದು ತಮ್ಮದಲ್ಲದ ಬದುಕನ್ನು ಬದುಕುತ್ತಿರುವ ಅನಿವಾರ್ಯತೆ. ಈ ಬಂಧನಕ್ಕೊಳಪಟ್ಟವರು ಸುಲಭವಾಗಿ ಅದರಿಂದ ಬಿಡುಗಡೆ ಸಾಧ್ಯವಿಲ್ಲದಾಗ ತಮ್ಮಲ್ಲಿಯೇ ಒಂದಿಷ್ಟು ಹೊರದಾರಿಗಳ ಅನ್ವೇಷಣೆಗೆ ಹೊರಡುತ್ತಾರೆ. ಅವು ತಾತ್ಕಾಲಿಕವಾದವೋ, ಶಾಶ್ವತವಾದವೋ ಅಂತೂ ಒಂದಿಷ್ಟು ಕಟು ವಾಸ್ತವದಿಂದ ಬಿಡುಗಡೆಯಷ್ಟೇ. ಕಾದಂಬರಿಕಾರ್ತಿಯರು ತಮ್ಮ ಕಥಾನಕಗಳಲ್ಲಿ ಪದೇ ಪದೇ ಇಂಥ ಕನಸಿನ ಲೋಕವೊಂದನ್ನು ಸೃಷ್ಟಿಸುತ್ತಾರೆ. ಅಂಥ ಓದಿನಿಂದ ಓದುಗರು ಹಾದಿ ತಪ್ಪುತ್ತಾರೆ. ಭ್ರಮೆಯ ಲೋಕದಿಂದ ವಾಸ್ತವವನ್ನೆದುರಿಸುವ ಧೈರ್ಯವನ್ನು ಕಳೆದುಕೊಳ್ಳುತ್ತಾರೆ ಎಂದು ವಿಮರ್ಶೆ ಹೇಳುತ್ತದೆ. ತಮ್ಮ 'ಆಧುನಿಕ ಕನ್ನಡ ಮಹಿಳಾ ಕಥಾ ಸಾಹಿತ್ಯ' ಎಂಬ ಲೇಖನದಲ್ಲಿ ಡಾ. ಎಸ್.ವಿ. ಪ್ರಭಾವತಿಯವರು ಇಂಥ ಮಾತುಗಳನ್ನೇ ಆಡುತ್ತಾರೆ. "........

ನಿತ್ಯದ ಜೀವನದಲ್ಲಿ ಬಹುಮಂದಿ ಓದುಗರಿರುವ ಮಧ್ಯಮ ವರ್ಗದಲ್ಲಿ ಕಾಣಸಿಗದ ಬಂಗಲೆ, ಎಸ್ಟೇಟ್, ಎರಡು ಕಾರು, ದಿನಾ ಉಡಲು ರೇಷ್ಮೆಸೀರೆ, ಇಷ್ಟು ಸಾಲದೆಂದು ಸರ್ವಾಂಗ ಸುಂದರನೂ, ಸಕಲ ಕಲ್ಯಾಣ ಗುಣಗಳನ್ನುಳ್ಳವನೂ ಆದ ನಾಯಕ ಇವರಿಬ್ಬರ ಪ್ರಣಯ, ಇವರು ಎದುರಿಸುವ ಅಡ್ಡಿ ಆತಂಕಗಳು ಕೊನೆಗೆ ಎಲ್ಲವೂ ತಿಳಿಯಾಗಿ ಶುಭಂ ಎಂದು ಮುಗಿಯುವ ಇಂದಿನ ಚಲನಚಿತ್ರಗಳನ್ನೇ ಅತಿಯಾಗಿ ಹೋಲುವ ಅಥವಾ ಚಲನಚಿತ್ರಕ್ಕಾಗಿಯೇ ಬರೆದ ಕಾದಂಬರಿಗಳು. ಇವು ಯಾವ ರೀತಿಯಲ್ಲಿಯೂ ಮಹಿಳೆಯರು ಎದರಿಸುತ್ತಿರುವ ಸಮಸ್ಯೆಗಳನ್ನು ವಿಶ್ಲೇಷಿಸುವ ಗೋಜಿಗೆ ಹೋಗದೆ ಅದಕ್ಕೆ ಬದಲಾಗಿ ಆ ಕಾದಂಬರಿಗಳನ್ನು ಓದುವ ಹದಿಹರೆಯದ ಕಾಲೇಜು ಕನ್ಯೆಯರು ಜೀವನವೆಂದರೆ ಇದೇ ಎಂದು ನಂಬಿ ಕನಸಿನ ಲೋಕ ಸೇರುವಂತೆ ಮಾಡಿ, ಬದುಕನ್ನು ಧೈರ್ಯವಾಗಿ ಎದುರಿಸಲಾರದ ದುರ್ಬಲರನ್ನಾಗಿ ಮಾಡುತ್ತವೆ.

ಸಾಯಿಸುತೆಯವರ ಎಲ್ಲ ಕಾದಂಬರಿಗಳೂ ಈ ಮಾತಿಗೆ ಉದಾಹರಣೆಯಾಗ-ಬಹುದು. ಆಳವಾಗಿ, ಅಗಲವಾಗಿ ಬೆಳೆಯದ ಪಾತ್ರಗಳು, ತಳಪಾಯ ಗಟ್ಟಿಯಾಗಿಲ್ಲದ ಕಥಾಹಂದರ ಇವು ನಮ್ಮನ್ನು ಬೇರೊಂದು ಹುಸಿಲೋಕದ ಪ್ರೇಕ್ಷಕರನ್ನಾಗಿ ಮಾಡುತ್ತವೆ. ಇನ್ನೇನು ಸುಖಾಂತವಾಯಿತು ಎಂದುಕೊಳ್ಳುವಾಗ ಕೇವಲ ಇನ್ನೂರು ಪುಟಗಳಿಗೆ ಬೆಳೆಯುವುದಕ್ಕಾಗಿಯೇ ಪಾತ್ರಗಳು ಲೇಖಕಿ ಹೇಳಿದಂತೆ ಅಸಹಜವಾಗಿ ವರ್ತಿಸುತ್ತಾ, ನಮ್ಮ ಸಹನೆಯನ್ನು ಕೆಣಕುತ್ತಾ ಬೆಳೆಯುತ್ತವೆ. ಲೇಖಕಿಯರ ಕೃತಿಗಳಿಗೆ ಇವೇ ಮಾತನ್ನು ಅನ್ವಯಿಸಬಹುದು. ಇವುಗಳೆಲ್ಲಾ ಒಂದೇ ವಸ್ತುವಿನ ಚರ್ವಿತಚರ್ವಣ.[೧೭]

ಈ ವಿಮರ್ಶೆ ಕನಸುಣಿಗಳಾದ ಯುವತಿಯರು ವಾಸ್ತವವನ್ನು ಎದುರಿಸುವಲ್ಲಿ ಸೋಲುತ್ತಾರೆ ಎನ್ನುತ್ತದೆ. ಆದರೆ ತಾವಿರದ ಸ್ಥಿತಿಯಲ್ಲಿ ತಾವಾಗುವ ಕನಸಗುಳಿರುವ ಕಾದಂಬರಿಗಳು ಓದುಗ ಲೋಕಕ್ಕೊಂದು ತಾತ್ಕಾಲಿಕ ಸಮಾಧಾನದ ಸ್ಥಿತಿಯನ್ನು ಕಲ್ಪಿಸಿಕೊಡುತ್ತಿವೆ. ಕಾಲಾನಂತರದಲ್ಲಿ ವಾಸ್ತವವನ್ನು ಎದುರಿಸಲು ಈ ಕನಸಿನಲೋಕ ಸಹಾಯ ಮಾಡುತ್ತದೆ. ಹೆಣ್ಣಿನ ಅವಲಂಬಿತ ಬದುಕಿಗೆ ಇಂಥ ಕನಸುಗಳ ಜೊತೆ ಬೇಕೇ ಆಗುತ್ತದೆ. ಯಾಕೆಂದರೆ ಅವಳ ವಾಸ್ತವ ಬಲು ದುಸ್ತರವಾಗಿರುತ್ತದೆ. ಇಡೀ ಕಾದಂಬರಿಗಳು ತಮ್ಮ ವಸ್ತುವಾಗಿ ಒಂದು ಆದರ್ಶ ಕುಟುಂಬವನ್ನು ಆಯ್ದುಕೊಳ್ಳುತ್ತವೆ. ಆ ಕುಟುಂಬದ ಯಜಮಾನ ಪ್ರೀತಿಸುವ, ಕಾಳಜಿ ವಹಿಸುವ ಹೆಂಡತಿಯನ್ನು ರಕ್ಷಿಸುವ ಲಕ್ಷಣಗಳನ್ನು ಹೊಂದಿರುತ್ತಾನೆ. ಮತ್ತು ಹೆಂಗಸಿನ ಎಲ್ಲ ಕಷ್ಟಕ್ಕೂ ಬೆನ್ನೆಲುಬಾಗಿ ನಿಂತು ಅವಳಿಗೆ

ಆಸರೆಯಾಗಿರುತ್ತಾನೆ. ಕಾದಂಬರಿಗಳಲ್ಲಿನ ಹೆಣ್ಣುಲೋಕ ಅಲ್ಲಿನ ಗಂಡು ಜಗತ್ತಿಗೆ ಪೂರಕವಾಗಿ ವರ್ತಿಸುವ ಗುಣವುಳ್ಳವಳು ಆಗಿರುತ್ತಾಳೆ. ಉಷಾ ನವರತ್ನರಾಮ್ ಅವರ 'ಅವಲಂಬಿತೆ' ಕಾದಂಬರಿಯಲ್ಲಿ ನಾಯಕ ತ್ರಿಭುವನ ನಾಯಕಿ ಕುಂಕುಮಳನ್ನು ಇಷ್ಟಪಟ್ಟರೂ ಅತ್ತೆಯ ಮಗ ಸದಾನಂದ ಮತ್ತು ಕುಂಕುಮಳ ಮೇಲೆ ಸಂಶಯ ತಾಳಿ ಹೆಂಡತಿಯನ್ನು ಹಿಂಸಿಸುತ್ತಾನೆ. ಅವಳನ್ನು ಬಲತ್ಕರಿಸಿ ತನ್ನ ವಶಪಡಿಸಿಕೊಳ್ಳುತ್ತಾನೆ. ಹಾಗೇ ಮಾಡಿ "ತ್ರಿಭುವನ್ ಸೊಟ್ಟಗೆ ನಕ್ಕು ನೀನು ಕೈಹಿಡಿದ ಹೆಂಡತಿ ಜ್ಞಾಪಕ ಇರ್‍ಲಿ, ನಿನ್ನ ಮುಟ್ಟುವ ಹಕ್ಕು ನನಗಿದೆ. ನೀನು ಹೀಗೆ ನನ್ನ ಕೆರಳಸ್ತಾ ಇದ್ರೆ ಇದರ ಪರಿಣಾಮ ನೀನೇ ಎದುರಿಸಬೇಕಾದಿತು. ನನಗೆ ಬೇಕಾದಾಗ, ಬೇಕೆನಿಸಿದಾಗ ನಿನ್ನ ಬಳಿ ಬರ್‍ತೀನಿ. ಆಗ ನೀನು ನನ್ನ ತಡೆಯುವ ಹಾಗಿಲ್ಲ" (ಅವಲಂಬನ, ಉಷ ನವರತ್ನರಾಮ್, ಪುಟ-೭೬)ಎನ್ನುವ ಮಾತುಗಳು ಹೆಣ್ಣು ಕೌಟುಂಬಿಕ ನೆಲೆಯಲ್ಲೇ ಅನುಭವಿಸುವ ವೇದನೆಗಳನ್ನು ಹಿಡಿದಿಡುತ್ತದೆ. ತನಗಿಷ್ಟವಿಲ್ಲದ ಮದುವೆಯಾಗುವ ಸಂದರ್ಭ ಹೆಣ್ಣಿನ ವಾಸ್ತವತೆಯಲ್ಲೂ ಇದೆ. ಕಾದಂಬರಿಗಳಲ್ಲಿ ಶಕ್ತ ಹೆಣ್ಣುಗಳ ಚಿತ್ರಣವಿರುವುದಿಲ್ಲ. ಅವರೆಲ್ಲಾ ಮರ-ಬಳ್ಳಿಯ ಸಂಬಂಧವನ್ನು ಚಿತ್ರಿಸುತ್ತಾರೆ ಎನ್ನುವ ವಿಮರ್ಶೆಯ ಮಾತುಗಳಿವೆ. ವಾಸ್ತವದಲ್ಲಿಲ್ಲದ ಸಬಲತೆಯನ್ನು ಸಾಹಿತ್ಯದದಲ್ಲಿ ತರಲು ಹೇಗೆ ಸಾಧ್ಯ. ಈ ಪ್ರಕ್ರಿಯೆಯಲ್ಲಿ ತೊಡಗಿರುವ ಮಹಿಳಾ ಸಮುದಾಯ ತಮ್ಮ ಅಸಹಾಯಕತೆಯನ್ನು ಅನುಭವಿಸುತ್ತಾ ಇರುವವರು. ಅವರು ಹೆಣ್ಣು ತನ್ನ ಸೌಂದರ್ಯದಿಂದ ಗಂಡನ್ನು ಸೆಳೆಯಬಹುದು ಎಂಬುದನ್ನು ಬಲವಾಗಿ ನಂಬುತ್ತಾರೆ ಮತ್ತು ಅದೇ ಭಾವವನ್ನು ತಮ್ಮ ಮಾತಗಳಲ್ಲಿ ಹೀಗೆ ಹೇಳುತ್ತಾರೆ. "ಹೆಣ್ಣು ಅಬಲೆಯಲ್ಲ. ಅವಳಿಗೆ ತನ್ನ ಅಸ್ತ್ರಗಳನ್ನು ಉಪಯೋಗಿಸೋದು ಗೊತ್ತಾಗಿ ಹೋದ್ರೆ ಗಂಡಸೇ ಅಬಲವಾಗಿ ಹೋಗ್ತಾನೇಂತಾ. ನೀನು ದಿನಕ್ಕೊಂದು ತರಹ ಡ್ರೆಸ್ ಮಾಡ್ಕೋಬೇಕು, ದೊಡ್ಡಸ್ತಿಕೆ ತೋರಿಸ್ಬೇಕು, ಬಂದವರ ಮುಂದೆ ಮೆರೆಯಬೇಕು. ತ್ರಿಭು ನಿನ್ನ ವಿವಿಧ ರೀತಿಗಳಲ್ಲಿ ಕಾಣಬೇಕು. ಆಗ ಅವನು ನಿನ್ನ ರೂಪಕ್ಕೆ ಮೋಹಕತೆಗೆ ಶರಣಾಗತನಾಗಬೇಕು. ಯಾವಾಗ್ಲೂ ಅಷ್ಟೇ ಕುಂಕುಮ, ಹೆಂಡತಿ ಗಂಡನನ್ನು ಮೆಚ್ಚಿಸಬೇಕು. ಅವನಿಗೆ ಸೋತು ಅವನನ್ನು ಗೆಲ್ಲಬೇಕು. ಆಗ ಅವನು ಇನ್ನೊಂದು ಹೆಣ್ಣನ್ನು ಕಣ್ಣೆತ್ತಿಯೂ ನೋಡೋಲ್ಲ" (ಅವಲಂಬನ, ಉಷಾ ನವರತ್ನರಾಮ್, ಪುಟ ೧೫೨).

"ಸಾಹಿತ್ಯದಿಂದ ಬುದ್ಧಿ ವಿಕಾಸವಾಗುವುದು; ಜ್ಞಾನಾರ್ಜನೆಯಾಗುವುದು ಎಂದು ಮೀರಾ ಅಂದಾಗ ಶಾಮು ಕುಚೋದ್ಯದಿಂದ "ನೀನು ಜ್ಞಾನಾರ್ಜನೆ ಮಾಡಿ ಯಾವ ರಾಜ್ಯ

ಆಳಬೇಕಾಗಿದೆ? ನನ್ನ ಹೃದಯ ರಾಜ್ಯ ಆಳಲು ಆ ಜೀವರಹಿತ ಪುಸ್ತಕಗಳು ಬೇಕಾಗಿಲ್ಲ. ಮೋಹ ಬೀಸುವ ಕಣ್ಣುಗಳು, ಸೆರೆಹಿಡಿಯುವ ತೋಳು, ನಿನ್ನೆಲ್ಲಾ ಕಾನೂನುಗಳನ್ನೂ, ಒಂದು ಮುತ್ತಿನಿಂದ ಗಾಳಿಪಾಲು ಮಾಡುವ ನಿನ್ನ ತುಟಿಗಳು ನನ್ನ ರಾಜ್ಯಕ್ಕೆ ಸಾಕು"(ಅಪಸ್ವರ, ತ್ರಿವೇಣಿ, ಪುಟ ೬೦) ಎನ್ನುವ ಮಾತುಗಳು ಹೆಣ್ಣನ್ನು ಬರಿಯ ದೇಹದ ಸೌಂದರ್ಯದಿಂದ ಮಾಪನಮಾಡುವ ಸಾಮಾಜಿಕ ಸಂಗತಿಗಳನ್ನು ಹೇಳುತ್ತದೆ ಕಾದಂಬರಿಗಳಲ್ಲಿ ಪದೇ ಪದೇ ಬರುವ ಹೆಣ್ಣಿನ ಸೌಂದರ್ಯದ ವರ್ಣನೆಗಳು, ಮಹಿಳಾ ಪತ್ರಿಕೆಗಳಲ್ಲಿ ಬರುವ ಗಂಡನನ್ನು ಹೇಗೆ ಒಲಿಸಿಕೊಳ್ಳಬೇಕು. ಅವನಿಗೆ ಹೇಗೆ ಆಕರ್ಷಕವಾಗಿ ಕಾಣಬೇಕು, ತನ್ನ ಸಂಗಾತಿಯನ್ನು ಸೆಳೆಯುವ ತಂತ್ರಗಳಾವುವು ಎನ್ನುವ ವಿಷಯಗಳ ಮೇಲೆ ಒತ್ತು ಕೊಡುವ ಲೇಖನಗಳು, ಹೆಣ್ಣು ಎಂದರೆ ದೇಹ ಎಂಬ ಸಾಮಾಜಿಕ ನಂಬಿಕೆಯನ್ನೇ ಸ್ಥಿರ ಮಾಡುತ್ತವೆ. ಆಸರೆಯಲ್ಲಿ ಹೆಣ್ಣು ಬದುಕುಬೇಕೆಂದು ನಿರ್ಬಂದಿಸುವ ಸಮಾಜ, ಅದರಿಂದ ಹೊರಬಂದಾಗ ಅದರೆಲ್ಲಾ ಕೆಡಕುಗಳಿಗೆ ಅವಳನ್ನೇ ಹೊಣೆಗಾರಳನ್ನಾಗಿ ಮಾಡುತ್ತದೆ. ಹೊಣೆಗಾರಿಕೆಯ ಜವಾಬ್ದಾರಿಯನ್ನು ಹೊರಲು ಸಾಮರ್ಥ್ಯವಿಲ್ಲದ ಬಹು ಮಹಿಳಾ ಸಮುದಾಯ ಮತ್ತದೇ ಹಳೆಯ ನೆಲೆಗಳನ್ನು ಕಷ್ಟವೋ, ನಷ್ಟವೋ ನೆಚ್ಚಿ ಬದುಕುಬೇಕಾಗುತ್ತದೆ. ಆ ಸ್ಥಿತಿಯಿಂದೇನೂ ಅವಳಿಗೆ ಸಂಪೂರ್ಣ ಸುಖವಿಲ್ಲ, ಆದರೂ ಸುಖವನ್ನು ಅರಸಬೇಕು: "ಒಲವು, ಪ್ರೀತಿ ಬರಿಯ ಕತೆ ಕಾದಂಬರಿಗಳಲ್ಲಿ ಮಾತ್ರ ಎಂದು ನಾನು ತಿಳಿದಿದ್ದೆ"............. ಕುಂಕುಮ ಅವನಿಗೊರಗಿ ನಿಟ್ಟುಸಿರಿಟ್ಟಳು. ತಾನು ಇನ್ನು ಇವನ ಅವಲಂಬಿತೆ, ಅದೇ ನನ್ನ ಬಾಳಿನ ಒಲವು ಸುಖ" (ಅವಲಂಬನ, ಉಷಾ ನವರತ್ನರಾಮ್, ಪುಟ ೨೪೮) ಹೀಗೆ ಅವಲಂಬನದ ಬದುಕು ಹೆಣ್ಣಿನದು ಎಂಬುದನ್ನು ಬಹಳ ರಮ್ಯದ ನೆಲೆಯಲ್ಲಿ ಉಷಾ ಹೇಳಲು ತೊಡಗಿದರೂ ಅಲ್ಲಿನ ಹೆಣ್ಣಿನ ಸ್ಥಿತಿ ವಾಸ್ತವದ್ದೂ ಆಗಿದೆ. ಒಲಿದವನ್ನ ಮದುವೆಯಾದ ವೈಭವಿ ಅವನಿಂದ ಮೋಸ ಹೋಗಿ ಆತ್ಮಹತ್ಯೆ ಮಾಡಿಕೊಳ್ಳುವ ದುರಂತವನ್ನು ತಲುಪಿದರೆ, ಹಿರಿಯರು ಮಾಡಿದ ಮದುವೆಯ ಚೌಕಟ್ಟಿನಲ್ಲಿ ಗಂಡನ ಸಂಶಯಕ್ಕೆ ಸಿಲುಕಿ ಕುಂಕುಮ ನೋವನ್ನು ಅನುಭವಿಸುತ್ತಾಳೆ. ಅಲ್ಲಿ ಆ ದಾಂಪತ್ಯದಲ್ಲಿ ಮಾನಸಿಕ ಪ್ರೀತಿ ಬೆಳೆಯದೆ ದೈಹಿಕ ಸಂಬಂಧ ಬಲಾತ್ಕಾರದಿಂದ ಏರ್ಪಟ್ಟರೂ ಹೆಂಡತಿಯಾಗಿ ಅದನ್ನು ಅನುಭವಿಸುವುದು ಹೆಣ್ಣಿನ ದುರ್ಬಲತೆಯನ್ನು ತೋರುತ್ತದೆ ಎಂದು ವಿಮರ್ಶಿಸಬಹುದಾದರೂ ಅಧೀನ ಸ್ಥಿತಿಯಲ್ಲಿರುವ ಅನೇಕ ಮಹಿಳೆಯರು ಇಂಥ ಕೌಟುಂಬಿಕ ದೌರ್ಜನ್ಯಗಳನ್ನು ಅನುಭವಿಸುತ್ತಿದ್ದಾರೆ

ಎಂಬುದು ಸತ್ಯವಾದ ಸಂಗತಿಯೇ. ಗಂಡನನ್ನು ತೊರೆದು ಸ್ವತಂತ್ರವಾಗಿ ಬದುಕಲಾರದ ಅವಲಂಬಿತ ಸ್ಥಿತಿಯೊಂದು ಸಾಮಾಜಿಕವಾಗಿ ನಿರ್ಮಿತಗೊಂಡಿದೆ. ಯಾಕೆಂದರೆ "ಅವಳಿರುವ ವರ್ತುಲ ಅವಳು ಪುರುಷರ ವಶವಾಗಲೆಂದೇ ರೂಪುಗೊಂಡದ್ದು. ಆತನನ್ನು ಶ್ರೇಷ್ಠನೆಂದು ತಿಳಿಯಲು ಕಲಿತವಳು, ಎಂದೂ ಅವನಿಗೆ ಸಮಾನಳಾಗಳು. ಒಂದು ವೇಳೆ ಹೆಂಗಸು ತಾನು ಮಾನವ ಜೀವದ ಸ್ಥಾನವನ್ನು ಪಡೆಯಬೇಕೆಂಬ ಬಯಕೆಯನ್ನು ಹತ್ತಿಕ್ಕುವುದು ಸಾಧ್ಯವಾಗಿದ್ದರೆ, ಆಗ ಆಕೆ ತನಗಿಂತ ಶ್ರೇಷ್ಠವಾದ ಜೀವಿಗಳ ಕಡೆಗೆ ದಾಟುವ ಕನಸನ್ನು ಕಾಣತೊಡಗುತ್ತಾಳೆ. ಆ ಸಾರ್ವಭೌಮ ನಿಯೋಗಿಯೊಡನೆ ಒಂದಾಗಲು ಬಯಸುತ್ತಾಳೆ. ಗಂಡು ಆಕೆಯ ಪಾಲಿಗೆ ಚಿರಸತ್ಯ, ಸಾರಭೂತವ್ಯಕ್ತಿ. ಆತನಿಗೆ ತನ್ನ ದೇಹ ಮತ್ತು ಆತ್ಮಗಳನ್ನು ಒಪ್ಪಿಸಿಕೊಳ್ಳುವುದಲ್ಲದೆ ಬೇರೆ ದಾರಿ ಅವಳಿಗೆ ಇಲ್ಲ. ಆಕೆ ಸದಾ ಅವಲಂಬಿಯೇ ಆಗಿರಬೇಕಾಗಿದೆ."[೧೮] ಎಂದು 'ಸಿಮೊನ್ ದ ಬೋವಾ' ತನ್ನ 'ದ ಸೆಕೆಂಡ್ ಸೆಕ್ಸ್'ನಲ್ಲಿ ಹೇಳಿರುವ ಮಾತುಗಳು ಮಹಿಳೆ ರೂಪುಗೊಂಡಿರುವ ಸಾಮಾಜಿಕ ವ್ಯಕ್ತಿತ್ವವನ್ನು ಹೇಳುತ್ತವೆ.

ಕಾದಂಬರಿಗಳು ಆಯ್ಕೆ ಮಾಡಿಕೊಂಡಿರುವ ವಸ್ತುಗಳೆಲ್ಲಾ ಮಹಿಳೆ – ಕುಟುಂಬ ವರ್ತುಲಕ್ಕೆ ಸಂಬಂಧಪಟ್ಟವು. ವಿವಾಹ ಅದರ ಕೇಂದ್ರಬಿಂದು. ಹೆಣ್ಣಿನ ಸಮಸ್ಯೆಗಳು ಪ್ರಾರಂಭಗೊಳ್ಳುವುದು ತನ್ನ ಭ್ರೂಣಾವಸ್ಥೆಯಿಂದಲೇ. ಅವಳ ಬದುಕಿಗೆ ಅಡ್ಡಗಾಲುಗಳು ಅಲ್ಲಿಂದಲೇ ಶುರು. 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ' ಎಂಬ ಮಾತುಗಳು ಇಂಥ ಸಾಮಾಜಿಕ ಪಾತಾಳಯಿಂದ ಹೊರಟ ವಿಚಾರಗಳೇ ಎಂಬುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅವಳು ಬೆಳೆಯುವ ಪ್ರತಿ ಹಂತದುದ್ದಕ್ಕೂ ಹೆಣ್ಣಾಗಲು ಅನೇಕ ನಿರ್ದೇಶನಗಳನ್ನು ನೀಡುತ್ತಾ ಹೋಗಿ, ಭ್ರೂಣಹತ್ಯೆ, ವಿಧವಾ ಸಮಸ್ಯೆ, ವಿವಾಹದ ಸಂದರ್ಭದಲ್ಲಿ ಅವಳ ಲೈಂಗಿಕತೆಯನ್ನು, ಸಂಪೂರ್ಣವಾಗಿ ಪುರುಷನ ವಶಕ್ಕೆ ಒಪ್ಪಿಸಿ ಅವಳನ್ನು ಅಧೀನಳಾಗಿಸಿಕೊಳ್ಳುವ ತಂತ್ರ ವಿದಿತವೇ. ಈ ವಿವಾಹ ಎನ್ನುವುದು ಹೆಣ್ಣಿನ ಬದುಕಿನ ಎಲ್ಲ ಸಮಸ್ಯೆಗಳ ಬಹು ಮುಖ್ಯ ಕೇಂದ್ರ ಸಂಗತಿ. ಇದನ್ನು ಸುತ್ತುವರೆದೆ ಮಹಿಳೆಯ ಎಲ್ಲ ಸಮಸ್ಯೆಗಳು ರೂಪು ಪಡೆಯುತ್ತವೆ.

ಸಾಯಿಸುತೆಯವರ 'ವಿವಾಹ ಬಂಧನ' ಕಾದಂಬರಿ 'ವಿವಾಹ' ಎಂಬ ಸಂಗತಿ ದೂರವಾದ ಮನಸ್ಸುಗಳನ್ನು ಒಂದುಗೂಡಿಸಿ ವಿವಾಹ ಬಂಧನಕ್ಕೆ ಹೇಗೆ ಒಳಮಾಡಿತೆನ್ನುವ ವಸ್ತು ಉಳ್ಳಂತಹ ಕಥಾನಕ. ಬೇರೊಬ್ಬ ಹುಡುಗಿಯನ್ನು (ಶುಭ) ಪ್ರೀತಿಸಿದ ಡಾ. ಶಶಿಧರ,

ತಂದೆ-ತಾಯಿ ಮೆಚ್ಚಿದ ಹುಡುಗಿ ಅನುರಾಧಾಳನ್ನು ಮದುವೆಯಾಗುತ್ತಾನೆ. ಹುಡುಗನಿಗೆ ಇಷ್ಟವಿಲ್ಲದ ಮದುವೆಯಾದರೂ 'ವಿವಾಹ ಅನ್ನುವ ಬಂಧನ ಬಿದ್ದರೆ ಅವನೇ ಸರಿಹೋಗುತ್ತಾನೆ' ಎಂಬ ಅಚಲ ನಂಬಿಕೆಯಿಂದ ಮದುವೆ ನಡೆಯುತ್ತದೆ. ಅನುರಾಧಾ ಸುಂದರಿ, ಸುಗುಣೆ, ವಿನಯೆ, ಬುದ್ಧಿವಂತೆ, ಮದುವೆಯ ದಿನ ಅವಳು ಅಂದು ಕೊಳ್ಳುವ ಮಾತು. "ಇಂದು ತಾನವರ ಸೊತ್ತು, ಅವರ ಗೌರವ ಕಾಪಾಡುವ ಹೊಣೆ ನನ್ನದು. ಅದಕ್ಕೆ ತಾನೆಂದೂ ಚ್ಯುತಿ ಬಾರದ ಹಾಗೆ ನಡೆದುಕೊಳ್ಳಬೇಕೆಂದು ನಿರ್ಧರಿಸಿದಳು. ಮೊದಲ ರಾತ್ರಿ ಗಂಡ ಅವಳನ್ನು ತಿರುಗಿಯೂ ನೋಡದಾದಾಗ, ಏನೇ ಆದರೂ ಗಂಡನ ಉದಾಸೀನ ಬೇರೆಯವರಿಗೆ ಗೊತ್ತಾಗದ ಹಾಗೆ ನಡೆದುಕೊಳ್ಳಬೇಕೆಂದು ನಿರ್ಧರಿಸಿದಳು. ಹಾಗೆಯೇ ಅವನಿಂದ ದೂರವೆ ಇದ್ದು ತನ್ನ ವ್ಯಕ್ತಿತ್ವದ ಪ್ರಭಾವದಿಂದ ಗಂಡನ ಪ್ರೀತಿಯನ್ನು ಗಳಿಸಿಕೊಂಡಳು ಎಂಬುದನ್ನು ಕತೆ ಹೇಳುತ್ತದೆ. ಇಡೀ ಕಾದಂಬರಿಯಲ್ಲಿ ಹೆಣ್ಣು ಎಂದರೆ ಹೇಗಿರಬೇಕು ಎನ್ನುವುದನ್ನು ಪಾತ್ರಗಳು ಹೇಳುತ್ತವೆ. ಸಾಮಾಜಿಕವಾಗಿ ದತ್ತವಾದ ಮಾದರಿ ಪಾತ್ರವಾಗಿ ಅನುರಾಧಾಳನ್ನು ನಾವು ಗಮನಿಸಬಹುದು. ಅವಳ ಆದರ್ಶವೇ 'ಸೀತಾ', "ಚುಂಚನಕಟ್ಟೆಯ ಸುಂದರ ಶ್ರೀರಾಮಚಂದ್ರ, ಸೀತೆ, ಲಕ್ಷ್ಮಣರ ವಿಗ್ರಹಗಳನ್ನು ಅನುರಾಧಾ ಕಣ್ಣು ತುಂಬ ನೋಡಿದಳು. ಸೀತೆಯ ಪತಿಪ್ರೇಮ............. ಅವಳಲ್ಲಿ ಅಚಲವಾದ ವಿಶ್ವಾಸವನ್ನು ಮೂಡಿಸಿದವು. ಸೀತೆಯ ಆದರ್ಶ ಅವಳಿಗೆ ಬಹಳವಾಗಿ ಹಿಡಿಸಿತು. ರಾಮನು ನಿರ್ದಯನಾಗಿ ಕಾಡಿಗೆ ಅಟ್ಟಿದರೂ ಅವಳ ಪತಿಪ್ರೇಮ ಚಲಿಸಲಿಲ್ಲ. ಮಹಿಳೆಯರಿಗೆ ಅವಳೊಂದು ದಾರಿದೀಪವೆಂದುಕೊಂಡಳು". "ಹೆಣ್ಣು ಮಕ್ಕಳಿಗೆ ನಾಚಿಕೆ ಚೆಂದ"............ ಇದು ಅನುರಾಧಾಳ ತಂದೆಯ ಅಭಿಪ್ರಾಯ, ಕಾದಂಬರಿಯ ಕೊನೆಯ ಮಾತು. "ಅನು ವಿವಾಹ ಬಂಧನ ಅನ್ನುವುದು ಇಷ್ಟು ಬಿಗಿಯಾಗಿರುತ್ತೆ ಅಂತ ನನಗೆ ಗೊತ್ತಿರಲಿಲ್ಲ ಎಂದು ಮಡದಿಯನ್ನು ತನ್ನ ಎದೆಗೆ ಒರಗಿಸಿಕೊಂಡ. ಅವರಿಬ್ಬರ ಬಂಧನಕ್ಕೆ ಸಾಕ್ಷಿ ಎಂಬಂತೆ ಅನುರಾಧಾಳ ಕುತ್ತಿಗೆಯಲ್ಲಿದ್ದ ತಾಳಿ ಶಶಿಧರನ ಹೃದಯದ ಮೇಲೆ ತನ್ನ ಮುದ್ರೆ ಒತ್ತಿತು".

ಈ ಕಾದಂಬರಿಯಲ್ಲಿ, ಇಂಥ ಅನೇಕ ಕಾದಂಬರಿಗಳಲ್ಲಿ ಬರುವ ಕೌಟುಂಬಿಕ ಸಮಸ್ಯೆಗಳಿಗೆಲ್ಲಾ ಒಂದು ಸರಳ, ಸುಲಭ ಪರಿಹಾರ ಇದ್ದೇ ಇರುತ್ತದೆ. ಇಲ್ಲಿನ ಸೊಸೆಯರು ಯಾವುದೇ ಸಮಸ್ಯೆಗಳಿಲ್ಲದಂತೆ ತಮ್ಮ ನಯದ ನಡುವಳಿಕೆಗಳಿಂದ ತಮ್ಮ ಕುಟುಂಬಗಳ ಸದಸ್ಯರ ಮನ ಸೆಳೆಯುತ್ತಾರೆ. ಗೃಹಕೃತ್ಯ, ಅಡುಗೆ, ಆಳುಕಾಳುಗಳ ಉಸ್ತುವಾರಿ, ಗಂಡನ ಬೇಕು ಬೇಡಗಳ ಬಗ್ಗೆ ಗಮನ, ಅವನ ಕೋಣೆಯನ್ನು ಶುಭ್ರವಾಗಿಟ್ಟು ಅಲಂಕರಿಸುವುದು

ಎಲ್ಲ ಕೆಲಸಗಳನ್ನು ಅಚ್ಚುಕಟ್ಟಾಗಿ ನಿಭಾಯಿಸುತ್ತಾರೆ. ಕಾದಂಬರಿಯಲ್ಲಿ ಅಂಥ ಹೆಣ್ಣು ಪಾತ್ರಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿರುವುದನ್ನು ಗಮನಿಸಬಹುದು. ಅಂಥ ಗೌರವಕ್ಕೆ ಭಾಜನಳಾಗುವುದನ್ನು ಅತಿಶಯವಾಗಿ ಚಿತ್ರಿಸಲಾಗುತ್ತದೆ. ಇದು ಒಳ್ಳೆಯ ಗೃಹಿಣಿಯಾದಾಗ ಸಿಗುವ ಮಾನ್ಯತೆ. ಹೀಗೆ ಹೇಳಿದ ಹಾಗೇ ಕೇಳಿಕೊಂಡು ತಗ್ಗಿಬಗ್ಗಿ ನಡೆದಾಗಲಾದರೂ ತನಗೆ ಬದುಕು ಸಹನೀಯವಾಗಬಹುದೆಂಬ ನಿರೀಕ್ಷೆ ಇಲ್ಲದೆ. ತುಂಬಾ ಸಂದರ್ಭಗಳಲ್ಲಿ ಅವಳು ಹಾಗೇ 'ಹೇಳಿದಂತೆ ಕೇಳಿಕೊಂಡು ಬಿದ್ದಾಗಲೂ' ಪರಿಸ್ಥಿತಿ ಏನೂ ಬದಲಾಗದಿರುವುದು ಕಂಡು ಬರುತ್ತದೆ. ಉತ್ತಮ ಗೃಹಿಣಿ, ಆದರ್ಶ ಪತ್ನಿ, ತ್ಯಾಗಮಯಿ ತಾಯಿ– ಇವೆಲ್ಲಾ ಅವಳನ್ನು ಒಂದು ರೀತಿಯ ಗುಂಗಿನಲ್ಲಿರಿಸುವ ಮಿಥ್‌ಗಳೇ, ಆದರೆ ಅವಳ ಸಾಮಾಜಿಕ ಬದುಕು ಅವಳಿಗೆ ದಕ್ಕಿರುವುದು ಇಷ್ಟೆ. ಆದ್ದರಿಂದಲೇ ಕಾದಂಬರಿಗಳ ಯಾವ ಪಾತ್ರಗಳೂ ಕ್ರಾಂತಿಕಾರಿ ಪಾತ್ರಗಳಲ್ಲ. ಅವು ಹೇಗೋ ಏನೋ ಹೊಂದಿಕೊಂಡು ಹೋಗುವ ಪಾತ್ರಗಳು. ಹಾಗೇ ಮಾಡಲು ಕಾರಣಗಳು ಅವಳ ಕ್ರಿಯಾರಹಿತ ಬದುಕಿನ ಕ್ರಮಗಳಲ್ಲಿವೆ. ಸಿಮೋನ್ ದ ಬೋವಾ ತನ್ನ ದ ಸೆಕೆಂಡ್ ಸೆಕ್ಸ್‌ನಲ್ಲಿನ 'ಪ್ರೀತಿ ಮತ್ತು ಹೆಣ್ಣು' ಭಾಗದಲ್ಲಿ ಈ ಕುರಿತು ಸಮರ್ಥವಾದ ವಿವರಣೆಯನ್ನು ನೀಡುತ್ತಾಳೆ. ವಿವರಣೆಯಲ್ಲಿ ಹೇಳುವಂತೆ ಹುಟ್ಟಿನಂದಿನಿಂದಲೂ ಅವಲಂಬನದ ಬದುಕು ಮಹಿಳೆಗೆ ಯವುದೇ ಜವಾಬ್ದಾರಿಯನ್ನು ನೀಡಿರುವುದಿಲ್ಲ. ಅವಳು ಆ ಜವಾಬ್ದಾರಿಯನ್ನು ನಿಭಾಯಿಸಹೊರಟರೆ ಅದರೆಲ್ಲಾ ಹೊಣೆಗಾರಿಕೆಯನ್ನು ಮೈಮೇಲೆ ಎಳೆದುಕೊಳ್ಳಬೇಕಾಗುತ್ತದೆ. ಮೈಮೇಲೆ ಜವಾಬ್ದಾರಿಯನ್ನು ಎಳೆದುಕೊಳ್ಳಲು ಮಹಿಳೆಗೆ ಹಲವಾರು ಅಡೆತಡೆಗಳಿವೆ. ಅವು ಅವಳ ಮಾನಸಿಕ ನೆಲೆಗೆ ಸಂಬಂಧಿಸಿದಂಥವಾಗಿವೆ. ಸಾಮಾಜಿಕವಾಗಿ ಹೆಣ್ಣು ರೂಪುಗೊಳ್ಳುವಾಗ ಅವಳು ಅಧೀನ ಸ್ಥಿತಿಯಲ್ಲಿ ಬದುಕಬೇಕಾದ'ರೆ ತರಬೇತಿ ನೀಡಲಾಗಿರುವುದರಿಂದ. ಅದಕ್ಕನುಗುಣವಾಗಿ ಬದುಕಿದರೆ ಮಾತ್ರ ಅವಳಿಗೆ ಇರುವ ಸ್ಥಿತಿಯಲ್ಲೇ ಭ್ರಮೆಯದಾದರೂ ಸರಿ ಕೊಂಚ ಮಾನ್ಯತೆ ಸಿಕ್ಕುವುದರಿಂದ ಅವಳು ಹೇಗೊ ಏನೋ ಹೊಂದಿಕೊಳ್ಳಬೇಕಾದ ಅನಿವಾರ್ಯತೆಗೆ ರಾಜಿ ಆಗುತ್ತಾಳೆ. ಈ ಹಿಂದೆ ಚರ್ಚಿಸಿದಂತೆ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಮಕ್ಕಳ ಪಾಲನೆ, ಪೋಷಣೆ, ಆಹಾರ ಸಿದ್ಧಪಡಿಸುವಿಕೆ, ಸಂತಾನೋತ್ಪತ್ತಿ, ಮನೆಗೆಲಸ ಇವುಗಳಿಗೆ ದುಡಿಮೆಯ ಬೆಲೆ ಏನೂ ಇಲ್ಲದಿರುವುದನ್ನು ಗುರುತಿಸಿದ್ದಾರೆ ಮತ್ತು ಹೆಂಗಸರ ಕೆಲಸವೆಂದರೆ ಅನುತ್ಪಾದಕ ಕೆಲಸ ಎಂಬ ಧೋರಣೆಯನ್ನು ಗುರುತಿಸುತ್ತಾರೆ. ಮತ್ತದನ್ನು ತೀವ್ರವಾಗಿ ಖಂಡಿಸುತ್ತಾರೆ. ಇಂಥ ನೆಲೆಯಿಂದ ಹೊರಬಂದು ಮಹಿಳೆ ಆರ್ಥಿಕ

ವಲಯದಲ್ಲಿ ತನ್ನನ್ನು ದುಡಿಮೆಗೆ ತೊಡಗಿಸಿಕೊಂಡರೂ ಹೆಚ್ಚಿನ ಕೆಲಸಗಳು ಸೇವಾವಲಯದ ವಿಸ್ತರಣೆಗಳಾಗಿ ಶಿಕ್ಷಕಿ, ದಾದಿ, ಹೊಲಗೆಗಾರ್ತಿ, ಅಡಿಗೆಯವಳು, ಮನೆಗೆಲಸದವಳು, ಡಾಕ್ಟರ್ ಹುದ್ದೆಗಳು ಕಂಡು ಬರುತ್ತವೆ. ಈ ಮಾದರಿಯ ಸಾಮಾಜೀಕರಣದ ತರಬೇತಿಯಲ್ಲಿ ಹೆಣ್ಣು ಬಂಧನದ ಭಾವವನ್ನು ತೀವ್ರವಾಗಿ ಅನುಭವಿಸುತ್ತಾಳೆ. ಈ ಸಂದರ್ಭದಲ್ಲಿ ಅವಳಿಗೆ ತನ್ನದೇ ಆದ ಸಮಯದ, ಅಸ್ತಿತ್ವದ ನೆಲೆಯಿರುವುದಿಲ್ಲ. ಅವಳು ಬಿಡುವಿಲ್ಲದ ಬಿಡುವನ್ನು ಅನುಭವಿಸುತ್ತಿರುತ್ತಾಳೆ. ಮಹಿಳೆಯ ದುಡಿಮೆ ಮತ್ತು ಬಿಡುವು ಕುರಿತಂತೆ ಪ್ರಸ್ತುತ ಅಧ್ಯಯನದಲ್ಲಿ ಪ್ರಶ್ನಾವಳಿಗಳ ಮೂಲಕ ಮನೆಯಲ್ಲಿರುವ ಗೃಹಿಣಿಯರಿಗೆ, ಉದ್ಯೋಗಸ್ಥ ಮಹಿಳೆಯರಿಗೆ ಬರಹಗಾರರಿಗೆ ಪ್ರಶ್ನೆಕೇಳಿ ಉತ್ತರಗಳನ್ನು ಪಡೆದುಕೊಳ್ಳಲಾಗಿದೆ. ಶೇಕಡಾ ೬೫% ರಷ್ಟು ಭಾಗ ಮಹಿಳೆಯರು ತಮ್ಮ ಬಿಡುವನ್ನು ವ್ಯಾಖ್ಯಾನಿಸುವುದು ಏಕಮಾದರಿಯಲ್ಲೇ. ಮಹಿಳೆಯರ ದುಡಿಮೆಯ ನಡುವಿನ ಬಿಡುವು ನಿರಾಂತಕವಾಗಿರುವುದಿಲ್ಲ, ಅದು ಅವಳ ಮುಂದಿನ ಕೆಲಸಕ್ಕೆ ಸಿದ್ಧತೆ ನಡೆಸುವ ತಯಾರಿಯಲ್ಲೂ ಗಂಡ-ಮಕ್ಕಳನ್ನು ಕಾಯುವ ಸಂದರ್ಭದ ಸಮಯವಾಗಿಯೇ ಇರುತ್ತದೆ. ಅವಳಿಗೆ ಅವಳದೇ ಆದ ಸಮಯ, ಬಿಡುವು ಓದು-ಬರಹಗಳು ಲಭ್ಯವಾಗುವುದು ಬಹಳ ವಿರಳವಾದ ಸಂಗತಿಯೆಂಬುದು ಇಂದಿನ ಮಹಿಳೆಯ ದಿನಚರಿಯಿಂದಲೂ ಗೊತ್ತಾಗುತ್ತದೆ. ಅವರ ದಿನದ ಹೆಚ್ಚಿನ ಭಾಗ ಕುಟುಂಬದ ಸದಸ್ಯರಿಗಾಗಿ ಮತ್ತು ಅವರನ್ನು ಕಾಯುವುದಕ್ಕಾಗಿಯೇ ಮೀಸಲಾಗಿರುತ್ತದೆ. ಅದರ ನಡುವೆ ಸಿಗುವ ಬಿಡುವು ಬಿಡುವಲ್ಲ. ಅದು ಕಾಯುವ ಕೆಲಸ. ಆ ಸಂದರ್ಭದಲ್ಲಿ ಅವಳ ಓದು, ಬರಹ ಯಾವ ಸಂಗತಿಗಳು ನಿರಾಳವಾಗಿ ಸಾಧ್ಯವಾಗುವುದಿಲ್ಲ. ಈ ಕುರಿತು ಬಹಳ ಹಿಂದೆಯೇ ಅನೇಕ ಸ್ತ್ರೀವಾದಿಗಳು ಚರ್ಚೆಯನ್ನು ಮಾಡಿದ್ದಾರೆ. 'ಮೇರಿ ವೋಲ್‌ಸ್ಟೋನ್ ಕ್ರಾಫ್ಟ್' ೧೮ನೆಯ ಶತಮಾನದ ಕೊನೆಯ ಹೊತ್ತಿಗೆ ತಮ್ಮ 'ವಿಂಡಿಕೇಷನ್ ಆಫ್ ದ ರೈಟ್ಸ್ ಆಫ್ ವುಮೆನ್' ಎಂಬ ಕೃತಿಯಲ್ಲಿ ಮಹಿಳಾ ಬರವಣಿಗೆಗೆ ಇರುವ ಸಮಸ್ಯೆಗಳ ಮೂಲ ಸಾಮಾಜಿಕ ನೆಲೆಯದ್ದು ಎಂದು ಗುರುತಿಸುತ್ತಾರೆ. 'ವರ್ಜಿನಿಯಾ ವೂಲ್ಫ್' ತಮ್ಮ 'ಎ ರೂಮ್ ಆಫ್ ಒನ್ಸ್ ಓನ್' ಕೃತಿಯಲ್ಲಿ ಲೇಖಕಿಯಾಗುವ ಕಷ್ಟಗಳ ಪರಂಪರೆಯನ್ನು ಹೇಳುತ್ತಾರೆ. ಮಹಿಳಾ ಸೃಜನಶೀಲತೆಯ ತೊಡಕುಗಳನ್ನು ಕುರಿತು ವೂಲ್ಫ್‌ಳ ಮಾತುಗಳು ಈ ಸಂದರ್ಭದಲ್ಲಿ ಬಹಳ ಮುಖ್ಯವಾಗುತ್ತದೆ. ಯಾವುದೇ ಅಡ್ಡಿ ಆತಂಕಗಳರದ ನೆಮ್ಮದಿಯ ಪ್ರತ್ಯೇಕ ಕೊಠಡಿಯು ಮಹಿಳೆಗೆ ಬೇಕು. ಅಲ್ಲಿ ಆಕೆ ಯೋಚಿಸುವ, ಬರೆಯುವ, ಬರೆದದ್ದನ್ನು ಮತ್ತೆ

ಓದುವ ವಿಮರ್ಶಿಸುವ ಕಾರ್ಯವನ್ನು ನಿರಾತಂಕವಾಗಿ ಕೈಗೊಳ್ಳಬಲ್ಲಳು ಎನ್ನುವ ಮಾತುಗಳೇ ಮಹಿಳೆಗೆ ಈ ಸಂಗತಿಗಳ ಅಭಾವವಿರುವುದನ್ನು ತಿಳಿಸುತ್ತವೆ. ಇದನ್ನೇ ಬಹಳ ವಿವರವಾಗಿ ತನ್ನ 'ದ ಸೆಕೆಂಡ್ ಸೆಕ್ಸ್'ನಲ್ಲಿ 'ಸಿಮೋನ್ ದ ಬೋವಾ' ಹೇಳುತ್ತಾಳೆ. ಪಿತೃ ಪ್ರಧಾನ ನೆಲೆಯ ಬದುಕು ಹೆಣ್ಣಿಗೆ ಸ್ವಾತಂತ್ರ ನೀಡದಿರುವುದನ್ನು ಗುರುತಿಸಿದ ಬೋವಾ "ಮಹಿಳೆಯರು ತಮಗೆ ತಾವೇ ಸೇರಿದವರಲ್ಲ, ಅವರು ಸಮುದಾಯ ಮತ್ತು ಕುಟುಂಬಕ್ಕೆ ಸೇರಿದ ವ್ಯಕ್ತಿ. ಯಾವ ಕ್ಷಣದಲ್ಲಿಯಾದರೂ ಅವಳು ಅವರ ಕೇಳಿದ ವಿವರಣೆಗಳಿಗೆ ಉತ್ತರಿಸಬೇಕಾದ ಬದ್ಧತೆಗೆ ಒಳಗಾಗಿರುತ್ತಾಳೆ. ಹೀಗಾಗಿಯೇ ಎಷ್ಟೇ ಶ್ರೇಷ್ಠ ಪ್ರತಿಭೆಯಿದ್ದರೂ ವೈಯಕ್ತಿಕ ನೆಲೆಯಲ್ಲಿಲ್ಲದ ಸಾಮಾಜಿಕ ಅಡೆತಡೆಗಳಿಂದಾಗಿ ಆಕೆಯ ಪ್ರತಿಭೆ–ಸೃಜನಶೀಲತೆ ಪೂರ್ಣ ಪ್ರಮಾಣದಲ್ಲಿ ವ್ಯಕ್ತವಾಗಿರುವುದಿಲ್ಲ". ಅಲ್ಲದೆ ಹಿಡಿತದಲ್ಲಿಟ್ಟ ಕಾರಣದಿಂದ ಸ್ತ್ರೀವಾದಿಯಾದ (Stughal)ಸ್ಟಗಲ್ ಹೇಳುವಂತೆ "ಹುಟ್ಟಿದ ಪ್ರತಿಯೊಬ್ಬ ಶ್ರೇಷ್ಠ ಮಹಿಳಾ ಪ್ರತಿಭೆಯು ಮಾನವ ಕುಲಕ್ಕೆ ದಕ್ಕದೆ ಹೋಗುತ್ತದೆ" (Every genius born a woman is lost to humanity).[೧೯]

ಈ ಎಲ್ಲ ಕಾರಣಗಳಿಂದಲೇ ಮಹಿಳೆಯ ದುಡಿಮೆ ಹೇಗೆ ಅವಳ ಆಯ್ಕೆಯದಲ್ಲವೋ ಹಾಗೆಯೇ ಅವಳ ವಿರಾಮವೂ ಕೂಡಾ ಅವಳದಲ್ಲ. ಅವಳೆಲ್ಲ ಸಂಗತಿಗಳು, ಸೃಜನತೆಯೂ ಸೇರಿದಂತೆ ಒತ್ತಡಗಳ ನಡುವಿನಲ್ಲೇ ಘಟಿಸುವ ಸಂಗತಿಗಳು ಆಯ್ಕೆಯೇ ಇಲ್ಲದ ಈ ತೆರನಾದ ಬದುಕು ಅವಳನ್ನು ಮುಖೇಡಿಯಾಗಿ ಮಾಡುವುದರಲ್ಲಿ ಸಂಶಯವಿಲ್ಲ. ಎಲ್ಲಕ್ಕೂ ಇನ್ನೊಬ್ಬರನ್ನು ಅವಲಂಬಿಸುವ ವ್ಯಕ್ತಿತ್ವದಲ್ಲಿ ಸ್ವಯಂಭೂ ಶಕ್ತಿ ಮಡುವುದಾದರೂ ಹೇಗೆ ಸಾಧ್ಯ?

'ಜನಪ್ರಿಯ' ಕಾದಂಬರಿಗಳಲ್ಲಿ ಮೂಡುವ ಹೆಂಗಳೆಯರು ಅತಿ ಭಾವುಕ, ಕೋಮಲ, ಒಳ್ಳೆತನದ ಸಾಕಾರರೂಪಗಳಾಗಿರುವುದರ ಹಿನ್ನಲೆಯೂ ಇದೆ ಆಗಿದೆ. ಸಾಯಿಸುತೆಯವರ ಎಲ್ಲ ಕಾದಂಬರಿಗಳಲ್ಲಿ ಇಂಥ ಹೆಣ್ಣುಗಳ ಚಿತ್ರಣವಿದೆ. 'ಪಸರಿಸಿದ ಶ್ರೀಗಂಧ' ಕಾದಂಬರಿ ಚಲನಚಿತ್ರವೂ ಆಗಿದೆ. ನಾಯಕಿ ಮಾಧುರಿ ತನ್ನ ಗೆಳತಿ ರೋಹಿಣಿಯ ಮನೆಗೆಂದು ಹೊರಟ ಸಂದರ್ಭದಲ್ಲಿ ಅವಳನ್ನು ತನ್ನ ಮನೆಗೆ ಕರೆತಂದ ಕಾರ್ತಿಕ್ ಅವಳು ಮಂಪರಿನಲ್ಲಿ ಇರುವಾಗ ಶಾಸ್ತ್ರೋಕ್ತವಾಗಿ ಮದುವೆಯಾಗುತ್ತಾನೆ. ತನ್ನ ತಂದೆ ರಂಗನಾಥ, ತಾಯಿ ರಂಜಿತಾಳಿಗೆ ಮಾಡಿದ ಅನ್ಯಾಯವನ್ನು ಅರಿತು ಮತ್ತೆ ಅತ್ತೆ ಮನೆಗೆ ಬರುತ್ತಾಳೆ ಮಾಧುರಿ. ದಂಪತಿಗಳಲ್ಲಿ ಹೊಂದಾಣಿಕೆಗಾಗಿ ಸಮಯ ಹಿಡಿಯುತ್ತದೆ.

ಮೊದಲು, ಒಲ್ಲೆ ತನಗಿದು ಬಲವಂತದ ಮದುವೆ ಎಂದು ತಂದೆ ಮನೆಗೆ ಹೋದ ಮಾಧುರಿ ಮತ್ತೇ ಬಂದಾಗ, ಕಾರ್ತಿಕ್ ಅವಳಿಂದ ದೂರ ಇರುತ್ತಿದ್ದ ಸಂದರ್ಭದಲ್ಲಿನ ಸಂಭಾಷಣೆ; ......... 'ನನ್ನ ಕೊರಳಿನಲ್ಲಿರೋ ಮಾಂಗಲ್ಯ ಕಿತ್ತುಕೊಂಡ್ಬಿಡಿ! ಒಂದು ಕ್ಷಣ ಈ ಮನೆಯಲ್ಲಿ ಇರೋಲ್ಲ' (ಮಾಧುರಿ- ಪುಟ ೭೩) "ಇಪ್ಪತ್ತನೇಯ ಶತಮಾನದ ಹೆಣ್ಣಿಗೆ ಈ ಕಾಂಪ್ಲೆಕ್ಸ್ ಒಳ್ಳೆದಲ್ಲ, ನಾನು ಅಂದೇ ಕಿತ್ತು ಎಸೆಯೋಕೆ ಹೇಳಿದ್ದೆ" ಇದು ಕಾರ್ತಿಕನ ಉತ್ತರ.

ಇಲ್ಲಿ ಇಪ್ಪತ್ತನೆಯ ಶತಮಾನದ ಹೆಣ್ಣು ಎಂದರೆ ಆಧುನಿಕ ಶಿಕ್ಷಣ ಪಡೆದ ಹೆಣ್ಣು ಎಂದರ್ಥ, ಆದರೆ ಶಿಕ್ಷಣ ಹೆಣ್ಣಿನ ಸ್ಥಿತಿಯನ್ನು ಬದಲಿಸುವ ಸಂಗತಿಗಳಾಗಿ ಎಲ್ಲ ಸಂದರ್ಭಗಳಲ್ಲಿಯೂ ಒದಗಿಬರುವುದಿಲ್ಲ. ಈಗಾಗಲೇ ಗಮನಿಸಿರುವಂತೆ ಶಿಕ್ಷಣ, ಆಧುನಿಕತೆ ಮುಂತಾದ ಸಂಗತಿಗಳು ಪಿತೃಪ್ರಧಾನ ನೆಲೆಯ ಹೊಸ ಪರಿಕರಗಳೇ ಎನ್ನುವುದು ತಿಳಿದಿರುವ ಸಂಗತಿ. ಏಕೆಂದರೆ ಆಧುನಿಕತೆ, ಶಿಕ್ಷಣಗಳು ಹೆಣ್ಣಿನ ಅಂತರ್ಯದಲ್ಲಿ ಯಾವ ಬದಲಾವಣೆಯನ್ನು ತರದೆ, ಇಂದಿಗೂ ಬಹು ಮಹಿಳಾ ಸಮುದಾಯ ಆಶ್ರಿತ ಸ್ಥಿತಿಯಲ್ಲೇ ತಮ್ಮ ಬದುಕನ್ನು ನೂಕುವಂಥವರಾಗಿದ್ದಾರೆ. ಅವರಿಗೆ ಪತಿಯೇ ಸಕಲವೂ ಆಗಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಹಾಗೇ ಆಶ್ರಿತಳಾಗುವ ಹೆಣ್ಣುಗಳು ಗಂಡು ಬಯಸುವ ಗುಣಗಳನ್ನೇ ಹೊಂದಿರಬೇಕು ಅವಳ ಸೌಂದರ್ಯ, ಅಲಂಕಾರ ಎಲ್ಲವೂ ಅಂತಿಮವಾಗಿ ಅವನ ಮೆಚ್ಚುಗೆಗೆ ಪಾತ್ರವಾಗಬೇಕು. ಕೆಲವು ಕಾದಂಬರಿಗಳ ಮಾತುಗಳನ್ನು ಈ ಸಂದರ್ಭದಲ್ಲಿ ಉದ್ಧರಿಸಬಹುದು. ಈ ವಿವರ ಕಾರ್ತಿಕ್‌ನಿಗೆ ಕಾಣುವ ಮಾಧುರಿಯ ರೂಪಕ್ಕೆ ಸಂಬಂಧಿಸಿದ್ದು.

"ಯೌವ್ವನ ಚೆಲುವು ಅವಳ ಅಂಗಾಂಗಗಳಲ್ಲಿ ಉಕ್ಕಿ ಹರಿಯುತ್ತಿತ್ತು. ಶುಭ್ರ ಬಣ್ಣಕ್ಕೆ ಮಾರ್ದವತೆಯ ಶೃಂಗಾರ. ಅವನ ಕಣ್ಣುಗಳಲ್ಲಿ ಹೊಳುಪು ಮೂಡಿತು (ಪುಟ ೮೨) "ಸುಂದರ ಪುಷ್ಪದಂತೆ ಕಂಡಳು" (ಪುಟ ೮೭) "ಕಾರ್ತಿಕ್.......... ಚೀರಿದ ಮಾಧುರಿ ಅವನೆದೆಯಲ್ಲಿ ಆಸರೆ ಪಡೆದಳು. ಅವಳ ಸೊಂಪಿನ ಮೃದುವಾದ ಬಳ್ಳಿಯ ದೇಹಕ್ಕೆ ಅವನ ದಷ್ಟಪುಷ್ಟವಾದ ಮೈಕಟ್ಟು ಆಸರೆ" (ಪಸರಿಸಿದ ಶ್ರೀಗಂಧ, ಸಾಯಿಸುತೆ, ಪುಟ ೧೦೩).

"ನವಿಲು ನೀಲಿ ಬಣ್ಣದ ಸೀರೆಯುಟ್ಟು ಬೆಳ್ಳಿಯ ಆಭರಣಗಳಿಂದ ಅಲಂಕರಿಸಿಕೊಂಡಿದ್ದ ವೈಭವಿ ಎಲ್ಲರ ಕಣ್ಣಿಗೆ ಹಬ್ಬವಾಗಿದ್ದಳು. ದೊಡ್ಡ ತುರುಬು ಕಟ್ಟಿ ಅದಕ್ಕೆ ಬೆಳ್ಳಿಯ ಗೆಜ್ಜೆಗಳಿದ್ದ ಹೇರ್ ಪಿನ್‌ಗಳನ್ನು ಅಲ್ಲಲ್ಲಿ ಸಿಕ್ಕಿಸಿದ್ದಳು. ಕಿವಿಯ ತೂಗುಯ್ಯಾಲೆ, ಕತ್ತಿನಲ್ಲಿದ್ದ ಚೋಕರ್, ಕೈಲಿದ್ದ ಬ್ರೇಸ್ಲೆಟ್, ಸೊಂಟದ ಅಂದ ಹೆಚ್ಚಿಸಲು ಹಾಕಿಕೊಂಡಿದ್ದ

ಹಿಪ್‌ಸ್ಟರ್ ಚೈನ್ ಎಲ್ಲವೂ ಅವಳ ಮಾದಕ ಚೆಲುವನ್ನು ಹೆಚ್ಚಿಸಿದ್ದವು. ಮಸುಕು ಬೆಳಕಿನಲ್ಲಿ ಎಲ್ಲರೊಡನೆ ಹರಟುತ್ತಾ, ನಗುತ್ತಾ ಬೆರೆಯುತ್ತಿದ್ದ ಅವಳನ್ನು ಕುಳಿತಲ್ಲಿಂದಲೇ ತ್ರಿಭುವನ್ ನೋಡಿದ. ಈ ಉಡುಪಿನಲ್ಲಿ ಕುಂಕುಮ ಹೇಗೆ ಕಾಣಬಹುದು?........ ಈಗ ಕುಂಕುಮನೂ ಹೀಗೇ ಅಂದವಾಗಿ ಅಲಂಕರಿಸಿಕೊಂಡು ಎಲ್ಲರೊಡನೆ ಬೆರೆಯುವಂತಿದ್ದರೆ ತನಗೆ ಎಷ್ಟು ಹೆಮ್ಮೆಯಾಗುತ್ತಿತ್ತು(ಅವಲಂಬನ, ಉಷಾ ನವರತ್ನರಾಮ್ ಪುಟ ೧೪೧).

"ಬಾಗಿಲಲ್ಲಿ ಸುಜಾತಾ ಬಂದು ನಿಂತಳು, ರಣಜಿತ್ ಉಸಿರು ಬಿಗಿಹಿಡಿದು ಅವಳತ್ತ ನೋಡಿದ. ನೋಡುತ್ತಲೇ ಇದ್ದ. ನವಿಲು ನೀಲಿ ಬಣ್ಣದ ಕ್ರೇಪ್ ಸೀರೆಗೆ ಎರಡು ಬೆರಳುಗಳ ಜರಿಯಿದ್ದ ಸೀರೆ, ಅದೇ ಮಾದರಿಯ ಅರ್ಧ ತೋಳಿನ ಚೋಲಿ, ಕತ್ತಿನಲ್ಲಿದ್ದ ಮಾಂಗಲ್ಯದೊಂದಿಗೆ ಚಿನ್ನದ ಗುಂಡುಗಳ ಎರಡೆಳೆ ಸರ, ಕಿವಿಗೆ ವಜ್ರದೋಲೆಯೊಂದಿಗೆ ಚಿನ್ನದ ಜುಮುಕಿ, ಕೆನ್ನೆ ಸರಪಳ, ನವಿರಾಗಿ ಹಚ್ಚಿದ್ದ ಮುಖದ ಬಣ್ಣ, ಕಾಡಿಗೆ ಕಣ್ಣುಗಳು, ತುಟಿಯ ರಂಗು, ಹಣೆಯಲ್ಲಿದ್ದ ದುಂಡು ಕುಂಕುಮ, ಸೀರೆ ಮೈಮಾಟಕ್ಕೆ ಅಂಟಿಕೊಂಡಿತ್ತು. ಅವಳ ಕೆನೆಹಾಲು ಬಣ್ಣದ ಮೈಗೆ ಸೀರೆ ತುಂಬಾ ಒಪ್ಪುತ್ತಿತ್ತು. ಕೈಗೆ ಹಾಕಿದ್ದ ನಾಲ್ಕು ಚಿನ್ನದ ಬಳೆಗಳು ಇನ್ನೊಂದು ಕೈಯಲ್ಲಿದ್ದ ವಾಚು......... ನಿಜ, ಇವಳನ್ನು ಯಶವಂತ ಏಕೆ ಬಿಡುತ್ತಾನೆ. ವಿಚ್ಛೇದನ ಕೊಡಲು ಖಂಡಿತಾ ಒಪ್ಪಲಾರನೇಕೆಂದು ಈಗ ತನಗೆ ಅರಿವಾಗುತ್ತಿದೆ. ತಾನು ನೋಡಿಯೇ ತಣಿಯದಾದವನು, ಅವನು ಇವಳನ್ನು, ಅನುಭವಿಸಿದವನು ಹೇಗೆ ಬಿಡುವನು", (ಪುಟ ೧೩೧) "........ ಅವನ ಬಲಿಷ್ಠ ಬಾಹುಗಳಲ್ಲಿ, ಅವನ ಹಿಡಿತದ ಭರವಸೆಯಲ್ಲಿ, ಅವನ ಸ್ಪರ್ಶದಲ್ಲಿ ಸುಜಾತಾ ತನ್ನನ್ನು ತಾನೆ ಮರೆತಳು"(ಅತಿಕ್ರಮಣ, ಉಷಾ ನವರತ್ನರಾಮ್, ಪುಟ ೧೪೩).

.......... ಅವಳಗರಿವಿಲ್ಲದೆಯೇ ಅವಳ ಕೈ ಪುರುಷೋತ್ತಮನ ಕೈಯನ್ನು ಸ್ಪರ್ಶಿಸಿತು ಅವನ ಒರಟು ಕೈ ಬೆರಳುಗಳು ಅವಳ ಮೃದುವಾದ, ಬೆವೆತ ಕೈಯನ್ನು ಮೆಲ್ಲನೆ ಅದುಮಿತು. "ಹೆದರಬೇಡಾ........ ಐ ವಿಲ್ ಲುಕ್ ಆಫ್ಟರ್ ಯೂ, ನಾನು ನಿನ್ನ ನೋಡಿಕೊಳ್ತೇನೆ"[೧೧] ಎಂದು ಭರವಸೆ ಕೊಡುತ್ತಾನೆ (ವಧು ಬೇಕಾಗಿದೆ, ಉಷಾ ನವರತ್ನರಾಮ್, ಪುಟ ೧೨೨).

ಎಲ್ಲ ಕಾದಂಬರಿಗಳಲ್ಲೂ ಇಂಥ ಉದಾಹರಣೆಗಳನ್ನು ಎತ್ತಿಕೊಡಬಹುದು. ಪ್ರಣಯದ, ಪ್ರೀತಿಯ ವಿವರಗಳ ಸಂದರ್ಭದಲ್ಲೆಲ್ಲೂ ಅಶ್ಲೀಲ ವಿವರಣೆಗೆ ತೊಡಗದೆ, ನವಿರಾದ ಭಾವಗಳಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಹೆಣ್ಣು

ಕಾಣಬರುವುದು ಶರಣಾಗತ ಸ್ಥಿತಿಯಲ್ಲೆ. ಬರಹಗಾರ್ತಿಯಾದ ಆನಂದಿ ಸದಾಶಿವರಾವ್ ಅವರು ಲೇಖ-ಲೋಕ – ೪ರಲ್ಲಿ ತಮ್ಮ ಆತ್ಮಕಥನದಲ್ಲಿ ತಮ್ಮ ಕಾದಂಬರಿಗಳಲ್ಲಿನ ಹೆಣ್ಣು ಚಿತ್ರಿತಗೊಳ್ಳುವ ಬಗೆಯನ್ನು ವಿವರಿಸುತ್ತಾರೆ. "ನನ್ನ ಪ್ರಥಮ ಕಾದಂಬರಿ 'ಸ್ನೇಹ ಸುಧೆ' ಆ ಕಾಲದಲ್ಲಿ ಪ್ರಚಲಿತ ಸಾಮಾಜಿಕ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿದೆ. ಹೆಣ್ಣು ಮಕ್ಕಳಿಗಿದ್ದ ಸ್ವಾತಂತ್ರ್ಯದ ಚೌಕಟ್ಟಿನೊಳಗೆ ಕತೆಯ ಹಂದರ ಹೆಣೆಯಲ್ಪಟ್ಟಿದೆ ಎನ್ನುತ್ತಾ ಆನಂದಿ ಅವರು ಮುಂದುವರೆದು ಅಲ್ಲದೆ ನಾನು ಬರೆದ ಹೆಚ್ಚಿನ ಕಥೆಗಳಲ್ಲಿ ಕಥಾನಾಯಕಿಯರೇ ಕತೆಯ ಕೇಂದ್ರಬಿಂದುಗಳಾಗುತ್ತಾರೆ. ಅವರ ಆಶೆ, ಆಕಾಂಕ್ಷೆಗಳೆಲ್ಲಾ ಸೀಮಿತವಾದವು. ಸಮಾಜ ಹಾಕಿದ ಸಂಪ್ರದಾಯದ ಚೌಕಟ್ಟನ್ನು ಮಿರಿ ಇವರು ಹೊರ ಬಂದವರಲ್ಲ. ಹಾಗೆ ಹೊರ ಬರಬೇಕೆಂದು ಅವರಿಗೆ ಅನಿಸಿದ್ದೂ ಇಲ್ಲ. ತಮ್ಮ ಸಂಸಾರ, ಮನೆ, ಮಕ್ಕಳು ಈ ಮೌಲ್ಯದೊಳಗೆ ಸುತ್ತುತ್ತಾ ಜೀವನದ ಸಾರ್ಥಕತೆಯನ್ನು ಕಂಡು ಕೊಂಡವರು ಅವರು. ತಾಯಿ ಕೋಳಿಯ ಪುಕ್ಕದೊಳಗೆ ಸುರಕ್ಷತೆಯ ಭಾವವನ್ನು ಅನುಭವಿಸುವ ಪುಟ್ಟ ಮರಿಗಳಂತೆ ತಮ್ಮ ಮನೆ, ಗಂಡನ ಆಶ್ರಯದ ಕೃಪಾ ಛತ್ರದಡಿಯಲ್ಲಿ ನೆಮ್ಮದಿಯ ಉಸಿರು ಬಿಡುವರು".[೨೦] ಎಂದು ತಮ್ಮ ಹೆಣ್ಣು ಪಾತ್ರಗಳನ್ನು ಕುರಿತು ಲೇಖಕಿಯೇ ಮಾತನಾಡಿರುವುದು ಅವರ ನಂಬುಗೆ ಯಾವ ಕಡೆಗಿದೆ ಎಂಬುದನ್ನು ಚಿತ್ರಿಸುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ವಾಚಕರು ಇವರ ಕೃತಿಗಳನ್ನು ಕುರಿತು ನೀಡುವ ತಮ್ಮ ಅಭಿಪ್ರಾಯ ".......... ಇವರ ಕಥಾ ಸಂಕಲನದಲ್ಲಿ ಮಧ್ಯಮ ವರ್ಗದ ಮಹಿಳೆಯರೇ ಕೇಂದ್ರ ಬಿಂದುವಾಗಿರುವರು ಸ್ವತಃ ಕುಲೀನ ಮನೆತನದಲ್ಲಿ ಹುಟ್ಟಿ ಸಂಘರ್ಷಗಳ ಉಳಿಪೆಟ್ಟಿಗೆ ಮೈಯೊಡ್ಡುವ ಸಂದರ್ಭಗಳನ್ನು ಅನುಭವಿಸದ ಈ ಲೇಖಕಿಯ ಕಥಾ ನಾಯಕಿಯರು ಇವರದೇ ಬಾಳಸ್ತರದಲ್ಲಿ ಬದುಕುವಂಥವರು. ತಮ್ಮ ಸೀಮಿತ ಬದುಕಿನ ವರ್ತುಲದಿಂದ ಒಂದು ಹೆಜ್ಜೆ ಹೊರಗಿಟ್ಟರೂ ಅಭದ್ರತೆಯ ಭಯದಿಂದಲೋ ಅಥವಾ ಸಂಘರ್ಷಕ್ಕೆ ಹೆದರಿಯೋ ಮತ್ತೆ ಓಡಿ ಬರುವುದು ಆ ವರ್ತುಲದೊಳಗೆಯೇ. ಇವರು ಸ್ವತಃ ನಿಲ್ಲಲಾರರು. ಇವರು ನಿಲ್ಲುವ ಕಾಲಿಗೆ ಮತ್ತಾರದೋ ಆಧಾರ ಬೇಕು. ಹಾಗಾದಾಗ ಮಾತ್ರ ಇವರು ನಿರಾಳವಾಗಿ ಉಸಿರಾಡಬಲ್ಲರು. ಗಟ್ಟಿಯಾಗಿ ನಿಲ್ಲಬಲ್ಲರು. ಒಂದು ಬದ್ಧವಾದ ಜೀವನ ಮೌಲ್ಯಗಳಿಗೆ ತಮ್ಮ ಬದುಕನ್ನು ಮುಡುಪಾಗಿಟ್ಟು ಅದರಲ್ಲೇ ಸಾರ್ಥಕತೆಯನ್ನು ಕಾಣುವ ಸ್ತ್ರೀ ಪಾತ್ರಗಳು ಇವರವು. ಇಲ್ಲಿ ಬದುಕು ಬಹಳ ಸರಳ ಎಲ್ಲಿಯೂ ಸಂಕೀರ್ಣತೆಯಿಲ್ಲ. ಹೋರಾಟವಿಲ್ಲ".[೨೧]

ಹೀಗೆ ಅಭಿಪ್ರಾಯ ಪಡುವ ವಾಚಕ ವರ್ಗ ಹೇಳುವ ಮಾತುಗಳು ಈ ತೆರನಾದ ಕಾದಂಬರಿಗಳ ಇತಿ-ಮಿತಿಗಳನ್ನು ಹೇಳುವುದರ ಜೊತೆ-ಜೊತೆಗೆ ಮಹಿಳಾ ಲೇಖಕಿ ಮತ್ತು ಓದುಗರ ವಾಸ್ತವತೆಯ ಕಡೆಗೂ ಬೆರಳು ಮಾಡಿ ತೋರಿಸುತ್ತವೆ. ಈ ಕಾರಣಗಳಿಂದಲೇ ಮಹಿಳಾ ಸೃಜನತೆ ತನ್ನನ್ನು ತಾನು ಹೊರದಾರಿಗಳಲ್ಲಿ ವ್ಯಕ್ತಪಡಿಸಿಕೊಳ್ಳುವ ಸಂದರ್ಭಗಳಲ್ಲಿ ಅವರೊಳಗಿರುವ ವಸ್ತುವಿನ ಆಯ್ಕೆಯಷ್ಟೇ ಮುಖ್ಯವಾಗುವುದು ಅವರು ಆಯ್ದುಕೊಂಡ ಪರಿಕರಗಳು. ಈಗಾಗಲೇ ವಿದಿತವಾದ ಅಂಶಗಳ ಮುಖಾಂತರ ಅರಿತುಕೊಂಡ ಸಂಗತಿ ಆ ಪರಿಕರಗಳು ಸಿದ್ಧಗೊಂಡಿರುವುದು ಪಿತೃಪ್ರಧಾನ ನೆಲೆಯಲ್ಲಿಯೇ ಎಂಬುದು. ವಸ್ತುವಿನ ಆಯ್ಕೆಯ ಸಂದರ್ಭಕ್ಕೆ ಬಂದಾಗ ಸಾಹಿತ್ಯ ವಿಮರ್ಶೆ; ವಸ್ತು ಘನವಾಗಿರಬೇಕು. ಬದುಕಿನ ಆಳಕ್ಕಿಳಿದು ನೋಡಬೇಕು, ವಸ್ತುವಿನಲ್ಲಿ ವೈವಿಧ್ಯತೆಯಿರಬೇಕು ಎಂದೆಲ್ಲಾ ಹೇಳುತ್ತದೆ. ತತ್ವಶಾಸ್ತ್ರ, ಕಾಮ, ........ ಇತ್ಯಾದಿಗಳನ್ನು ಗಂಭೀರ ಸಂಗತಿಗಳೆಂದು ಪರಿಗಣಿಸುತ್ತದೆ. ಇವೇ ವಿಷಯಗಳನ್ನು ಹೆಂಗಸರು ತಮ್ಮ ಕೃತಿಗಳಲ್ಲಿ ಒಡಮೂಡಿಸಿದಾಗ ಅದು ತಿರಸ್ಕೃತ ಕೃತಿಯಾಗುತ್ತದೆ. ಲೇಖಕಿಯರ ಬದುಕಿಗೂ ಅವರು ಬರೆಯುವ ಸಂಗತಿಗಳಿಗೂ ತಾಳೆ ಹಾಕಲಾಗುತ್ತದೆ. ಅದು ಅವರ ವೈಯಕ್ತಿಕ ಬದುಕೇ ಎಂದು ಪರಿಗಣಿಸಲಾಗುತ್ತದೆ. ತಮ್ಮ 'ವಿಮೆನ್ ರೈಟಿಂಗ್ ಇನ್ ಇಂಡಿಯಾ'ದಲ್ಲಿ ಸೂಸಿ ಥಾರೂ ಮತ್ತು ಕೆ. ಲಲಿತಾ ಅವರು ತೆಲುಗು ಕೃತಿ ರಾಧಿಕ ಸಾಂತ್ವನಂ ಪಠ್ಯದ ಪಾಡನ್ನು ವಿವರಿಸಿದ್ದನ್ನು ಈ ಹಿಂದೆಯೇ ಚರ್ಚಿಸಲಾಗಿದೆ. ಕೃತಿಕಾರ್ತಿ 'ಮುದ್ದು ಪಳನಿ' ಇಳಾ ಮತ್ತು ಕೃಷ್ಣರ ಪ್ರಣಯವನ್ನೆ ಕೃತಿಗೆ ವಸ್ತುವನ್ನಾಗಿ ಮಾಡಿಕೊಂಡು ಕೃತಿ ರಚನೆ ಮಾಡಿದ್ದಾಳೆ. ವೇಶ್ಯಾವೃತ್ತಿಯಲ್ಲಿದ್ದ ಕೃತಿಗಾರ್ತಿ ಲೈಂಗಿಕ ಅನುಭವಗಳನ್ನು ಮುಕ್ತವಾಗಿ ಪ್ರಕಟ ಮಾಡಿದಾಗ ಅದನ್ನು ಅಂದಿನ ಸಂದರ್ಭದಲ್ಲಿ ಅಶ್ಲೀಲವೆಂಬ ಹಣೆಪಟ್ಟಿಯೊಂದಿಗೆ ಸಾರಾಸಗಟಾಗಿ ತಿರಸ್ಕರಿಸಿದ್ದು ಇಂದು ಇತಿಹಾಸ, ತಮ್ಮ ಆತ್ಮಕಥಾನಕಗಳಲ್ಲಿ (ಲೇಖ-ಲೋಕದ ಭಾಗಗಳು) ಅನೇಕ ಲೇಖಕಿಯರು ತಾವು ತಮ್ಮ ಕೃತಿಗಳಿಗೆ ವಸ್ತುವನ್ನು ಆಯ್ದುಕೊಳ್ಳಬೇಕಾದ ಸಂದರ್ಭದಲ್ಲಿ ಇಂದೂ ಆತಂಕಕ್ಕೆ ಒಳಗಾಗುವ ಸಂದರ್ಭಗಳನ್ನು ಉದಾಹರಿಸುತ್ತಾರೆ. ಲೇಖಕಿ ಗೀತಾ ನಾಗಭೂಷಣ ತಾವು ಕೆಳಗೇರಿಯ ಜನರ ಬದುಕನ್ನು ಬರಹವಾಗಿಟ್ಟ ಸಂದರ್ಭದಲ್ಲಿ ಬಂದ ಪ್ರತಿಕ್ರಿಯೆಯನ್ನು ಲೇಖ-ಲೋಕದ ತಮ್ಮ ಆತ್ಮಕಥಾನಕದಲ್ಲಿ ಹೀಗೆ ಹೇಳಕೊಂಡಿದ್ದಾರೆ. "ಅಯ್ಯಯ್ಯಪ್ಪೋ......... ಒಬ್ಬ ಹೆಣ್ಣು ಮಗಳಾಗಿ ಈ ಗೀತಾ ಸೆಕ್ಸ್ ಬಗ್ಗೆ, ಹೆಣ್ಣಿನ ಲೈಂಗಿಕ ಶೋಷಣೆಯ ಬಗ್ಗೆ ಇಷ್ಟು ಕುಲ್ಲಮ್ ಖುಲ್ಲಾ ಆಗಿ ಬರೀತಾಳಲ್ಲ......... ಎಂಥ ಧೈರ್ಯ

ಅಕೀದು" ಎನ್ನುವ ಮೆಚ್ಚುಗೆಯ ಮಾತುಗಳು. ನಾಚಿಕೆಯಿಲ್ಲದವಳು ಅಂಥ ಹಣೆಪಟ್ಟಿ ಹಚ್ಚಿದ ಮಾತುಗಳು, "ಏನ ಅಶ್ಲೀಲ ಬರೀತಾಳ್ರೀ ಇಕಿ ಇಕಿಗಿ ಮನ್ಯಾಗ ಯಾರು ಹೇಳುವರು ಕೇಳುವರು ಇಲ್ಲಂತ ಕಾಣಸ್ತದ, ಇಕೀಗಿ ಹದ್ದುಬಸ್ತಿನಲ್ಲಿ ಇಟ್ಟಕೊಳ್ಳಲಾರ್ದ ಗಂಡನಾದ ಆ ನಾಗಭೂಷಣ ಎಂಥವನ್ರೀ? ಜೋರು ಕಾ ಗುಲಾಮ ಅದಾನ ಕಾಣಸ್ತದ ಹೆಂಗಸಾಗಿ ಹಿಂಗ್ ಬರಿಯೋದಾ ಥೂ......... ನಾಚಿಗ್ಗೇಡು"[೨೨] ಅನ್ನುವ ಮಾತುಗಳು ತಮ್ಮ ಬರವಣಿಗೆಗೆ ಎದುರಾಗಿದ್ದು; ಅವುಗಳಿಗೆ ತಾನು ಯಾವುದೇ ರೀತಿಯ ಪ್ರತಿಕ್ರಿಯೆಯನ್ನು ನೀಡಿದೆ ತಮ್ಮ ಬರಹವನ್ನು ಮುಂದುವರಿಸಿದ್ದನ್ನು ಗೀತಾ ಹೇಳುತ್ತಾರೆ. ನಮ್ಮ ಹಿರಿಯ ಲೇಖಕಿ ಅನುಪಮಾ ನಿರಂಜನ ತಮ್ಮ 'ಬರಹಗಾರ್ತಿಯ ಬದುಕು' ಆತ್ಮಕಥನದಲ್ಲಿ ವೃತ್ತಿಯಲ್ಲಿ ವೈದ್ಯರಾಗಿದ್ದರಿಂದ ಮತ್ತು ಅನೇಕ ರೋಗಿಗಳ ನಿಕಟ ಸಂಪರ್ಕದಿಂದ ಅವರ ಸಮಸ್ಯೆಗಳನ್ನು ಹತ್ತಿರದಿಂದ ಕಂಡಿದ್ದರು. ಆದರೂ ಲೈಂಗಿಕ ಸಂಗತಿಗಳನ್ನು ಕುರಿತು ಬರೆಯಲು ಪ್ರಾರಂಭದಲ್ಲಿದ್ದ ಮುಜುಗರವನ್ನು ಹೇಳುತ್ತಾರೆ. ಬರೆದ ಅನುಭವಗಳೆಲ್ಲಾ ವೈಯಕ್ತಿಕ ನೆಲೆಯವು ಎಂದು ಗ್ರಹಿಸುತ್ತಾರೆಂಬ ಆತಂಕ ಅನುಪಮಾ ಅವರಿಗೂ ಇತ್ತು. ಇದೇ ಮಾದರಿಯ ಆತಂಕಗಳು ಲೇಖ-ಲೋಕ ಸಂಪುಟಗಳಲ್ಲಿ ತಮ್ಮ ಅನುಭವಗಳನ್ನು ಕಟ್ಟಿಕೊಡುವ ಅನೇಕ ಲೇಖಕಿಯರದು ಆಗಿವೆ. ಪುರುಷ ಬರಹಗಾರರಿಗೆ ಇರದ ಈ ನಿರ್ಬಂಧ ಬರಹಗಾರ್ತಿಯರಿಗೆ ಮಾತ್ರ ಇದ್ದೇ ಇತ್ತು. ಮಹಿಳೆ ಏನೇ ಆದರೂ ಮೊದಲು 'ಹೆಣ್ಣು' ಆದ್ದರಿಂದ ಸಮಾಜದ ರೀತಿನೀತಿಗಳನ್ನು ಅನುಸರಿಸಬೇಕು ಎಂಬ ಧೋರಣೆ ಸಾಹಿತ್ಯ ಕ್ಷೇತ್ರದಲ್ಲಿ ಇದ್ದೇ ಇದೆ.

ಆಧುನಿಕತೆ ಮಹಿಳೆಯ ಆಳದಲ್ಲಿ ಒಂದಿಷ್ಟು ಪ್ರಶ್ನೆಗಳನ್ನು ಹುಟ್ಟಿಸಿತು. ತನ್ನ ಸುತ್ತಲ ಬವಣೆಗೆ ಪ್ರತಿಕ್ರಿಯಿಸುವಂತೆ ಮಾಡಿತು. ಇಂಥ ಪ್ರೇರಣೆಯಿಂದಲೇ 'ಉಷಾ: ಅವರು ತಮ್ಮ ಅನೇಕ ಪ್ರೇಮ ಕಥಾನಕಗಳಿಗಿಂತ ಭಿನ್ನವಾಗಿ ವಸ್ತುವನ್ನು ಆಯ್ದುಕೊಂಡು ಕಾದಂಬರಿಗಳನ್ನು ರಚಿಸುತ್ತಾರೆ. ಇಂಥ ವಸ್ತುಗಳನ್ನು ಆರಿಸಿಕೊಳ್ಳುವಾಗ ಆಯಾ ಕ್ಷೇತ್ರದಲ್ಲಿ ಮಹಿಳೆಯರು ಪಡುವ ಪಾಡುಗಳ ಕುರಿತಂತೆ ಆಳವಾದ ಅಧ್ಯಯನ ಮಾಡುತ್ತಿದ್ದುದಾಗಿ ಹೇಳಿಕೊಳ್ಳುತ್ತಾರೆ. ಉಷಾರವರನ್ನು ಹತ್ತಿರದಿಂದ ಕಂಡಿದ್ದ ಅವರ ಮಗಳು ಆರತಿ ವೆಂಕಟೇಶ್ ತಮ್ಮ ತಾಯಿಯ ಅಧ್ಯಯನಶೀಲತೆಯನ್ನು ಕುರಿತು ಹೀಗೆನ್ನುತ್ತಾರೆ. "ವೇಶ್ಯಾವಾಟಿಕೆಯ ಕುರಿತು 'ಹಗಲುಗನಸು ಮತ್ತು ಕ್ಯಾಬರೆ ನರ್ತಕಿಯ ಬದುಕಿನ ಕುರಿತಾದ 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಕಾದಂಬರಿಗಳಿಗೆ ವಿಷಯ ಸಂಗ್ರಹಕ್ಕಾಗಿ

ಮಾಡಿದ ಅಧ್ಯಯನ ಆಶ್ಚರ್ಯ ಉಂಟು ಮಾಡಿತ್ತು"[೨೩] ಎನ್ನುವ ಮಾತುಗಳು ಉಷಾರ ಅಧ್ಯಯನ ಪ್ರವೃತಿಯನ್ನು ಹೇಳುತ್ತದೆ.

'ಹಗಲುಗನಸು' ಕಾದಂಬರಿಯ ಮುನ್ನುಡಿಯಲ್ಲಿ ಉಷಾ ಅವರು ವೇಶ್ಯಾ ಸಮಸ್ಯೆಯನ್ನು ಕುರಿತಂತೆ ತಮ್ಮ ಆಲೋಚನೆಗಳನ್ನು ಹೇಳುತ್ತಾರೆ. "ಒಂದು ದೇಶದ ಶಾಸನಗಳು, ಅದರ ಸಮಾಜದ ಪ್ರತಿಬಿಂಬ. ಸಮಾಜದ ದೃಷ್ಟಿಯಿಂದ ಸ್ತ್ರೀ ಲೈಂಗಿಕ ಸಂಕೇತ ಅವಳನ್ನು ವ್ಯಾಪಾರದ ಸಗಟಿನಂತೆ ನೋಡಲಾಗುತ್ತಿದೆ. ನಮ್ಮ ಬಡ ಅಬಲೆಯರನ್ನು ಕಳ್ಳ ಸಾಗಾಣಿಕೆಯಲ್ಲಿ ಅರಬ್ಬೀ ದೇಶಗಳಿಗೆ ಕರೆದೊಯ್ಯುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯವೇ.

ಮೂಲತಃ ಸಮಾಜದಲ್ಲಿ ಸ್ತ್ರೀ ಬಗ್ಗೆ ಇರುವ ವಕ್ರದೃಷ್ಟಿಯನ್ನು ಬದಲಾಯಿಸಲು ಕಾನೂನುಗಳು ಶಕ್ತವಾದರೆ ಮಾತ್ರ ಅವು ಪರಿಣಾಮಕಾರಿಯಾಗಲು ಸಾಧ್ಯ. ಇದು ಎಂದಿಗೆ ಸಾಧ್ಯವೆನ್ನುವುದೊಂದು ಯಕ್ಷಪ್ರಶ್ನೆ!....... ಎನ್ನುತ್ತಾರೆ. ಉಷಾ"

ಹೀಗೆ ವೇಶ್ಯಾ ಸಮಸ್ಯೆ ಒಂದು ಸಮಸ್ಯೆಯೆಂದೂ, ಅದು ಪುರುಷನ ಲೋಲುಪತೆಯನ್ನು, ಮಹಿಳೆಯ ಶೋಷಣೆಯನ್ನು ಹೇಳುವ ಸಂಗತಿ ಎಂದು ಗ್ರಹಿಸುವ ಉಷಾ ಕಾದಂಬರಿಯಲ್ಲಿ ವೇಶ್ಯೆಯಾದ ಹೇಮಾಳ ಬದುಕಿನ ಬವಣೆಯನ್ನು ಹೇಳುತ್ತಾರೆ. ಹೇಗೆಲ್ಲಾ ಹೆಣ್ಣನ್ನು ವೇಶ್ಯೆ ಆಗಲು ತಯಾರು ಮಾಡುತ್ತಾರೆ. ಆ ಜಾಲ ಎಷ್ಟೆಲ್ಲಾ ಹಬ್ಬಿದೆ ಎನ್ನುವುದನ್ನು ನಿರೂಪಿಸುವುದಕ್ಕೆ ಹಲವಾರು ಪಾತ್ರಗಳನ್ನು ತರುತ್ತಾರೆ. ಅಲ್ಲಿಯ ಲೋಕದಲ್ಲಿ ಪ್ರತಿಭಟಿಸಿ ಸೋತು, ಈ ವೃತ್ತಿಗಿಳಿದವರನ್ನು, ಇನ್ನೇನು ಮಾಡಲಾಗದ ಅಸಹಾಯಕತೆಯಲ್ಲಿ ಆದಷ್ಟು ದುಡ್ಡು ಗಳಿಸುವ ಹೆಂಗಸರನ್ನು ಆ ವೃತ್ತಿಯೊಳಗಿದ್ದು ಸಹೃದಯಿಯಾದ ಗುಲಾಬಿಯಂಥ ಹೆಣ್ಣುಗಳನ್ನು ಚಿತ್ರಿಸುತ್ತಾರೆ. ಇಲ್ಲಿ ನಾಯಕಿ ಹೇಮಾ ಪ್ರೇಮಿಯಿಂದ ಮೋಸಗೊಂಡು ವೇಶ್ಯೆಯಾದ ಕತೆಯಿದು. ಕುಟುಂಬದ ಸುರಕ್ಷತೆಯ ಚೌಕಟ್ಟಿನಿಂದ ಹೊರಬಂದ ಹೇಮಾ ಇನ್ನಿಲ್ಲದಂತೆ ಅಸುರಕ್ಷಿತ ನೆಲೆಗೆ ಬಂದು ಸೇರುತ್ತಾಳೆ. ಅವಳ ದೇಹವನ್ನು ಘರವಾಲಿ, ಡಾಕ್ಟರ್, ಸೇಠ್‌ಜಿ, ......... ಎಲ್ಲರೂ ಬಳಸಿಕೊಳ್ಳುವವರೇ. ಅನಿಲ್ ಹಿಂದೆ ಪ್ರೀತಿಯ ಹೆಸರಿನಲ್ಲಿ ಓಡಿ ಬಂದ ಹೇಮಾ, ಕಾಫಿ ಎಸ್ಟೇಟಿನಲ್ಲಿ ಸೇರೆಗಾರನ ಮೋಸಕ್ಕೆ ಒಳಗಾದ ಪುಟ್ಟಿ, ಗಂಡ ರಸೂಲ್‌ನಿಂದ ದಂಧೆಗಿಳಿದ ಗುಲಾಬಿ........ ಹೀಗೆ ಹಲವಾರು ಹೆಣ್ಣುಗಳ ದಂಧೆಯ ಬದುಕು. ಭಾಷೆಯನ್ನು ಹಿಡಿದಿಡಲು ಕಾದಂಬರಿ ಪ್ರಯತ್ನಿಸುತ್ತದೆ. ವೇಶ್ಯಾಗೃಹಕ್ಕೆ ರೈಡ್ ಆಗಿ ಸಿಕ್ಕು ಬಿದ್ದವರಲ್ಲಿ ಹೇಮಾಳೂ ಒಬ್ಬಳು.

ಅವಳನ್ನು ಮೊದಲ ಬಾರಿಗೆ ಪೋಲಿಸ್ ಅಧಿಕಾರಿ ವಿನಾಯಕ ಜಾಧವ ಅವಳನ್ನು ನೋಡಿದಾಗ ಸೆರಗು ಹೊದ್ದು, ಒಳ್ಳೆಯ ಮನೆತನದ ಹೆಣ್ಣಿನಂತೆ ಅವಳು ಕಂಡಳು. ಅಲ್ಲಿಂದ ಅವಳನ್ನು ನರ್ಮದಾಬಾಯಿಯ ಮಹಿಳಾ ಸದನಕ್ಕೆ ಕಳಸುತ್ತಾರೆ......... ಮುಂದೆ ಜಾಧವರ ಪರಿಚಯ......... ಅವರ ಮನೆಗೆ ಹೋಗಿ ಬಂದು ಪ್ರೇಮ ಉಂಟಾಗುತ್ತದೆ. ಅಂತ್ಯದಲ್ಲಿ ಹೆಂಡತಿಯಿಂದ ಡೈವೋರ್ಸ್ ಸಿಕ್ಕ ನಂತರ ಜಾಧವ್, ಕುಶಾಲಪ್ಪನಿಂದ ಅತ್ಯಾಚಾರಕ್ಕೆ ಒಳಗಾಗಿ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟ ಹೇಮಾಳನ್ನು ತಡೆದು ಅವಳನ್ನು ಮದುವೆಯಾಗುವುದರೊಂದಿಗೆ ಕಥೆ ಮುಗಿಯುತ್ತದೆ.

ಕಾದಂಬರಿಯ ಕೊನೆಗೆ ನಾಯಕಿ ಹೇಮಾ 'ದೇವರೆ ಇದು ಹಗಲುಗನಸಾಗಿ ಉಳಿಯದಿರಲಿ......! ಅವರನ್ನು ಅಪ್ಪಿ ಹಿಡಿದು ಕನಸಲ್ಲವೆಂದು ಅರಿತೆ' ಎಂಬುದರೊಂದಿಗೆ ಮುಕ್ತಾಯವಾಗುತ್ತದೆ.

ವೇಶ್ಯಾ ಸಮಸ್ಯೆಗೆ ಪರ್ಯಾಯ ಪರಿಹಾರ ಎಂದರೆ ಮದುವೆ ಎಂಬ ಪುರುಷ ಚಿಂತನೆಯನ್ನೇ ಉಷಾ ಅವರು ಎತ್ತಿ ಹಿಡಿಯುತ್ತಾರೆ. ವೇಶ್ಯೆಯ ನರಕದ ಬಾಳಿಗಿಂತ ದಾಂಪತ್ಯದ ಬದುಕು ಮೇಲು ಎಂಬ ಮಾತು ಕಾದಂಬರಿಯಲ್ಲಿ ಅಲ್ಲಲ್ಲಿ ಬರುತ್ತವೆ. "ಗುಲಾಬಿ ಬಹಳ ಗಂಭೀರ. ಅವಳು ದಂಧೆಗಿಳಿದವಳೆಂದು ಯಾರು ಹೇಳುವ ಹಾಗಿರಲಿಲ್ಲ. ಗರತಿಯಂತೆ ಕಾಣಿಸುತ್ತಿದ್ದಳು........ ದುಂಡು ಮುಖ, ನೀಳವೆಗಳಿದ್ದ ಅಗಲವಾದ ಕಣ್ಣುಗಳು, ಮೊಂಡು ಮೂಗು, ಪುಟ್ಟಬಾಯಿ, ಭುಜದವರೆಗಿದ್ದ ಅಚ್ಚಗಪ್ಪು ಕೂದಲು, ಎಣ್ಣೆಗೆಂಪು ಮೈಬಣ್ಣ, ಕಟ್ಟುಮಸ್ತಾದ ಮೈಕಟ್ಟು, ದುಂಡು ದುಂಡಾದ ಕೈಕಾಲುಗಳು, ಮಕ್ಕಳನ್ನು ಎತ್ತಿ ಆಡಿಸುವ ಮಾತಾಮಯಿ ಮಮತೆಯ ಕೈಗಳಂತಿದ್ದವು" ಎಂದು ಗುಲಾಬಿಯ ವರ್ಣನೆ ಇದೆ. ಹೇಮಾಳ ಆಳದ ಭಾವನೆಗಳನ್ನು ಸ್ಪರ್ಶಿಸದೆ ಕಾದಂಬರಿ ಅವಳ –ಜಾಧವರ ಪ್ರಣಯವನ್ನು ನವಿರಾಗಿ ಹೇಳುತ್ತಾ ಹೋಗುತ್ತದೆ. ಕುಟುಂಬದೊಳಗೆ ಹೆಣ್ಣು ಸುರಕ್ಷಿತ ಎಂಬ ಭಾವನೆಯನ್ನು ಒತ್ತಿ ಹೇಳುತ್ತದೆ.

'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಕಾದಂಬರಿ....... ಯಂತೂ ಹೆಣ್ಣಿನ ಶೋಷಣೆಯನ್ನು ಪದರ ಪದರಾಗಿ ಹೇಳುತ್ತದೆ. ಅವಳು ಕುಟುಂಬ ವಲಯವನ್ನು ಬಿಟ್ಟು ಸೇವಾವಲಯದಾಚೆ (ಟೀಚರ್, ನರ್ಸ್, ಡಾಕ್ಟರ್, ಸಮಾಜಸೇವಕಿ) ತನ್ನನ್ನು ತೊಡಗಿಸಿಕೊಳ್ಳಬೇಕಾದ ಸಂದರ್ಭದಲ್ಲಿ ಎದುರಾಗುವ ಕತೆಯನ್ನು ಹೇಳುತ್ತದೆ.

'ಬೆಳ್ಳಿತೆರೆ' ಉಷಾರ ಮತ್ತೊಂದು ಕಾದಂಬರಿ. ಈ ಕಾದಂಬರಿಯ ವಸ್ತು ಕಲಾವಿದೆಯರ ಬದುಕಿನ ಹಿಂದಿರುವ ಶೋಷಣೆಯ ಮುಖವನ್ನು ಪರಿಚಯಿಸುವುದೇ ಆಗಿದೆ. ಮುನ್ನುಡಿಯ ಮಾತುಗಳಲ್ಲಿ ಉಷಾ ಹೀಗೆ ಬರೆಯುತ್ತಾರೆ. "ಬೆಳ್ಳಿ ತೆರೆಯ ಮೇಲೆ ಮೂಡಿ ಬರುವ ಚಿತ್ರ ಎಷ್ಟು ನೈಜ, ಎಷ್ಟು ಕಲಾತ್ಮಕ, ಎಷ್ಟು ರಂಜನೀಯ ಆದರೆ ಅದೇ ತೆರೆಯ ಮರೆಯ ಜೀವನದಲ್ಲಿನ ನೋವು ನಲಿವು, ಸಿಹಿ-ಕಹಿ ಅರಿಯುವುದಾದರೂ ಹೇಗೆ?........ ತೆರೆ ಸರಿಸಿ ನೋಡಿದರೆ ಕಾಣುವ ಪ್ರಪಂಚವೇ ಬೇರೆ. ಅವಳೂ ಎಲ್ಲರಂತೆ ನೋವು, ನಲಿವುಂಡು ಬದುಕಿನ ಮಹಾಪೂರದಲ್ಲಿ ಕೊಚ್ಚಿಹೋಗಬಹುದಾದ ಒಂದು ಹುಲ್ಲುಕಡ್ಡಿಯಂತೆ. ನೋವುಂಡು ನಲಿವು ನೀಡುವ ಪರಿಸರದವರ ಕೈಗೊಂಬೆ. ಚಿತ್ರ ನಟಿಯೋರ್ವಳ ಬದುಕನ್ನು ಪ್ರತಿಬಿಂಬಿಸುವ ಪ್ರಯತ್ನವಿದು"

'ಬೆಳ್ಳಿತೆರೆ' ಕಾದಂಬರಿಯಲ್ಲೂ ಹೆಣ್ಣನ್ನು ದೇಹವಾಗಿಯೇ ಚಿತ್ರಿಸಿರುವುದನ್ನು ಕಾಣಬಹುದು. ಪ್ರಸ್ತುತ ಕಾದಂಬರಿಯು ಚಲನಚಿತ್ರ ರಂಗದಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಹೆಣ್ಣಿನ ಚಿತ್ರಗಳನ್ನು ನೀಡಿದೆ. ಕೌಟುಂಬಿಕ ಚೌಕಟ್ಟಿನಾಚೆ ತನ್ನನ್ನು ಸ್ಥಾಪಿಸಿಕೊಳ್ಳಲು ಹೆಣ್ಣು ತೊಡಗಿದಾಗ ಅವಳು ಮೈಮೇಲೆ ಹಾಕಿಕೊಳ್ಳಬೇಕಾದ, ಎದುರಿಸಬೇಕಾದ ತಲ್ಲಣಗಳನ್ನು ಕಾದಂಬರಿ ಚಿತ್ರಿಸುತ್ತದೆ. ಹೆಣ್ಣಿನ ದೇಹ ಗಂಡು ಲೋಕದ ಸಂತೋಷಕ್ಕಾಗಿ ಇರುವುದು ಎಂಬ ಭಾವವನ್ನು ವಾಸ್ತವದಲ್ಲಿ ಕಂಡಂತೆ ಕಾದಂಬರಿಯಲ್ಲೂ ಕಾಣಬಹುದು. ಕಲಾವಿದೆ ಪುರುಷ ನಿರ್ಮಿತ ಚಿತ್ರರಂಗದಲ್ಲಿ ಮುಂದೆ ಬರಲು ಎಲ್ಲ ನಿರ್ಮಾಪಕರೊಂದಿಗೂ ಲೈಂಗಿಕ ಸಂಬಧವನ್ನು ಬೆಳೆಸಿಕೊಂಡಾಗ ಮಾತ್ರ ಸಾಧ್ಯ ಎಂಬುದನ್ನು ಹೇಳಿದೆ. ಈ ಸಂದರ್ಭದಲ್ಲಿ ಇತ್ತೀಚೆಗೆ ತೆರೆ-ಕಂಡ ಹಿಂದಿ ಚಲನಚಿತ್ರ 'ಫ್ಯಾಶನ್'ನ್ನು ಗಮನಿಸಬಹುದು. ಇದು ರೂಪದರ್ಶಿಯರ ಬದುಕಿನ ಬವಣೆಯನ್ನು ಹಿಡಿದಿಡುವ ಚಿತ್ರ. ಈ ಕಾದಂಬರಿಯ ನಾಯಕಿ ಪವಿತ್ರಾ ತನ್ನ ಲೋಕದ ತಲ್ಲಣವನ್ನು ಮರೆಯಲು ತನ್ನದೇ ಆದ ಕನಸುಗಳನ್ನು ವಸಂತಕುಮಾರನ (ಕಾದಂಬರಿಕಾರ) ಸಾಂಗತ್ಯದಲ್ಲಿ ಕಾಣುತ್ತಾಳೆ. ಈ ಲೋಕದಿಂದ ಬಿಡುಗಡೆಗೊಳ್ಳುವ ಪರ್ಯಾಯ ಮಾರ್ಗವೆಂದರೆ ವಿವಾಹ ಎಂದು ನಂಬಿರುತ್ತಾಳೆ.

ಕೊನೆಗೂ ಪವಿತ್ರಾ ಕುಟುಂಬದಲ್ಲಿ ನೆಲೆಯೂರುವ ತನ್ನ ಕನಸನ್ನು ನಿರ್ಮಾಪಕ ಧನಂಜಯರ ಮಗುವನ್ನು ಹೆರುವ ನಿರ್ಧಾರವನ್ನು ತೆಗೆದುಕೊಳ್ಳುವುದರ ಮೂಲಕ ಪೂರೈಸಿಕೊಳ್ಳುತ್ತಾಳೆ. ಮಗುವನ್ನು ಹೆತ್ತು, ಅದರ ಜವಾಬ್ದಾರಿಯನ್ನು ವಸಂತ ಮತ್ತು

ಸುಶೀಲಮ್ಮರಿಗೆ ಒಪ್ಪಿಸಿ, ತಾನು ಮತ್ತೆ ತೆರೆಯ ಮುಂದಿನ ಲೋಕಕ್ಕೆ ಬರುವ ನಿರ್ಧಾರಕ್ಕೆ ಬರುವುದರೊಂದಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

ಹೀಗೆ ತಮ್ಮ ಸಮಕಾಲೀನ ಲೇಖಕಿಯರಲ್ಲೇ ತುಂಬಾ ಬೋಲ್ಡಾಗಿ ಬರೆಯುವವರು ಎಂದು ಹೆಸರಾಗಿದ್ದರು ಉಷಾ. ಬಾಡಿಗೆ ತಾಯಿ, ವೇಶ್ಯೆ, ಕ್ಯಾಬರೆ ಡ್ಯಾನ್ಸರ್, ಚಿತ್ರನಟಿ......... ಹೀಗೆ ಅನೇಕ ಬಗೆಯಲ್ಲಿ ಶೋಷಣೆಗೆ ಒಳಗಾದ ಮಹಿಳೆಯರ ಸಮಸ್ಯೆಗಳನ್ನು ಕಥಾ ವಸ್ತುವನ್ನಾಗಿ ಆಯ್ಕೆಮಾಡಿಕೊಂಡು ಬರೆಯುತ್ತಿದ್ದರು ಉಷಾ. ಆದರೆ ಕಾದಂಬರಿಯಲ್ಲಿ ಬರುವ ಲೈಂಗಿಕ ವಿವರಗಳು, ಚಿತ್ರಿತವಾಗುವ ಹೆಣ್ಣಿನ ಸಮಸ್ಯೆಗಳಿಗೆ ನೀಡುವ ಪರಿಹಾರಗಳು ಮಹಿಳಾ ಪರವಾಗಿಯೇ ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ ಉತ್ತರ ಇಲ್ಲ ಎನ್ನುವುದಾಗುತ್ತದೆ. 'ಮದುವೆ' ಎಂಬುದು ಹೀಗೆ ದಿಕ್ಕು ತಪ್ಪಿದ ಹೆಣ್ಣುಗಳಿಗೆ ಸೌಖ್ಯದ ನೆಲೆಗಳಾಗುತ್ತವೆ ಎಂಬ ಪರಿಹಾರಗಳ ಕಡೆಗೆ ಲೇಖಕಿಯ ಒಲವಿದೆ. ವಸ್ತುವನ್ನು ಭಿನ್ನವಾಗಿ ಆಯ್ಕೆಮಾಡಿಕೊಂಡ ಕಾದಂಬರಿಗಳು ಅಂತ್ಯದಲ್ಲಿ ಪರಿಸ್ಥಿತಿಯೊಂದಿಗೆ ರಾಜಿಯಾಗಿಬಿಡುತ್ತವೆ ಯಾಕೆ ಎಂಬ ಸಂದೇಹಕ್ಕೆ ಉತ್ತರ ಕೂಡಾ ಮಹಿಳಾ ಬದುಕಿನ ಸಾಮಾಜಿಕತೆಯಲ್ಲಿದೆ. ಕೆಲವು ಬಾರಿ ಸಾಹಿತ್ಯದಲ್ಲಿ ಕಾಲ್ಪನಿಕವಾದರೂ ಸರಿ, ಆತ್ಮವಿಶ್ವಾಸ ಹೊಂದಿ ಪಾತ್ರವನ್ನು ಲೇಖಕಿಯರು ಸೃಷ್ಟಿಸಬೇಕಾಗುತ್ತದೆ. ಆದರೆ ಬರಹದಲ್ಲಿ ತೊಡಗಿಸಿಕೊಂಡ ಬರಹಗಾರ್ತಿ-ಯರಿಗೆ ದಕ್ಕಿದ ತರಬೇತಿ ಪಿತೃಪ್ರಧಾನ ನೆಲೆಯದಾಗಿರುವುದರಿಂದ ಸಹಜವಾಗಿ ಅಲ್ಲಿನ ಒಪ್ಪಿತ ಮೌಲ್ಯಗಳನ್ನು ತಮ್ಮ ಕೃತಿಗಳಲ್ಲೂ ತರುತ್ತಾರೆ. ಈ ಕಾರಣದಿಂದ ಈ ಪಾತ್ರಗಳು ನೈಜವಾಗಿ ಕಾಣುವ ಬದಲು ಕೇವಲ ವೈಚಾರಿಕ ನೆಲೆಯವು ಮಾತ್ರ ಆಗಿ ಉಳಿಯುತ್ತವೆ.

ಸಿ.ಎನ್. ಮುಕ್ತಾರವರು 'ಜನಪ್ರಿಯ ಲೇಖಕಿ ಎಚ್. ಜಿ. ರಾಧಾದೇವಿ ಒಂದು ನೆನಪು' ಎಂಬ ಲೇಖನದಲ್ಲಿ ತಾವು ತಮ್ಮ ಓದನ್ನು ಪ್ರಾರಂಭಿಸಿದಾಗ ಸರ್ಕ್ಯೂಲೇಟಿಂಗ್ ಲೈಬ್ರರಿಯಲ್ಲಿ ಸಿಕ್ಕ ಉಷಾ, ಸಾಯಿಸುತೆ, ಎಚ್.ಜಿ. ರಾಧಾದೇವಿಯವರ ಕಾದಂಬರಿಗಳನ್ನು ಓದುತ್ತಿದ್ದುದಾಗಿ ಹೇಳುತ್ತಾ ಅವರ ಕಾದಂಬರಿಗಳಲ್ಲಿ ತಾವು ಗುರುತಿಸುವ ಅಂಶಗಳನ್ನು ಹೀಗೆ ಹೇಳುತ್ತಾರೆ. "ಹೆಚ್ಚಿನ ಕಾಲೇಜು ವಿದ್ಯಾರ್ಥಿನಿಯರು ಓದಲು ಬಯಸುತ್ತಿದ್ದುದು ಉಷಾ ನವರತ್ನರಾಂ ಇವರ ಕಾದಂಬರಿಗಳನ್ನು. ಅವರು ಬಳಸುತ್ತಿದ್ದ ಆಂಗ್ಲ ಪದಗಳು, ಆರಿಸುತ್ತಿದ್ದ ಕಥಾವಸ್ತು, ನಾಯಕ-ನಾಯಿಕೆಯರ ನಡುವೆ ನಡೆಯುತ್ತಿದ್ದ ಪ್ರೇಮ ಸಂಭಾಷಣೆ, ಶ್ರೀಮಂತ ವರ್ಗದ ನಾಯಕಿಯರ ವರ್ಣನೆ – ಅವರ ಕಾದಂಬರಿಗಳ ಜನಪ್ರಿಯತೆಗೆ ಕಾರಣವಾಗಿದ್ದವು ಎನ್ನುವ ಮುಕ್ತಾ ಅವರು ಮುಂದುವರೆದು, ಸಾಯಿಸುತೆಯವರು ವಿಭಿನ್ನ

ಕಥಾವಸ್ತು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಮಧ್ಯಮ ವರ್ಗದ ಹೆಣ್ಣು ಮಕ್ಕಳು ಅವರ ಕಾದಂಬರಿಗಳ ನಾಯಕಿಯರಾಗಿರುತ್ತಿದ್ದರು. ಸಾಮಾನ್ಯವಾಗಿ ಮಹಿಳೆಯರು ಬಯಸುತ್ತಿದ್ದ ಕಥಾವಸ್ತು, ಮುಕ್ತಾಯ ಅವರ ಕಾದಂಬರಿಯಲ್ಲಿರುತ್ತಿತ್ತು ಎನ್ನುತ್ತಾ ಮುಂದುವರೆದು ರಾಧಾದೇವಿಯವರ ಕಾದಂಬರಿಗಳು ಓದುಗರನ್ನು ಆಕರ್ಷಿಸಲು ಅನೇಕ ಕಾರಣಗಳಿದ್ದವು. ಮೊದಲನೆಯದಾಗಿ ಕಥಾವಸ್ತು; ಕಥೆ ನಮ್ಮ ಅಕ್ಕ-ಪಕ್ಕದ ಮನೆಗಳಲ್ಲಿ ನಡೆಯುತ್ತದೆಯೇನೋ ಎಂಬಂತೆ ಭಾಸವಾಗುತ್ತಿತ್ತು. ಎರಡನೆಯದಾಗಿ ಅವರು ಮಾಡುತ್ತಿದ್ದ ನಾಯಕಿಯರ ವರ್ಣನೆ, ಅವರ ಉಡುಗೆ-ತೊಡುಗೆ, ಒಡವೆ-ವಸ್ತುಗಳ ವರ್ಣನೆ ಅತ್ಯಂತ ಆಕರ್ಷಕವಾಗಿರುತ್ತಿದ್ದವು. ಅವರ ಕಾದಂಬರಿಗಳನ್ನು ಓದಿದ ಮೇಲೆಯೇ ನನಗೆ 'ತಾರಿಬಾನ್' ಸೀರೆಯ ಪರಿಚಯವಾಗಿದ್ದು"[೨೪] ಎಂದು ಈ ಮೇಲಿನ ಮೂವರು ಕಾದಂಬರಿಕಾರರ ಕಾದಂಬರಿಗಳಲ್ಲಿರುವ ವಸ್ತುವನ್ನು ಕುರಿತಂತೆ ಹೇಳುವ ಸಿ.ಎನ್. ಮುಕ್ತಾ, ಮುಂದುವರೆದು ಎಚ್.ಜಿ. ರಾಧಾದೇವಿಯವರ ಕಾದಂಬರಿಗಳ ನಾಯಕಿಯರ ಮತ್ತು ಓದುಗರನ್ನು ಕುರಿತು ಹೇಳುವ ಮಾತುಗಳು ಮುಖ್ಯವೆನಿಸುತ್ತವೆ.

"ರಾಧಾದೇವಿಯ ಕಾದಂಬರಿಗಳ ನಾಯಕಿಯರೆಲ್ಲರೂ ಚಿಕ್ಕ ವಯಸ್ಸಿನ ಸೌಂದರ್ಯ ದೇವತೆಗಳಾಗಿರಲಿಲ್ಲ. ಅಂತಹ ನಾಯಕಿಯರ ಚಿತ್ರಣ ಕೆಲವು ಕಾದಂಬರಿಗಳಲ್ಲಿದ್ದರೂ ಬಹುತೇಕ ಕಾದಂಬರಿಗಳ ನಾಯಕಿಯರು ಹದಿ ವಯಸ್ಸು ಕಳೆದರೂ ಮದುವೆಯಾಗದ ಸಮಸ್ಯೆಯ ಸುಳಿಗೆ ಸಿಕ್ಕ ಸಾಮಾನ್ಯ ರೂಪದ ಹೆಂಗಸರಾಗಿರುತ್ತಿದ್ದರು. ಅವರು ಆ ಸಮಸ್ಯೆಗಳನ್ನು ಹೇಗೆ ಎದುರಿಸಿ ತಮ್ಮ ಬದುಕನ್ನು ರೂಪಿಸಿಕೊಂಡರು ಎನ್ನುವುದೇ ಕಥಾವಸ್ತು ಆಗಿರುತ್ತಿತ್ತು. ರಾಧಾದೇವಿಯವರ ಕಾದಂಬರಿಗಳಲ್ಲಿ ಶ್ರೀಮಂತಿಕೆಯ ವರ್ಣನೆ ಇರುವಂತೆ ಬಡತನದ ಬಣ್ಣನೆಯೂ ಇರುತ್ತಿತ್ತು." ಎಂದು ನಾಯಕಿಯರ ಲಕ್ಷಣಗಳನ್ನು ಕಟ್ಟಿಕೊಡುತ್ತಾ, ಮುಂದುವರೆದು ಮುಕ್ತಾ ಓದುಗರನ್ನು ಕುರಿತು ಹೇಳುತ್ತಾರೆ.

"ರಾಧಾದೇವಿಯವರ ಕಾದಂಬರಿಗಳು ಸಾಕಷ್ಟು ಮನರಂಜನೆ ಒದಗಿಸುತ್ತಿದ್ದವು. ಒಂದು ಸಣ್ಣ ಎಳೆ ಸಿಕ್ಕಿದರೆ ಸಾಕು ೨೦೦-೨೫೦ ಪುಟಗಳ ಕಾದಂಬರಿ ರಚಿಸುವ ಜಾಣ್ಮೆ ಅವರಿಗಿತ್ತು. ಅವರ ಕಾದಂಬರಿಗಳನ್ನು ಓದಿ ರಂಗುರಂಗಿನ ಕನಸು ಕಾಣುವ ಹುಡುಗಿಯರಿದ್ದರು. ರಾಧಾದೇವಿಯ ಶೇ ೮೦% ಭಾಗ ನಾಯಕಿಯರು ಶ್ರಮ ಜೀವಿಗಳು. ಚಿಕ್ಕಪೆಟ್ಟಿಗೆ ಅಂಗಡಿ, ಸೀರೆ ಅಂಗಡಿ, ಬಳೆ ಅಂಗಡಿ ಇಟ್ಟುಕೊಂಡು ಹಣ

ಸಂಪಾದಿಸುವವರಾಗಿರುತ್ತಿದ್ದರು. ಕೆಲವು ನಾಯಕಿಯರು ಎಮ್ಮೆ, ಹಸು ಕಟ್ಟಿಕೊಂಡು ಹಾಲು ಮಾರಿ ಜೀವನದಲ್ಲಿ ನೆಲೆ ನಿಲ್ಲಲು ಪ್ರಯತ್ನಪಡುವ ಚಿತ್ರಣವೂ ಇತ್ತು. ಅವರ ಕಾದಂಬರಿಗಳಲ್ಲಿ ಅನ್ಯಾಯದ ಮಾರ್ಗದಲ್ಲಿ ಹಣ ಸಂಪಾದಿಸುವುದು ತಪ್ಪು, ನ್ಯಾಯವಾದ ಮಾರ್ಗದಲ್ಲೇ ಹಣ ಸಂಪಾದನೆ ಮಾಡಬೇಕು ಎನ್ನುವ ಸಂದೇಶವನ್ನು ಕಾಣಬಹುದು. ಅವರ ಕಾದಂಬರಿಯ ನಾಯಕಿಯರು ಜಗಳಗಂಟಿಯರೂ, ಸ್ವಾಭಿಮಾನಿಗಳೂ, ನ್ಯಾಯಕ್ಕಾಗಿ ಹೊಡೆದಾಡುವವರೂ ಆಗಿರುತ್ತಿದ್ದರು. ಅವರ ಕಾದಂಬರಿಗಳಲ್ಲಿ ಚಿತ್ರಣವಾಗುತ್ತಿದ್ದ ಕುಟುಂಬಗಳು ಸ್ತ್ರೀ ಪ್ರಧಾನ ಕುಟುಂಬಗಳಾಗಿರುತ್ತಿದ್ದವು. ತಾಯಿಯೋ, ಅಕ್ಕನೋ ಮನೆಯ ಜವಾಬ್ದಾರಿ ಹೊತ್ತು ಸಮಸ್ಯೆಗಳನ್ನು ಎದುರಿಸಿ ಪರಿಹರಿಸುವುದು ಸರ್ವೇ ಸಾಮಾನ್ಯವಾಗಿರುತ್ತಿದ್ದವು".[೨೫] ಎನ್ನುವ ಮಾತುಗಳು ರಾಧಾದೇವಿಯವರ ವಸ್ತು ಮಧ್ಯಮವರ್ಗದ ಹೆಣ್ಣು ಮಕ್ಕಳನ್ನು ಕುರಿತೇ ಏಕೆ ಆಗಿತ್ತು ಮತ್ತು ಅವರ ಕಾದಂಬರಿಗಳು ಯಾಕೆ ಓದುಗರಿಗೆ ಇಷ್ಟ ಆಗುತ್ತಿದ್ದವು ಎರಡೂ ಅಂಶಗಳನ್ನು ಒಟ್ಟಿಗೆ ಹೇಳುತ್ತವೆ.

ರಾಧಾದೇವಿಯವರಲ್ಲಿ ದೈವದ ಅನುಗ್ರಹದಿಂದ ಬಂದ ಕಷ್ಟಗಳೆಲ್ಲಾ ಸುರಳತವಾಗಿ ಮಾಯವಾಗುತ್ತವೆ. ಎಂಬ ಧೃಡವಾದ ನಂಬಿಕೆ ಇದೆ. 'ಒಲಿದು ಬಂದ ಅಪ್ಸರೆ'ಯಲ್ಲಿ ರಾಜೇಶ್ – ಹರ್ಷರಿಗೆ ಚಾರುಲತಾ–ಚಂದ್ರಿಕಾರು ಒಲಿಯುವುದು ದೈವಾನುಗ್ರಹದಿಂದ. 'ವಿಜಯ ಧ್ವನಿ' ಕಾದಂಬರಿಯ ಸೀತಾ ಬದುಕಿನಲ್ಲಿ ಎಷ್ಟೇ ಕಷ್ಟಗಳಿದ್ದರೂ ಇತ್ಯಾತ್ಮಕ ಧೋರಣೆಗಳಿಂದ ಬದುಕನ್ನು ನಡೆಸಿ ಬೇರೆಯವರಿಗೂ ದಾರಿ ತೋರಿಸಿದಳು, ಇದಕ್ಕೆ ಭಗವಂತನ ಬೆಂಬಲವಿದೆ ಎಂದು ನಂಬಿದವಳು. 'ಸ್ವಪ್ನ ಸಂದೇಶ' ಕಾದಂಬರಿಯಲ್ಲಿ ಬಡ ರಾಮಾಚಾರ್ಯರಿಗೆ ಜೀವನದಲ್ಲಿ ಅನೇಕ ಕಷ್ಟಗಳು ಎದುರಾಗುತ್ತವೆ. ಚಿಕ್ಕ ತಿರುಪತಿಯಲ್ಲಿ ಪೂಜೆ ಮಾಡಿದರೆ ಕಷ್ಟಗಳು ಪರಿಹಾರವಾಗುತ್ತದೆ ಎಂಬ ಸ್ವಪ್ನ ಬೀಳುತ್ತದೆ. ಅಲ್ಲಿ ಹೋಗಿ ಪೂಜೆ ಕೈಗೊಂಡಾಗ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ. 'ಸುವರ್ಣ ಸಂಪಿಗೆ' ಕಾದಂಬರಿಯಲ್ಲಿ ನಾಯಕಿಯ ಬದುಕಿನಲ್ಲಿ ಬಂದ ಸಮಸ್ಯೆಗಳು ತಾಯಿ ಮುಡಿಪು ಕಟ್ಟಿಟ್ಟ ಸುವರ್ಣ ಸಂಪಿಗೆಯ......... ಹರಕೆಯಿಂದ ಸುಖದ ಅಂತ್ಯವನ್ನು ಕಂಡುಕೊಂಡಿದ್ದನ್ನು ಲೇಖಕಿ ಚಿತ್ರಿಸುತ್ತಾರೆ. ಮಕ್ಕಳಿಲ್ಲದಾಗ, ಮಗಳಿಗೆ ಟೈಪಾಯಿಡ್ ಜ್ವರ ಬಂದಾಗ, ಮುಸೆಕಟ್ಟಿಸುವಾಗ ಮತ್ತು ಮಗಳಿಗೆ ಸರಿಯಾದ ಗಂಡು ಸಿಗದಿದ್ದಾಗಲೆಲ್ಲಾ ಹೇಮಾಳ ತಾಯಿ ಲಲಿತಮ್ಮ ಸುವರ್ಣ ಸಂಪಿಗೆಯನ್ನು ದೇವರಿಗೆ ಮೀಸಲು ಕಟ್ಟಿಡುತ್ತಿದ್ದರು. ಅಂತ್ಯದಲ್ಲಿ ಎಲ್ಲ ಸಮಸ್ಯೆಗಳು ಪರಿಹಾರವಾಗುತ್ತಿದ್ದವು. ಕೊನೆಗೆ ಸಂತೋಷದ' ಜೊತೆ

ಮದುವೆ ರದ್ದಾಗಿ, ಡಾ. ಜಯಂತ ಜೊತೆ ಮದುವೆ ನಿಶ್ಚಯವಾಗುತ್ತದೆ. 'ಸುಖದ ಹೊಂಗಿರಣ' ಕಾದಂಬರಿಯಲ್ಲಿ ಮೂರು ಜನ ಹೆಣ್ಣು ಮಕ್ಕಳ ತಂದೆಯಾದ ಆನಂದ ತೀರ್ಥಾಚಾರ್ಯರು ದೇವರಿಗೆ ಅಲಂಕಾರ ಮಾಡುವ ಕಾಯಕವನ್ನು ಹೊಂದಿರುತ್ತಾರೆ. ದೇವರ ಕೃಪೆಯಿಂದ ಮೂರು ಮಕ್ಕಳ ಮದುವೆ ನಿಶ್ಚಯವಾಗುತ್ತದೆ. ಆಗ ಆನಂದ ತೀರ್ಥಾಚಾರ್ಯರು ಆನಂದಾಶ್ರು ಸುರಿಸುತ್ತ "ಹದಿನೈದು ದಿನಗಳಲ್ಲಿ ಎಂಥಾ ಪವಾಡ, ಅಲ್ಲಿ ನಾನು ಹತ್ತು ದಿನಗಳುದ್ದ ಸರಣಿ ಕಲ್ಯಾಣ ಸೇವೆ ನಡೆಸಿದೆ. ಶ್ರೀನಿವಾಸ ನೀನೇನೋ ಹತ್ತು ಭಾರಿ ಶ್ರೀ ಲಕ್ಷ್ಮಿ, ಪದ್ಮೆಯರನ್ನೇ ಮತ್ತೆ ಮತ್ತೆ ವಿವಾಹವಾದೆ. ಮಾನವರೂಪಿ ವರನಾಗಿ ನನ್ನ ಹೆಣ್ಣು ಮಕ್ಕಳನ್ನು ವಿವಾಹವಾಗಲು ಬಾರಪ್ಪಾ ಎಂದರೆ ಇಲ್ಲಿ ಇಂಥ ಘಟನೆಗಳು ನಡೆದಿವೆ. ಒಬ್ಬ ಮಗಳಿಗೆ ಬ್ಯಾಂಕ್ ಮ್ಯಾನೇಜರ್, ಒಬ್ಬ ಮಗಳಿಗೆ ಇಂಜನಿಯರ್ ವರ ಸಿಕ್ಕಿದೆ. ಮೂರು ಜನ ವರಗಳ ಹೆಸರು ಶ್ರೀನಿವಾಸ ಎಂದೇ ಇದೆ. ಎಲ್ಲರೂ ಸರಳವಾದ ವಿವಾಹಕ್ಕೂ ಒಪ್ಪಿದ್ದಾರೆ. ಲಕ್ಷ, ಲಕ್ಷ ವರದಕ್ಷಿಣೆ ಕೇಳುವ ಕಾಲದಲ್ಲಿಯೂ ಇಂಥಾ ಸರಳ ಸಹೃದಯಶಾಲಿ ವರಗಳು ಸಿಗಬೇಕೆ? ನಿಜವಾಗಿಯೂ ಶ್ರೀನಿವಾಸ ಪವಾಡವನ್ನೆ ಮಾಡಿದ್ದಾನೆ" ಎಂದರು. ಹೀಗೆಯೇ 'ಬಣ್ಣ ಬಣ್ಣದ ಬೆಳಕು' ಕಾದಂಬರಿಯಲ್ಲಿ ವಾಸಂತಿ, ಜಯಂತಿ, ಆರತಿ, ಭಾರತಿ ಇವರುಗಳ ಮದುವೆ ಶ್ರೀ ವೆಂಕಟೇಶ್ವರನ ಕೃಪೆಯಿಂದ ಆಗುತ್ತದೆ. ಹೀಗೆ ರಾಧಾದೇವಿಯವರ ಸುಮಾರು ಕಾದಂಬರಿಗಳು ಸಂಸ್ಕೃತಿ, ಮೌಲ್ಯ, ನೈತಿಕತೆಗಳು ಮನುಷ್ಯನನ್ನು ಕಾಯುತ್ತವೆ ಎಂದು ನಂಬಿ, ತಮ್ಮ ಕಾದಂಬರಿಗಳಲ್ಲೂ ಅದನ್ನೇ ಪ್ರತಿಪಾದಿಸಿದ್ದಾರೆ.

ಆರತಿ ವೆಂಕಟೇಶ್ ಕಾದಂಬರಿ 'ಅಗೋಚರ'ದ ಮುನ್ನುಡಿಯ ಮಾತುಗಳಲ್ಲಿ ತಾವು ಕೇಳಿ, ಕಂಡ ವಿಷಯದ ಸುತ್ತ ಕತೆಯನ್ನು ಹೆಣೆದಿರುವುದಾಗಿ ಹೇಳಿಕೊಳ್ಳುತ್ತಾರೆ. "ಸೀತೆ, ದ್ರೌಪದಿ, ಶಕುಂತಲೆ ಮುಂತಾದವರು ಶೋಷಣೆಗೆ ಒಳಗಾಗಿದ್ದಾರೆ. ಆದರೆ ಈಗಿನ ಸಮಾಜ ವ್ಯವಸ್ಥೆಯಲ್ಲಿ ಕೆಲವೊಮ್ಮೆ ಗಂಡು ಅಪವಾದ, ನಿಂದನೆಗಳಿಗೆ ಗುರಿಯಾಗುವ ಸಂದರ್ಭಗಳು ಎದುರಾಗುತ್ತವೆ. ಇದರಲ್ಲಿ ಬರುವ ಡಾ. ರೋಹಿತ್ ಅಂಥ ಒಂದು ಪಾತ್ರ" ಎಂದು ತಮ್ಮ ಕಾದಂಬರಿಯ ಬಗ್ಗೆ ಹೇಳಿಕೊಳ್ಳುತ್ತಾರೆ.

ಅಗೋಚರ ಕಾದಂಬರಿಯಲ್ಲಿ ಡಾ. ರೋಹಿತ್ ಮದನಿಕಾ ಪ್ರೇಮವಿವಾಹವಾದ ಜೋಡಿ. ತನ್ನ ಗಂಡನನ್ನು ಅತಿಯಾಗಿ ಸಂಶಯಿಸಿ, ಉನ್ಮಾದದಲ್ಲಿ ತನ್ನ ಮಗು ಕಿನ್ನರಿಯನ್ನೇ ಸಾಯುವ ಸ್ಥಿತಿಗೆ ತಂದು ತಾನು ಆತ್ಮಹತ್ಯೆ ಮಾಡಿಕೊಂಡ ಸಂದರ್ಭವನ್ನು

ಕಾಣುತ್ತೇವೆ. ಇದರಿಂದ ಎಲ್ಲರ ಸಂಶಯ ರೋಹಿತ್‌ನ ಮೇಲೆ ತಿರುಗುತ್ತದೆ. ಬಾಲ್ಯದ ಗೆಳತಿ ಡಾ. ಋತು ಬಳ್ಳಾರಿಯಿಂದ ಬಂದು ನಿಜವನ್ನು ರೋಹಿತ್ ಡೈರಿಯಿಂದ ತಿಳಿದು ಎಲ್ಲರಿಗೂ ಹೇಳಿದಾಗ ಸಂಶಯ ಪರಿಹಾರವಾಗುತ್ತದೆ. ಋತು-ರೋಹಿತ್‌ರು ಒಂದಾಗುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಈ ಕಾದಂಬರಿ ಕೂಡಾ ಬಾಲ್ಯದಿಂದಲೂ ರೋಹಿತ್‌ನನ್ನೇ ಪ್ರೀತಿಸುತ್ತಿದ್ದ ಋತು, ಅವನನ್ನು ಮತ್ತೆ ಸೇರುವ ಸಂದರ್ಭವನ್ನು ಕೆಳಗಿನ ಮಾತುಗಳಿಂದ ಕಟ್ಟಿಕೊಡುತ್ತದೆ. ಕಾದಂಬರಿಯಲ್ಲಿ ಪ್ರಾರಂಭದಿಂದಲೂ ಋತು ಜೋಲಿ ಹೋಗಿ ಎಡವಿದಾಗಲೆಲ್ಲಾ ಆಸರೆಯನ್ನು ರೋಹಿತ್ ನೀಡುತ್ತಿದ್ದ. ಕಾದಂಬರಿಯ ಕೊನೆಯಲ್ಲೂ "ಋತು ಮುಂದೆ ನಡೆದಾಗ ರೋಹಿತ್ ತನ್ನ ಪ್ಯಾಂಟ್‌ನ ಜೇಬಿನಲ್ಲಿ ಕೈತೂರಿಸಿ ಅವಳೊಡನೆ ಹೆಜ್ಜೆ ಹಾಕಿದ. ಅವನ ಸಾನಿಧ್ಯದಿಂದ ಅವಳ ಮನಸ್ಸು ಗಲಿಬಿಲಿಗೊಂಡಿತು. ಮೆಟ್ಟಲುಗಳನ್ನು ಇಳಿಯುವಾಗ ಅವಳಿಗೆ ಆಯತಪ್ಪಿ ಬೀಳುವಂತಾಗಿ ಜೋಲಿ ಹೊಡೆದಾಗ ತಟ್ಟನೆ ಅವನ ತೋಳುಗಳು ಅವಳಿಗೆ ರಕ್ಷಣೆ ನೀಡಿದವು. ಅವನು ನಗುತ್ತ ಕೇಳಿದ. "ಈ ಭಾದ್ಯತೆ ಸದಾ ಈ ಬಿಗ್ ಬ್ಯಾಡ್ ಉಲ್ಫ್‌ಗೆ ಮೀಸಲಾಗಿ ಇಟ್ಟಿರ್ತೀಯಾ?" ಈ ಮಾತಿನೊಂದಿಗೆ ಕಾದಂಬರಿ ಸುಖಾಂತವಾಗಿ ಮುಕ್ತಾಯಗೊಳ್ಳುತ್ತದೆ. ಆರತಿ, ತಮ್ಮ 'ಕರುಣಾಳು ಬಾ ಬೆಳಕೇ' ಮತ್ತು 'ಸಹನಾ' ಕಾದಂಬರಿಗಳ ಮುನ್ನುಡಿಯಲ್ಲಿ "ಮಾತೃದೇವೋಭವ ಎಂದು ನಮ್ಮ ಹಿಂದೂ ಸಂಸ್ಕೃತಿ ತಾಯಿಯನ್ನು ಪೂಜ್ಯ ಸ್ಥಾನದಲ್ಲಿಡುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ತಂದೆ-ತಾಯಿಯರು ಸುಖಭೋಗದ ಜೀವನ ನೀಡುವ ಯಂತ್ರಗಳು ಎಂದು ಕೆಲವು ಮಕ್ಕಳು ಭಾವಿಸಿದ್ದಾರೆ" ಎಂದು ಹೇಳುತ್ತಾ ಆ ಕುರಿತು ತಾವು 'ಸಹನಾ' ಕಾದಂಬರಿಯನ್ನು ಚಿತ್ರಿಸಿರುವುದಾಗಿ ಹೇಳುತ್ತಾರೆ. ಸಹನಾ-ನಂದಕುಮಾರಳ ಒಬ್ಬಳೇ ಮಗಳು ಅಲಂಕೃತ. ತಂದೆ-ತಾಯಿಯರ ಪ್ರೀತಿಯನ್ನು ದುರುಪಯೋಗ ಪಡಿಸಿಕೊಳ್ಳುವ ಅವಳು ಅವರ ಪ್ರೀತಿಯನ್ನು ಅರ್ಥಮಾಡಿಕೊಳ್ಳಲಿಲ್ಲ. ಮುಂದೆ ಕಾದಂಬರಿಯಲ್ಲಿ ನಂದಗೋಪಾಲ ಸಾಯುತ್ತಾರೆ. ಸಹನಾ ತನ್ನ ಹೆಸರಿಗೆ ಮಾಡಿದ್ದ ಆಸ್ತಿಯನ್ನು ಮಗಳ ಹೆಸರಿಗೆ ಬರೆದು ಬುದ್ಧಿಮಾಂಧ್ಯ ಮಕ್ಕಳ ಶಾಲೆಗೆ ಹೋಗುವ ನಿರ್ಧಾರ ತೆಗೆದುಕೊಳ್ಳುವುದರೊಂದಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

'ಕರುಣಾಳು ಬಾ ಬೆಳಕೇ' ಕಾದಂಬರಿ ಒಂದು ಪ್ರೇಮ ವಿವಾಹ ಕುಟುಂಬದ ವ್ಯಕ್ತಿಗಳನ್ನು ದೂರ ಮಾಡುವುದರೊಂದಿಗೆ ಶುರುವಾಗಿ, ಮತ್ತೆ ಇನ್ನೊಂದು ಪ್ರೇಮ

ವಿವಾಹದ ಮೂಲಕವೇ ಅದೇ ಕುಟುಂಬ ಒಂದಾಗುವುದನ್ನು ಚಿತ್ರಿಸುತ್ತದೆ. ನಿರ್ಮಲ ಪ್ರಶಾಂತರ ಪ್ರೇಮ ರಾವ್ ಸಾಹೇಬ ಗೋಪಾಲರಾಯರ ಕುಟುಂಬದಲ್ಲಿ ಬಿರುಕು ತಂದಿತು. ಮುಂದೆ ನಿರ್ಮಲಳ ಅಣ್ಣ ನಟೇಶನ ಮಗ ರಜಿತನಿಗೆ ತನ್ನ ಆಫೀಸಿನಲ್ಲಿ ಕೆಲಸಕ್ಕೆ ಬಂದ ದೀಪಳ ಬಗ್ಗೆ ಅನುರಾಗ ಮೂಡುತ್ತದೆ. ಅತ್ತೆಯ ಮಗಳು ರಂಜನಿಯೊಂದಿಗೆ ನಡೆಯಲಿದ್ದ ಮದುವೆಯನ್ನು ತಪ್ಪಿಸಿಕೊಳ್ಳಲು, ತನ್ನ ತಾಯಿಯ ಆಪರೇಷನ್‌ಗೆ ೫೦ ಸಾವಿರ ರೂಪಾಯಿಗಳ ಅಗತ್ಯವಿದ್ದ ದೀಪಳನ್ನು ಪ್ರಿಯತಮೆಯಾಗಿ ನಟಿಸಲು ಕೇಳಿಕೊಳ್ಳುತ್ತಾನೆ. ಮುಂದೆ ಅವಳೇ ತನ್ನ ಅತ್ತೆ ನಿರ್ಮಲಳ ಮಗಳೆಂದು ತಿಳಿಯುತ್ತದೆ. ದೀಪಳು ತನ್ನ ತಾಯಿಗೆ ರಜಿತ್ ಟ್ರೀಟ್‌ಮೆಂಟ್ ಕೊಡಿಸಿದಾಗ ಅವನಿಗೆ ಧನ್ಯವಾದಗಳನ್ನು ಹೇಳಲು ಪ್ರಯತ್ನಿಸಿದ ಸಂದರ್ಭದಲ್ಲಿ ಅವಳ ಕಣ್ಣುಗಳು ತುಂಬಿ ಬಂದಾಗ "ಅವಳನ್ನು ಬರಸೆಳೆದು ಅಪ್ಪಿ ಕಳೆಗುಂದಿದ್ದ ಕಣ್ಣುಗಳಿಗೆ ಮುತ್ತಿಟ್ಟು ಭರವಸೆ ನೀಡಬೇಕು ಎಂದು ಹಂಬಲಿಸುತ್ತಿದ್ದ ಮನಸ್ಸನ್ನು ಪ್ರಯತ್ನಪೂರ್ವಕವಾಗಿ ನಿಯಂತ್ರಿಸಿಕೊಂಡ ಎನ್ನುವ ಮಾತುಗಳಲ್ಲಿ ರಜಿತ ದೀಪ ಸಂಬಂಧ ಮರ-ಬಳ್ಳಿಯ ಸಂಬಂಧವನ್ನೇ ನೆನಪಿಸುತ್ತದೆ.

'ಕಾರ್ಮುಗಿಲ ತಾರೆ' ಮತ್ತು 'ಸಮಾನಾಂತರ ರೇಖೆ'ಗಳು ಮುನ್ನುಡಿಯಲ್ಲಿ ಆರತಿ ಕಾದಂಬರಿಗಳನ್ನು ಕುರಿತಂತೆ ಕೆಲವು ಮಾತುಗಳನ್ನಾಡುತ್ತಾರೆ. "ವಿದ್ಯಾಭ್ಯಾಸವೆನ್ನುವುದು ಮಕ್ಕಳಿಗೆ ಜ್ಞಾನಾರ್ಜನೆ ಆಗುವುದಕ್ಕಿಂತ ಮನಸ್ಸಿನ ಮೇಲೆ ಒತ್ತಡ ಬಿರುವಂತ ವ್ಯಾಪಾರದ ಕ್ರಮವಾಗಿ ಬಿಟ್ಟಿದೆ ಎಂಬುದು ಇತ್ತೀಚಿನ ದಿನಗಳಲ್ಲಿ ಕಂಡು ಬರುತ್ತಿರುವ ಒಂದು ಮುಖ್ಯ ಸಂಗತಿ. ಮಹತ್ಸಾಧನೆಯ ಗುರಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡ ಅನೇಕ ಪೋಷಕರು, ಮಕ್ಕಳನ್ನು ಮಾರ್ಕ್ಸ್ ತೆಗೆಯುವ 'ಮೆಶಿನ್'ಗಳನ್ನಾಗಿ ಬೆಳೆಸುತ್ತಿರುವುದು ಎಂಥ ವಿಪರ್ಯಾಸ! ಮಕ್ಕಳು ಸಾಧನೆಯತ್ತ ಸಾಗಬೇಕಾದರೆ ಅವರು ಆಸೆ ಹಾಗೂ ಧ್ಯೇಯಗಳ ಮಾರ್ಗದಲ್ಲಿ ಅವರನ್ನು ಹುರುದುಂಬಿಸಿದರೆ ಆ ಎಳೆಯ ಜೀವಿಗಳು, ಮುಂದೆ ದೇಶದ ಸತ್ಪ್ರಜೆ ಆಗುವುದರಲ್ಲಿ ಯಾವ ಸಂದೇಹವೂ ಇಲ್ಲ" ಎನ್ನುತ್ತಾರೆ. ತಾಯಿಯ ಒತ್ತಾಯದಿಂದ ಶಾಲೆಯನ್ನೇ ದ್ವೇಷಿಸುತ್ತಾ ಊರು ಬಿಟ್ಟು ಓಡಿ ಬಂದು ಇನ್ನೊಂದು ಕುಟುಂಬದ ಭಾಗವಾಗಿ ಬದುಕುತ್ತಿದ್ದ ಹುಡುಗಿಯ ಕತೆಯನ್ನು ವಸ್ತುವನ್ನಾಗಿ ಉಳ್ಳ ಕಥಾನಕವಿದು. ಕೊನೆಯಲ್ಲಿ ತಪ್ಪು ತಪ್ಪನ್ನೊಪ್ಪಿಕೊಂಡ ತಂದೆ-ತಾಯಿಯರು ಮಗಳನ್ನು ತಮ್ಮ ಕೃತ್ಯಕ್ಕಾಗಿ ಕ್ಷಮೆಕೇಳುತ್ತಾರೆ. ನಂತರ ಒಂದಾಗುವ ಕುಟುಂಬವನ್ನು ಈ ಕಾದಂಬರಿಯಲ್ಲಿ ಆರತಿ ಚಿತ್ರಿಸುತ್ತಾರೆ.

ಇನ್ನೊಂದು ಕಾದಂಬರಿ 'ಸಮಾನಾಂತರ ರೇಖೆ'ಗಳು ಕಾದಂಬರಿಯ ಕುರಿತು ಲೇಖಕಿಯ ಮಾತುಗಳವು. "ದಾಂಪತ್ಯ ಜೀವನದಲ್ಲಿ ಗಂಡು, ಹೆಣ್ಣು ಎರಡು ರೇಖೆಗಳಾಗಿದ್ದರೂ ಒಂದು ಹಂತದಲ್ಲಿ ಆ ರೇಖೆಗಳೆರಡು ಸೇರಿದರೆ ಅದು ಅನುರೂಪ ದಾಂಪತ್ಯವಾಗುತ್ತದೆ. ರೈಲಿನ ಹಳಿಗಳಂತೆ ಸಮಾನಾಂತರದಲ್ಲಿ ಚಲಿಸುವ ರೇಖೆಗಳು ಎಂದಿಗೂ ಒಂದಾಗುವುದಿಲ್ಲ. ಈ ಕಾದಂಬರಿಯಲ್ಲಿ ಅನುಪಮಳ ದಾಂಪತ್ಯ ಜೀವನವೂ ಹಾಗೆ. ಕೆಲವು ಸಾರಿ ಅತಿಯಾದ ಪ್ರೀತಿಯೇ ಅವನತಿಗೆ ಕಾರಣ ಆಗುತ್ತದೆ. ಅದು ಹೆತ್ತವರ ಪ್ರೀತಿಯೂ ಆಗಬಹುದು. ಪ್ರೀತಿಯೆನ್ನುವುದು ಸಂಕೋಲೆಯಾದರೆ ಅದರಿಂದ ಬರುವ ಸಮಸ್ಯೆಗಳು ಮಕ್ಕಳ ಭವಿಷ್ಯಕ್ಕೆ ತೊಂದರೆ ಉಂಟಾಗಬಹುದು" ಎನ್ನುತ್ತಾರೆ ಆರತಿ ಅವರು. ತಂದೆಯ ಅತಿ ಮುಚ್ಚಟೆಯಿಂದ ತನ್ನ ಗಂಡನೊಂದಿಗೆ ಬಾಳಲಾರದೆ ಒಂಟಿಯಾಗಿ ಬದುಕುವ ನಾಯಕಿ ಅನುಪಮಾಳ ಕತೆಯಿದು. ಮಧ್ಯಮವರ್ಗದ ಚೆಲುವನನ್ನು ಪ್ರೀತಿಸಿ ಮದುವೆಯಾದರೂ ಅವನೊಂದಿಗೆ ಬದುಕಲಾರದೆ ಮನೆ ಬಿಟ್ಟು ಬರುತ್ತಾಳೆ. ತಾಯಿಯ ಸಾವಿನ ನಂತರ ಹೆಚ್ಚಿನ ಓದನ್ನು ಓದಿ ಲಾಯರ್ ಆಗುತ್ತಾಳೆ. ಆ ಸಂದರ್ಭದಲ್ಲಿ ಶೋಭಾ-ಅನುಪಮಾರ ಸಂಭಾಷಣೆಗಳು ಹೀಗಿವೆ. ಶೋಭಾ-ಅನುಪಮಾಗೆ ಹೇಳುವ ಮಾತುಗಳು "ಹೆಣ್ಣಿಗೆ ಗಂಡನಾದವನು ಸರಿಯಾಗಿರ್ಬೇಕೇ ಅನೂ! ಒಳ್ಳೆ ಗಂಡ ಸಿಕ್ಕರೆ ನಾವು ಜೀವನದ ಅರ್ಧ ಬ್ಯಾಟಲ್ ಗೆದ್ದ ಹಾಗೆ. ನಂಗೆ ಹಣ ಇದೆ, ಬಂಗಲೆ ಇದೆ, ಕಾರಿದೆ. ಆದ್ರೆ ಅವುಗಳಿಂದ ಸುಖಪಡಕ್ಕೆ ನನ್ನ ಗಂಡನೇ ನನ್ನ ಪಾಲಿಗಿಲ್ಲ ನೋಡು!" ಈ ಮಾತುಗಳು ಮುಂದೆ ಅನುಪಮಾಳ ಬದುಕಿನವೂ ಆಗುತ್ತವೆ ಎಂಬುದನ್ನು ಕಾದಂಬರಿಕಾರ್ತಿ ಹೇಳುತ್ತಾರೆ. ತನ್ನ ಹಟದಿಂದ, ಗಂಡನಿಂದ ದೂರಾಗಿ ಪ್ರಖ್ಯಾತ ಲಾಯರ್ ಆಗಿಯೂ ಆಕೆ ಒಂಟಿ ಬಾಳನ್ನು ಬಾಳುವ ದುರಂತವನ್ನು ಅನುಭವಿಸಬೇಕಾಯಿತು.

ಇಂದಿಗೂ ಕೂಡಾ ಹೆಣ್ಣು ವೈಯಕ್ತಿಕವಾಗಿ ತೆಗೆದುಕೊಳ್ಳುವ ನಿರ್ಧಾರಗಳಿಗೆ ಅವಳೇ ಹೊಣೆಗಾರಳಾಗಿ ಕೀಳರಿಮೆ ಅನುಭವಿಸುವಂತೆ ಮಾಡುತ್ತದೆ ಅವಳಿರುವ ಸಾಮಾಜಿಕ ವಾತಾವರಣ. ಅನುಪಮಾಳ ಗಂಡ ಮರುಮದುವೆಯಾಗಿ ಸುಖಿ ದಾಂಪತ್ಯವನ್ನು ಅನುಭವಿಸುತ್ತಿದ್ದ ಅನುಪಮಾಳನ್ನು ಕುರಿತು ಅವನಿಗೆ ಮರುಕವಿದ್ದರೂ ಆತ ಏನೂ ಮಾಡಲಾರ. ಹೆಣ್ಣಿಗೆ ಉಳಿದ ದಾರಿ 'ಮಾಡಿದ್ದುಣ್ಣೊ ಮಹಾರಾಯ' ಎನ್ನುವ ಆಯ್ಕೆಯಿಲ್ಲದ ವಿಷಾದದ ಅಂತ್ಯವೊಂದೇ ಎಂಬುದನ್ನು ಕಾದಂಬರಿ ವಿವರಿಸುತ್ತದೆ.

ಹೀಗೆಯೇ ತ್ರೀವೇಣಿ, ಉಷಾ, ಸಾಯಿಸುತೆ ರಾಧಾದೇವಿ, ಆರತಿ – ಇವರ ಕಾದಂಬರಿಗಳ ವಸ್ತು ನಿರ್ವಹಣೆಯನ್ನು ಗಮನಿಸಿದಾಗ 'ಸರ್ವಂ ಕುಟುಂಬಮಯಂ' ಎಂಬಂತೆ ಕಾಣುತ್ತದೆ. ವಿವಾಹದ ಸುತ್ತಮುತ್ತಲ ಬದುಕನ್ನೇ ಕಥೆಯನ್ನಾಗಿಸಿಕೊಂಡ ಕಾದಂಬರಿಗಳ ಉದ್ದೇಶವನ್ನು ಅವುಗಳ ಶೀರ್ಷಿಕೆಗಳೇ ವ್ಯಕ್ತಪಡಿಸುತ್ತವೆ. ವಿವಾಹ ಬಂಧನ, ಸಪ್ತಪದಿ, ಶುಭ ಮಿಲನ, ಮಧುರಗಾನ, ಮಮತೆಯ ಸಂಕೋಲೆ, ಹೃದಯರಾಗ, ಜೀವನ ಸಂಧ್ಯಾ, ಪ್ರೇಮ ಸಾಫಲ್ಯ, ಸಮ್ಮಿಲನ, ಚಿರ ಬಾಂಧವ್ಯ, ಮಿಡಿದ ಶೃತಿ, ಸುಮಧುರ ಸಂಗಮ......... (ಸಾಯಿಸುತೆ). ಕಂಕಣ, ಕೀಲುಗೊಂಬೆ, ಅವಳ ಮನೆ, ಹೃದಯ ಗೀತೆ, ಅಪಸ್ವರ, ಅಪಜಯ, ಶರಪಂಜರ –(ತ್ರಿವೇಣಿ). ಹೊಂಬಿಸಿಲು, ನಾನೇ ವೀಣೆ ನೀನೆ ತಂತಿ, ಯೌವನದ ಹೊನಲಲ್ಲಿ, ಮಕ್ಕಳಿರಲವ್ವ ಮನೆತುಂಬ – (ಉಷಾ ನವರತ್ನರಾಮ್). ಒಲವಿನ ಸುಧೆ, ಒಲಿದು ಬಂದ ಅಪ್ಸರೆ, ದುಂಬಿ ಮುಟ್ಟದ ಹೂ, ಶುಭ ವಸಂತ, ಪ್ರೀತಿಯ ಹೂಮಾಲೆ, ಪ್ರೇಮ ಸಾಮ್ರಾಜ್ಯ, ನಿಶ್ಚಿತ ಮಧು, ಬೆಳಕಾಗಿ ಬಂದವಳು, ಕನಸಿನ ಚಪ್ಪರ – (ರಾಧಾದೇವಿ). ನಿನ್ನೊಲುಮೆ ನನಗಿರಲಿ, ನೀನಾದೇ ಬಾಳಿಗೆ ಜ್ಯೋತಿ, ಧರಿತ್ರಿ, ಅಗೋಚರ, ಅಂತರ್ಗತ, ವಿದಾಯ – ಇತ್ಯಾದಿ ಆರತಿಯವರ ಕಾದಂಬರಿಗಳು. ಹೀಗೆ ಈ ಒಟ್ಟು ಐದು ಜನ ಕಾದಂಬರಿಕಾರ್ತಿಯರ ಅಭಿವ್ಯಕ್ತಿ ಲೋಕ ಮಹಿಳಾ ಬದುಕನ್ನು ತನ್ನ ಕಾದಂಬರಿಗಳ ಒಳಗೆ ಮರುಸೃಷ್ಟಿಸಿದೆ. ಐದು ಜನರ ಕಾದಂಬರಿಗಳು ಸಂಖ್ಯಾ ದೃಷ್ಟಿಯಿಂದ ೪೦೦ರ ಹತ್ತಿರವಿರುವುದರಿಂದ ಅಧ್ಯಯನಕ್ಕೆ ಹಿನ್ನೆಲೆಯಾಗಿ ಹೆಚ್ಚು ಕಾದಂಬರಿಗಳನ್ನು ವಿವರಿಸುತ್ತಾ ಹೋದರೆ ವಿಸ್ತಾರವಾಗಬಹುದೆಂಬ ಕಾರಣದಿಂದ ಅಗತ್ಯಕ್ಕೆ ಪೂರಕವಾದ ಕಾದಂಬರಿಗಳನ್ನು ಉದಾಹರಣೆಯಾಗಿ ಬಳಸಿಕೊಳ್ಳಲಾಗಿದೆ.

### ೫.೩.೨ ಜನಪ್ರಿಯ ಕಾದಂಬರಿಗಳ ವಿನ್ಯಾಸ, ತಂತ್ರ

ಮಹಿಳಾ ಕಾದಂಬರಿಗಳಲ್ಲಿ ವಿನ್ಯಾಸ ಮತ್ತು ತಂತ್ರಗಳು ಇನ್ನೂ ಹುಡುಕಾಟದ ಹಾದಿಯಲ್ಲಿದೆ. ವಿನ್ಯಾಸ ಮತ್ತು ತಂತ್ರಗಳು ಸೂಕ್ತ ತರಬೇತಿಯ ಮೂಲಕ ಒದಗಿಬರಬೇಕಾದ ಸಂಗತಿಗಳಾಗಿರುವುದರಿಂದ ಮಹಿಳೆಯ ಅಭಿವ್ಯಕ್ತಿಯಲ್ಲಿ ಅವಿನ್ನು ಬೆಳೆಯುತ್ತಿರುವ ಹುಡುಕಾಟದ ಹಂತದಲ್ಲಿವೆ. ಇತ್ತೀಚಿನ ಮಹಿಳಾ ಸಾಹಿತ್ಯದಲ್ಲಿ ಮೌಖಿಕ ಕಥಾನಕಗಳ ಮಾದರಿಗಳ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಮಹಿಳೆ ಮೂಲತಃ ಕತೆಗಾರಳು. ಅವಳಿಗೆ ಕತೆ ಕಟ್ಟುವ ಕಲೆ ವಿಶೇಷವಾಗಿ ದಕ್ಕಿದೆ. ಸ್ತ್ರೀವಾದಿಗಳು

ಹೆಂಗಸಿನ ಇಂಥ ಪ್ರತಿಭೆಯನ್ನು ರಾಗದ ಹಾಗೇ ಎಂದು ವಿಶ್ಲೇಷಿಸುತ್ತಾರೆ. ಅವಳ ಮಾತಿನ ಧಾಟಿ ಅಧಿಕಾರ ನೆಲೆಯದಲ್ಲ. ಅದೊಂದು ಸೌಹಾರ್ದಯುತವಾದ ಸಂವಾದ. ಹೇಳುವ, ಕೇಳುವ ಪ್ರಕ್ರಿಯೆಗಳು ಏಕಕಾಲಕ್ಕೆ ಅಲ್ಲಿ ನಡೆಯುತ್ತಿರುವುದನ್ನು ಗಮನಿಸಬಹುದು. ಅವಳ ಹರಟೆ, ಬೈಗಳು, ಹಾಡು ಇಂಥ ಸಂದರ್ಭಗಳಲ್ಲಿ ಅವಳು ಹೆಚ್ಚು ತನ್ನನ್ನು ಮುಕ್ತವಾಗಿ ಅಭಿವ್ಯಕ್ತಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂಬುದನ್ನು ಗಮನಿಸಬೇಕು. ಹರಟೆಯಂಥ ಪ್ರಕ್ರಿಯೆಗಳು ಪುರುಷ ಪ್ರಧಾನ ನೆಲೆಯಲ್ಲಿ ನಿರುಪಯುಕ್ತವಾದಾಗಲೂ ಮಹಿಳೆಯರಿಗೆ ಅವು ತಮ್ಮನ್ನು ತೋಡಿಕೊಳ್ಳುವಂಥ ತಂತ್ರಗಳಾಗಿ ಬಳಕೆಯಾಗಿರುವುದನ್ನು ಗಮನಿಸಬಹುದು. ವೈದೇಹಿ, ಸವಿತಾ ನಾಗಭೂಷಣ, ನಾಗವೇಣಿ........ ಮುಂತಾದವರ ಕಥಾನಕಗಳು ಇಂಥ ನೆಲೆಗಳನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಳ್ಳುವ ಪ್ರಯತ್ನ ಮಾಡಿರುವುದನ್ನು ಗಮನಿಸಬಹುದು. ವೈದೇಹಿಯವರನ್ನು ಹೆಣ್ಣಿನ ಬದುಕನ್ನು ಬಹಳ ಆಪ್ತವಾಗಿ ಚಿತ್ರಿಸುವ ಕಾದಂಬರಿಕಾರ್ತಿಯರೆಂದು ಗುರುತಿಸಬಹುದು. ಹೆಣ್ಣು ಪದಕೋಶ ವೈದೇಹಿಯವರಲ್ಲಿ ಕಾಣುವ ವಿಶಿಷ್ಟತೆಯೇ ಅನನ್ಯವಾದುದು. ಹೆಣ್ಣಿನ ಅಂತರಂಗವನ್ನು ಹೊಕ್ಕು ನೋಡುವ ವೈದೇಹಿ ತಮ್ಮ ಕತೆಗಳಲ್ಲಿ ಹೆಂಗಸರೇ ಕತೆಯನ್ನು ಹೇಳುವ ವಿನ್ಯಾಸವೊಂದನ್ನು ಬಳಸುತ್ತಾರೆ. ಹೆಣ್ಣಿನ ಬದುಕಿನ ಸಣ್ಣ ಪುಟ್ಟ ಆಶೆ, ಆಶಯಗಳನ್ನು ವಿವರವಾದ ಧಾಟಿಯಲ್ಲಿ ಕಟ್ಟಿಕೊಡುತ್ತಾರೆ. ಅವರ 'ವಾಣಿಮಾಯಿ' ಅಂತದ್ದೊಂದು ಕತೆ. 'ನೋಡಬಾರದು ಚೀಲದೊಳಗನು' ಕವನದಲ್ಲಿ ಹೆಣ್ಣಿನ ಅಂತರಂಗ ಅದರ ವೈಶಿಷ್ಟತೆ, ಅದರ ಒಳಗಿರುವ ವಿಶಿಷ್ಟ ಹೆಣ್ಣು ಲೋಕವನ್ನು ಕಟ್ಟಿಕೊಟ್ಟರೆ, 'ವಾಣಿಮಾಯಿ'ಯಲ್ಲಿ ಚಪ್ಪಲಿಯೊಂದನ್ನು ತನ್ನ ಜೀವಮಾನದಲ್ಲಿ ತೊಡಬೇಕೆಂದರೂ ತೊಡಲಾಗದ ಹೆಣ್ಣಿನ ಕತೆಯೊಂದನ್ನು ಹೇಳುತ್ತಾರೆ. ಕತೆಯಲ್ಲಿ ಅಂತೂ ಇಂತೂ ಮೆಟ್ಟು ಬಂದಾಗ ವಾಣಿಮಾಯಿಯ ಪ್ರತಿಕ್ರಿಯೆ ಇದು......... ಮೋಪ ಬ್ಯಾರಿಯೇ ಹೊಲಿದ ಮೆಟ್ಟು ಹೊಲಿಗೆಯ ಗೀಟೆಲ್ಲ ಕಾಣುತ್ತಿತ್ತು. ಆದರೂ ಅದು ಮೆಟ್ಟು! ಕಡೆಗೂ ಮೆಟ್ಟು ಹೌದಲ್ಲ! ಮೂಗಿಗೆ ಹಿಡಿದು ಮೂಸಿದಳು ವಾಣಿಮಾಯಿ. ಮುಂದೆ ಅದನ್ನೆ ಮೆಟ್ಟುತ್ತಾ ಅಂಗಳದ ತುಂಬೆಲ್ಲಾ ಓಡಾಡಿದಳು. ಓ.......... ಇದು ಕಬ್ಚ್‌ತ್! .......... ಇದ ಇದಾ.......... ಮೆಟ್ಟು ಕಬ್ಚ್‌ತ್‌ದ್ ಕಾಣಿಯಾ.........!" ಎಂದು ಸಂಭ್ರಮ ನಗುತ್ತ ಇದ್ದ ವಾಣಿಮಾಯಿ ಕತೆಯ ಕೊನೆಯಲ್ಲಿ ಮೆಟ್ಟು ಹಾಕಿಕೊಳ್ಳಲು ಆಗದಂತೆ ಕಾಲು ಸುಟ್ಟ ಸುಬ್ಬುವಿಗೆ ಸಾಯುವ ಕ್ಷಣದಲ್ಲೂ ಜೋರಾಗಿ ಒದ್ದು ರಕ್ತ ಬರಿಸಿ ದೊಡ್ಡಕಣ್ಣಬಿಟ್ಟಳು ಎನ್ನುವುದು ಅವಳಿಗಾದ ಅನ್ಯಾಯಕ್ಕೆ ಅವಳು ನೀಡುವ ಪ್ರತಿಕ್ರಿಯೆ ಅದು ಆಗಿರುತ್ತದೆ. ಹೀಗೆ

ಹೆಣ್ಣು ಲೋಕದ ಆಂತರ್ಯವನ್ನು ತಮ್ಮ ಪ್ರಾದೇಶಿಕ ಭಾಷೆಯಲ್ಲೇ ಕಟ್ಟಿಕೊಡುವ ವೈದೇಹಿ ಹೆಣ್ಣಿನ ಬರಹಕ್ಕೆ ಹೊಸಹಾದಿಗಳನ್ನು ಖಂಡಿತವಾಗಿಯೂ ಕಲ್ಪಿಸಿದ್ದಾರೆ. ನಾಗವೇಣಿ ತಮ್ಮ ತುಳುನಾಡಿನ ವೈಶಿಷ್ಯವನ್ನು, ತಮ್ಮ ಗಾಂಧಿ ಬಂದ ಕಾದಂಬರಿಯ ಮೂಲಕ, ತಮ್ಮನೇಕ ಬರಹಗಳ ಮೂಲಕ ಕಟ್ಟಿಕೊಡುತ್ತಾರೆ. ಸಾಂಪ್ರದಾಯಿಕ ಸಮಾಜವೊಂದರಲ್ಲಿ ಹುಟ್ಟುವ ಇವರ ಹೆಣ್ಣುಗಳು ಆ ಸಾಂಪ್ರದಾಯಿಕತೆಯನ್ನು ಮೆಟ್ಟಿ ನಿಲ್ಲುವ ಸಾಮರ್ಥ್ಯವಿರುವವರು. 'ಸ್ತ್ರೀಲೋಕ' ಕಾದಂಬರಿಯ ಮೂಲಕ ಸವಿತಾ ನಾಗಭೂಷಣ ಹೆಣ್ಣಿನ ನಗಣ್ಯ, ಕ್ಷುದ್ರ ಲೋಕದ ಅನುಭವಗಳನ್ನು ದಿನನಿತ್ಯದ ಮಾತುಗಳ ಮೂಲಕವೇ ಕಟ್ಟಿಕೊಡುತ್ತಾ, ಹರಟೆಯ ಮಾದರಿಯಲ್ಲಿ ಕಾದಂಬರಿಯೊಂದನ್ನು ಹುಟ್ಟುಹಾಕುವ ರೀತಿ ಹೊಸತು. ಇದೀಗ ಕಥಾಲೋಕಕ್ಕೆ ಪ್ರವೇಶ ಮಾಡಿದ ವಿನಯಾ ತಮ್ಮ ಕತೆಗಳಲ್ಲಿ, ತಮ್ಮ ಪ್ರಾದೇಶಿಕ ಭಾಷೆಯ ಬಳಕೆಯ ಜೊತೆಗೆ ಕತೆ ಹೇಳುವ ಧಾಟಿಯನ್ನು ಬಳಸಿಕೊಳ್ಳುತ್ತಾರೆ. ಹೀಗೆ ಇನ್ನೂ ಅನೇಕ ಬಗೆಯ ವಿವಿಧ ವಿನ್ಯಾಸಗಳನ್ನು ತನ್ನ ಒಡಲೊಳಗಿಟ್ಟುಕೊಂಡಿರುವ ಕನ್ನಡ ಮಹಿಳಾ ಬರಹ ಲೋಕ ತನ್ನೊಳಗನ್ನು ತೆರೆದುಕೊಳ್ಳುವತ್ತ ಮುಖಮಾಡಿರುವುದು ಬೆಳವಣಿಗೆಯೇ.

### ೫.೩.೩ ಜನಪ್ರಿಯ ಕಾದಂಬರಿಗಳ ಭಾಷೆ

ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಗುರುತಿಸಿಕೊಂಡಿರುವಂತೆ ಮಹಿಳೆ ಬಳಸುತ್ತಿರುವ ಭಾಷೆ ಗಂಡುಭಾಷೆ. ಅವಳ ಎಲ್ಲ ಭಾವಗಳು ಭಾಷೆಯಾಗುವಾಗಿನ ಸಂದರ್ಭದಲ್ಲಿ, ಆ ಭಾಷೆಯೆಂಬ ಪರಿಕರವೇ ಅವಳದು ಆಗಿಲ್ಲದಿರುವುದು ಅವಳ ಅಭಿವ್ಯಕ್ತಿಗೆ ಬಹು ದೊಡ್ಡ ತೊಡಕಾಗುತ್ತದೆ. ಬಳಸಿದರು ಅನಿವಾರ್ಯವಾಗಿ ಪುರುಷನ ಆಲೋಚನೆಗಳನ್ನೇ ಕೃತಿಗಳಲ್ಲಿ ತರಬೇಕಾಗುತ್ತದೆ. ಇಡೀ ಕಾದಂಬರಿಗಳ ಅಭಿವ್ಯಕ್ತಿಯಲ್ಲಿ ಮಹಿಳೆ ಪ್ರಣಯದ ಸನ್ನಿವೇಶವನ್ನು ಪ್ರೀತಿ, ಪ್ರೇಮಗಳ ಸಂದರ್ಭಗಳನ್ನು ಹೇಳಲು ಬಳಸುವ ಭಾಷೆಯನ್ನು ಗಮನಿಸುವಾಗ ಅವೆಲ್ಲಾ ಸಂಭಾಷಣೆಗಳು ಯುದ್ಧ ಮೂಲದ್ದಾಗಿರುವುದನ್ನು ಗಮನಿಸಬಹುದು. ಇದನ್ನು ಕುರಿತು ಸ್ತ್ರೀವಾದಿ ಸಿಮೊನ್ ದ ಬೋವಾ ತನ್ನ ಸೆಕೆಂಡ್ ಸೆಕ್ಸ್‌ನಲ್ಲಿ ಹೇಳುತ್ತಾಳೆ "ಗಂಡಸರ ಕಾಮಕೋಶವಿಡೀ ಯುದ್ಧ ಕ್ಷೇತ್ರದಿಂದ ಬಂದಿದೆ. ಪ್ರೇಮಿಯಲ್ಲಿ ಸೈನಿಕನ ಗುಣವಿರುತ್ತದೆ. ಅವನ ಅಂಗ ಹೆದೆ ಏರಿದ ಬಿಲ್ಲಿನಂತೆ. ಸ್ಖಲನವೆಂದರೆ ಬಾಣ ಚಿಮ್ಮಿದಂತೆ. ಅವನ ಮಾತಿನಲ್ಲಿ ನುಗ್ಗು, ಏರು, ಗೆಲ್ಲು ಇಂಥ ಪದಗಳೇ ಇವೆ. ಅವನ ಲೈಂಗಿಕಾನಂದದಲ್ಲಿ ನಾಯಕತನದ ಲಕ್ಷಣಗಳಿವೆ. 'ಲೇ ರ್‍ಯಾಪೋರ್ಟ್ ದ ಉರಿಯಲ್'ನಲ್ಲಿ ಬೆಂಡಾ ಹೀಗೆ ಬರೆಯುತ್ತಾಳೆ. ವಂಶೋತ್ಪಾದನೆಯ

ಕ್ರಿಯೆಯಲ್ಲಿ ಒಂದು ಜೀವಿಯನ್ನು ಇನ್ನೊಂದು ಜೀವಿ ಆಕ್ರಮಿಸುತ್ತದೆ. ಆ ಆಕ್ರಮಿತ ಅವಸ್ಥೆಯಲ್ಲಿ ಆ ಇನ್ನೊಂದು ಜೀವವಿರುತ್ತದೆ. ಒಬ್ಬರು ಗೆದ್ದವರು, ಇನ್ನೊಬ್ಬರು ಸೋತವರು. ಪ್ರಣಯ ಸಂಬಂಧಗಳನ್ನು ಕುರಿತು ಮಾತನಾಡುವಾಗ ಅತ್ಯಂತ ನಾಗರಿಕ ಸಮಾಜ ಕೂಡಾ ಗೆಲವು, ನುಗ್ಗು, ಹಿಡಿ, ಆಕ್ರಮಿಸು ಎಂಬ ಪದಗಳ ಜೊತೆಗೆ ಸೋಲು, ಕಾಯ್ದುಕೋ, ಶರಣಾಗು ಎಂಬ ಮಾತುಗಳನ್ನು ಬಳಸುತ್ತದೆ. ಇಲ್ಲಿ ಪ್ರೇಮವೆಂದರೆ, ಯುದ್ಧವೇ"[೨೬] ಎನ್ನುವ ಮಾತಿಗೆ ಅಸಂಖ್ಯಾತ ಉದಾಹರಣೆಗಳನ್ನು ಈ ಕಾದಂಬರಿಗಳ ಲೋಕದಿಂದ ಹೆಕ್ಕಿ ಕೊಡಬಹುದು. ಕೆಲವನ್ನು ಮಾತ್ರ ಉದಾಹರಿಸಲಾಗಿದೆ. "ಮರು ಕ್ಷಣದಲ್ಲಿ ಅವರ ಬಾಹು ಬಂಧನದಲ್ಲಿದ್ದೆ.......... "ನೀನು ನನಗಾಗಿ ಬದುಕಬೇಕು ಹೇಮಾ. ನಾನು ನಿನ್ನನ್ನು ಕೈಹಿಡಿದು ನನ್ನ ಮೈ, ಮನ ತುಂಬಿಕೊಳ್ಳುತ್ತೇನೆ. ನೀನು ನನ್ನ ಬಾಳನಲ್ಲಿ ಆದ ನಷ್ಟ ತುಂಬಬೇಕು.......' ಅವರ ಆಲಿಂಗನದಲ್ಲ ಮೈ ಮರೆತುಹೋದೆ........ ನಾನು ಅವರೊಲವಿನಲ್ಲಿ ಕೊಚ್ಚಿ ಹೋದೆ." (ಹಗಲುಗನಸು ಉಷಾ) ಹಾಗೆಯೇ ಇವಳನ್ನೂ ಸವಿಯಬೇಕು. ಇವಳನ್ನು ಬಾಹುಗಳಲ್ಲಿ ಬಂಧಿಸಿ, ಇವಳ ಸೌಂದರ್ಯ ಹೀರಿ ತನ್ನ ಮೈಮನ ತಣಿಯಬೇಕು (ಅವಲಂಬನ, ಉಷಾ) 'ಈಗ ಭವಾನಿ ಜಗನ್ನಾಥನ ವಸ್ತುವಾಗಿದ್ದಳು' (ಅವಳ ಮಗಳು, ತ್ರಿವೇಣಿ) ಉನ್ಮತ್ತನಾಗಿ ಅವಳ ಮೇಲೆರಗಿದ.......... ಕೊಸರಾಡಿದ ಕುಂಕುಮ ಅವನ ಬಲಿಷ್ಠ ತೋಳುಗಳಲ್ಲಿ ಕೊನೆಗೂ ಸೋತು ಒರಗಬೇಕಾಯಿತು. ತ್ರಿಭು ಕುಂಕುಮನನ್ನು ಬಾಹುಬಂಧನದಿಂದ ವಿಮುಕ್ತಿಗೊಳಿಸಿದ (ಅವಲಂಬನ, ಉಷಾ) ಪೂರ್ಣವಾಗಿ ಕರಗಿ ಹೋದಳು. (ಸಮಾನಾಂತರ ರೇಖೆಗಳು, ಆರತಿ) ಅಖಿಲಾ ಹುಲಿಯ ಕೈಗೆ ಸಿಕ್ಕ ಹರಣಿಯಾಗಿದ್ದಳು "ಸಿಡಿಲನಂತೆ ಮೇಲೆರಗಿದ ಅವನ ಒರಟು ತುಟಿಗಳು ಅವಳ ಮೃದುವಾದ ಮೈ ಮೇಲೆಲ್ಲಾ ತೀರದ ದಾಹದಿಂದ ಹುಡುಕಾಡಿದವು......... ಸ್ವರ್ಗ ಸೂರೆಗೆಯ್ದ ವಿಜಯದ ಗೆಲುವಿನಿಂದ ಮದೋನ್ಮತ್ತನಂತೆ ಅವಳ ದೇಹದ ತುಂಬಾ ಉಸಿರಾಡಿದ. ದೇಹದ ಬಯಕೆ ತೀರಿದಾಗ ಭಾವೋದ್ವೇಗದಿಂದ ತನ್ನ ರೋಮಭರಿತ ಎದೆಯಲ್ಲಿ ಹುದುಗಿಸಿಕೊಂಡ"......... (ಕಾರ್ತಿಕದ ಸಂಜೆ-ಸಾಯಿಸುತೆ) ಮಧು ಹೀರಿದ ದುಂಬಿ ಅವನಾದರೆ ಮೊಗ್ಗಾಗಿದ್ದವಳು ಅರಳಿದ ಹೂವಾದಳು (ಬಿರುಕು, ಉಷಾ ನವರತ್ನರಾಮ್) ಅವನ ತೊಳಸೆರೆಯಲ್ಲಿ ಕರಗಿ ಹೋದಳು. (ಸಪ್ತಪದಿ, ಸಾಯಿಸುತೆ).

ಹೀಗೆ ಕಾದಂಬರಿಗಳಲ್ಲಿ ಬಳಕೆಯಾಗುವ ಭಾಷೆ ಪುರುಷನ ಪದಕೋಶವೇ ಆಗಿರುವುದನ್ನು ಗಮನಿಸಬಹುದು. ಕಾದಂಬರಿಗಳಲ್ಲಿ ಬಳಕೆಯಾಗುವ ಅನೇಕ ವಾಕ್ಯಗಳು, ನುಡಿಗಟ್ಟುಗಳು, ಅಧಿಕಾರದ ನೆಲೆಯವೇ ಆಗಿವೆ. ಆದರೆ ಈ ಕಾದಂಬರಿಗಳಲ್ಲಿ ಪದೆ ಪದೇ ಬರುವ ಅಡಿಗೆಯ ಮತ್ತು ಸೀರೆಯ ವರ್ಣನೆಗಳಲ್ಲಿ ಬರುವ ಅತಿಯಾದ ವಿವರಣೆಗಳು ಹೆಣ್ಣಿನ ಭಾಷೆಯ ಲಕ್ಷಣಗಳನ್ನು ಹೇಳುತ್ತವೆ. ಅದಕ್ಕೆ ಎಲ್ಲ ಕಾದಂಬರಿಗಳ ಉದಾಹರಣೆಗಳನ್ನೆತ್ತಿ ಕೊಡಬಹುದು. ತ್ರಿವೇಣಿಯವರ ಕಾದಂಬರಿಗಳಿಂದ ಉದಾಹರಣೆಗಳನ್ನು ಕೊಡಲಾಗಿದೆ.

ವಸಂತಗಾನ ಕಾದಂಬರಿಯಲ್ಲಿ ಅನೇಕ ಕಡೆ ಸೀರೆಯ ವರ್ಣನೆ ಅತ್ಯಂತ ವಿವರವಾಗಿ ಮೂಡಿವೆ. ಆ ಭಾಗಗಳನ್ನು ಇಲ್ಲಿ ಉದ್ದೇಶ ಪೂರ್ವಕವಾಗಿ ದಾಖಲಿಸಲಾಗಿದೆ. "ಇನ್ನೊಂದು ಕ್ಷಣಕ್ಕೆ ಮಳೆಗರೆಯಲಿರುವ ನೀಲಗಪ್ಪು ಮೋಡದ ಬಣ್ಣದ ಒಡಲಿನ, ಸೂರ್ಯ ಪಶ್ಚಿಮದಲ್ಲಿ ಅರ್ಧ ಮುಳುಗಿರುವಾಗ ಆಕಾಶದಲ್ಲಿ ಹರಡುವ ಅರುಣರಾಗದ ಅಂಚಿದ್ದು, ಅಮವಾಸ್ಯೆಯ ರಾತ್ರಿಯಲ್ಲಿ ಆಗಸದ ತುಂಬ ಹರಡಿರುವ ಕಿರು ತಾರೆಗಳಂತೆ ಒಡಲಿನ ತುಂಬಾ ನಕ್ಷತ್ರಗಳಿರುವ ರೇಷ್ಮೆಯ ಸೀರೆ" (ಪುಟ ೧೫೩) "ಆ ಸೀರೆ ಇನ್ನೂ ತೆಳುವಾಗಿತ್ತು. ಬಣ್ಣ ಇನ್ನೂ ಹೊಳಪಾಗಿತ್ತು. ಆ ಅಂಚಿನಲ್ಲಿದ್ದ ಹಂಸ ಕೊರಳು ಬಗ್ಗಿಸಿಕೊಂಡಿತ್ತು. ಈ ಸೀರೆಯಲ್ಲಿರುವ ಹಂಸದ ಹಾಗೆ ಆಕಾಶದ ಕಡೆ ತಿರುಗಿರಲಿಲ್ಲ. ಸೂರ್ಯ ಮುಳುಗುವಾಗಿನ ಆಕಾಶ ನೀಲಿ ನನಗೆ ಬೇಡ. ಸೂರ್ಯ ಹುಟ್ಟುವಾಗಿನ ಆಕಾಶ ನೀಲಿ ಬೇಕು........" (೧೦೩) "ಆ ಸೀರೆಗೆ ಬದಲಾಗಿ ಅವಳು ಕಡಲು ನೀಲ ಹಸುರಿನ ಬನ್ನಿ ಜಾರ್ಜಟ್ ಸೀರೆಯುಟ್ಟಿದ್ದಳು ಸೀರೆಯ ಒಡಲಿನ ತುಂಬ ಜರಿಯ ಚೌಕಳಿಗಳು ಹೊಳೆಯುತ್ತಿದ್ದವು. ಸೊಗಸಾದ ಸೀರೆಗೆ ಆರು ಇಂಚಿನ ಗಂಡಭೇರುಂಡದ ಜರಿಯ ಅಂಚು ತುಂಬಾ ಹೊಂದಿಕೆಯಾಗಿತ್ತು. ಜರಿಯ ಚೌಕಳಿಗಳಿಂದ ತುಂಬಿದ ಸೆರಗಿಗೆ ಪುಟ್ಟ ಪುಟ್ಟ ಜರಿಯ ಕುಚ್ಚುಗಳು ಚಿನ್ನದ ಗೆಜ್ಜೆಗಳಂತೆ ಕಾಣಿಸುತ್ತಿದ್ದವು. ಆ ಸೀರೆಗೆ ಕಡು ಹಸುರಿನ ಮಕ್‌ಮಲ್ ರವಿಕೆ ತುಂಬಾ ಒಪ್ಪುತ್ತಿತ್ತು. ರವಕೆಯ ಕೊರಳು, ತೋಳು, ಬೆನ್ನಿನ ಮೇಲೆ ಸಣ್ಣ ಮುತ್ತಿನ ಮಣಿಗಳಿಂದ ಅನೇಕ ರೀತಿಯ ಹಸೆ ಬಳ್ಳಿಗಳನ್ನು ಹೆಣೆದಿತ್ತು". (೧೩೯) ಹೀಗೆ ವರ್ಣಿತಗೊಂಡಿರುವ ಈ ಕಾದಂಬರಿಯನ್ನು ಪುರುಷ ಮಾನದಂಡಗಳ ನೆಲೆಯಿಂದ ವಿವರಿಸಿಕೊಂಡರೆ ಪೇಜಿಗೊಮ್ಮೆ ಊಟ, ತಿಂಡಿಯ ವಿವರಣೆ ನಿದ್ದೆ-ಸಲ್ಲಾಪಗಳ ಚಿತ್ರಣ, ಎರಡು ಪೇಜಿಗೊಮ್ಮೆ ಸೀರೆಯ ವರ್ಣನೆ....... ಇವನ್ನು ಬಿಟ್ಟರೆ ಈ ಕೃತಿಯಲ್ಲಿ ಏನಿದೆ

ಎಂದು ಖಂಡಿತವಾಗಿಯೂ ಅನ್ನಿಸುತ್ತದೆ. ಆದರೆ ಈ ಕಾದಂಬರಿಗಳಲ್ಲಿ ಬರುವ ವಿವರಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಕೆಲವು ಸೂಕ್ಮಗಳು ಅರ್ಥವಾಗುತ್ತವೆ.

ಇಲ್ಲಿನ ವಾಸು-ಸರಳೆ ಮಧ್ಯಮ ವರ್ಗದ ದಂಪತಿಗಳು. ಅಲ್ಲಿ ಕಾಣಸಿಗುವ ಸಿಟ್ಟು, ಸೆಡುವು, ಮುನಿಸು, ಸಂಶಯ, ಸುಖ, ಸಂಭ್ರಮಗಳು ಕಾದಂಬರಿ ಲೋಕದಲ್ಲಿಯೂ ಸಿಕ್ಕುತ್ತವೆ. ತನ್ನ ಹೆಂಡತಿ ಮೊದಲ ಬಾರಿಗೆ ಗರ್ಭಿಣಿಯಾದಾಗ ಸಂಭ್ರಮಗೊಳ್ಳುವ ವಾಸು ಅವಳ ಆಶೆಗಳನ್ನು ಪೂರೈಸಲು ಟೊಂಕ ಕಟ್ಟಿ ನಿಲ್ಲುತ್ತಾನೆ. ಹೆಂಡತಿ ಹಾಡು ಕೇಳಬೇಕೆಂದು, ಅಪೇಕ್ಷೆ ಪಟ್ಟಾಗ ಅವಳನ್ನು ಸಂಗೀತ ಕಛೇರಿಗೆ ಕರೆದುಕೊಂಡು ಹೋಗುತ್ತಾನೆ. ಸಂಗೀತದ ಬಗ್ಗೆ ಅಷ್ಟೇನೂ ಒಲವಿಲ್ಲದ ಸರಳೆ ಗಮನಿಸುತ್ತಿದ್ದುದು ಅಕ್ಕಪಕ್ಕದವರು ಹಾಕಿಕೊಂಡ ಸೀರೆ, ಒಡವೆಗಳನ್ನ ಅವುಗಳ ಬಗ್ಗೆ ದೀರ್ಘವಾದ ವಿವರಣೆಗಳನ್ನು ನೀಡುತ್ತಾರೆ ತ್ರಿವೇಣಿ. ಚಿಕ್ಕ ಚೊಕ್ಕ ಪರಿಕಲ್ಪನೆ ಮಹಿಳೆಯದಲ್ಲ. ಏನನ್ನೇ ಹೇಳಬೇಕಾದರೂ ಅದರೆಲ್ಲಾ ವಿವರಗಳೊಂದಿಗೆ ಹೇಳುವುದು ಹೆಣ್ಣಿನ ಶೈಲಿ. ತಾನು ಹೇಳುತ್ತಿರುವ ಎಲ್ಲ ವಿವರಗಳು ಎದುರಿಗಿರುವವರನ್ನು ತಲುಪಬೇಕೆಂಬ ಸದುದ್ದೇಶ ಅವಳದು. ಸೀರೆಯನ್ನು ವಿವರಿಸುವ ಮೂರೂ ವರ್ಣನೆಗಳು ವಿವರವಾಗಿದ್ದು, ಪ್ರತಿಮಾತ್ಮಕವಾಗಿರುವುದನ್ನು ಗಮನಿಸಬಹುದು. ವಿವರಣೆಗಳ ವಾಸ್ತವ ಅವಾಸ್ತವಗಳೇನೇ ಇರಲಿ ಅವಳನ್ನು ಕಟ್ಟಿ ಕೊಡುವ ಧಾಟಿ ಹೆಣ್ಣಿನ ನೆಲೆಯದೇ ಶರಪಂಜರ ಕಾದಂಬರಿಯಲ್ಲಿಯೂ ಕೂಡಾ ಕಾವೇರಿಯ ಅಲಂಕಾರ, ಸೀರೆ ಮುಂತಾದವುಗಳನ್ನು ವಿವರಿಸುವಾಗ ಇಂಥದ್ದೇ ವಿವರಣೆಯ ಧಾಟಿಯನ್ನು ಬಳಸುತ್ತಾರೆ.

ತನ್ನ ಗಂಡನನ್ನು ಸೀರೆ ಬೇಕೆಂದು ಅಂಗಡಿಗೆ ಕರೆದೊಯ್ಯುತ್ತಾಳೆ ಸರಳೆ, ಅಂಗಡಿಯಲ್ಲಿನ ಎಲ್ಲ ಸೀರೆಗಳನ್ನು ತೆಗೆದು ಎಲ್ಲಕ್ಕೂ ಮೂಗು ಮುರಿದು ಹೆಸರಿಡುವ ಸರಳೆಗೆ ಯಾವ ಸೀರೆಯೂ ಇಷ್ಟವಾಗುವುದಿಲ್ಲ.......... ಸೂರ್ಯ ಮುಳುಗುವಾಗಿನ ಆಕಾಶನೀಲಿ ನನಗೆ ಬೇಡ. ಸೂರ್ಯ ಹುಟ್ಟುವಾಗಿನ ಆಕಾಶ ನೀಲಿ ಬೇಕು ಎಂದು ತೆಗೆಯುವ ತಗಾದೆ ಕೂಡಾ ಹೆಣ್ಣಿನ ಮೊಂಡುತನದ ಸ್ವಭಾವವನ್ನು ಹೇಳುತ್ತವೆ ಎಂದು ಮೇಲ್ನೋಟಕ್ಕೆ ಕಾಣಿಸಿದರೂ, ಆಂತರ್ಯದಲ್ಲದು ಮಾನ್ಯತೆಯೇ ಇಲ್ಲದ ತನ್ನ ಬದುಕಿನಲ್ಲಿ ಕೆಲ ಸಂದರ್ಭಗಳಲ್ಲಾದರೂ ಪ್ರಾಮುಖ್ಯತೆ ಸಿಕ್ಕಾಗ ಅಲ್ಲಿ ತನ್ನನ್ನು ತಾನು ಸ್ಥಾಪಿಸಿಕೊಳ್ಳುವ ಭಾವವನ್ನು ವ್ಯಕ್ತಪಡಿಸುತ್ತವೆ. ಇಷ್ಟೇ ಅಲ್ಲದೆ ಎಷ್ಟೊ ಹೆಂಗಸರಿಗೆ ಉಡುಗೆ ಬಹುಮುಖ್ಯ. ಏಕೆಂದರೆ, ಅದರ ನೆರವಿನಿಂದ ಹೊರಜಗತ್ತು ಮತ್ತು ಅವಳ ಒಳಜಗತ್ತನ್ನು ಮರುರೂಪಿಸುವೆನೆಂಬ ಭ್ರಮೆಯನ್ನು ಹುಟ್ಟಿಸುತ್ತದೆ......... ಹೆಂಗಸು ಅನುಭೋಗಿ.

ಆದ್ದರಿಂದ ಅವಳ ಉಡುಪು, ಅಲಂಕಾರಗಳಿಂದ ಅವಳ ಬೆಲೆ ಹೆಚ್ಚುತ್ತದೆ. ತನ್ನ ಉಡುಪುಗಳಿಗೆ ಅದರ ಬೇರೆ ಬೇರೆ ಸಾಮಗ್ರಿಗಳಿಗೆ ಆಕೆ ನೀಡುವ ಮಹತ್ವ ವ್ಯರ್ಥವಲ್ಲ. ತನ್ನ ಸ್ಥಾನಮಾನವನ್ನು ಆಕೆ ಕಾಯ್ದುಕೊಳ್ಳಲ್ಲೇ ಬೇಕಾಗಿದೆ...........ಆಕೆ ಚೆಲುವಾಗಿ ತೋರಿದಷ್ಟೂ ಆಕೆಗೆ ಗೌರವ ಹೆಚ್ಚು......... ಅದು ಅವಳಿಗೊಂದು ಅಸ್ತ್ರ. ಅದು ಚಹರೆ. ಒಂದು ರಕ್ಷಣಾ ವ್ಯವಸ್ಥೆ. ಒಂದು ಶಿಫಾರಸ್ಸು ಪತ್ರ.[೨೭]ಎನ್ನುವ ಬೋವಾಳ ಮಾತುಗಳು ಅಧೀನ ನೆಲೆಯವರೆಗೆ ವೇಶಭೂಷಣಗಳು ಕೂಡ ನಿರ್ದೇಶಿತಗೊಂಡಿವೆ ಎಂಬುದನ್ನು ಹೇಳುತ್ತವೆ.

ಅಧೀನ ನೆಲೆಯ ಬದುಕನ್ನು ಬದುಕುತ್ತಿರುವ ಮಹಿಳಾ ಅಭಿವ್ಯಕ್ತಿಯಲ್ಲಿ ಮೂಡುವ ವಸ್ತು, ವಿನ್ಯಾಸ ತಂತ್ರ, ಭಾಷೆಗಳು ಕಾದಂಬರಿಗಳಲ್ಲಿ ಹೇಗೆ ಮೂಡಿವೆ, ಏಕೆ ಮೂಡಿವೆ, ಅವು ಮಹಿಳಾ ಲೋಕದ ಯಾವ ವಾಸ್ತವಗಳನ್ನು ಹಿಡಿದಿಡುತ್ತವೆ ಎಂಬುದನ್ನು ಈವರೆಗೆ ಚರ್ಚಿಸಲಾಗಿದೆ. ಇಂಥ ಅಭಿವ್ಯಕ್ತಿಯ ಮಾದರಿಗಳು ಮಹಿಳಾ ಬದುಕಿನ ನಿಜವಾದ ಬಿಡುಗಡೆಯ ನೆಲೆಗಳಾಗಿವೆಯಾ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕಾಗುತ್ತದೆ. ಸ್ತ್ರೀವಾದಿ ತಾತ್ವಿಕತೆಯ ಹಿನ್ನೆಲೆಯಲ್ಲಿ ಇವುಗಳನ್ನು ಗ್ರಹಿಸುವಾಗ ಅವುಗಳ ಸಾಹಿತ್ಯಿಕ ನೆಲೆ-ಬೆಲೆಗಳಿಗಿಂತ ಮುಖ್ಯವಾಗಿ ಅವುಗಳ ಹಿಂದಿರುವ ಸಾಮಾಜಿಕ, ಸಾಂಸ್ಕೃತಿಕ, ಸಂಗತಿಗಳನ್ನು ಮುಖ್ಯವಾಗಿ ಗಮನಿಸಬೇಕು ಎಂದು ತಿಳಿಯುತ್ತದೆ. ಹಾಗೆ ಗ್ರಹಿಸಿದಾಗ ಮಾತ್ರ ೪೦೦ಕ್ಕೂ ಮಿಕ್ಕಿ ಕೃತಿ ರಚನೆ ಮಾಡಿದ ಮಹಿಳಾ ಅಭಿವ್ಯಕ್ತಿ, ಯಾಕೆ ತನ್ನನ್ನು ಈ ನೆಲೆಯಲ್ಲಿ ಪ್ರಕಟಿಸಿಕೊಂಡಿತು ಎನ್ನುವುದು ತಿಳಿಯುತ್ತದೆ. ಕಾದಂಬರಿ ಲೋಕದಲ್ಲಿ ಹೆಣ್ಣಿನ ಬದುಕಿನ ಸುಖಗಳನ್ನು ಪದೇ ಪದೇ ಒಂದೇ ತೆರನಾದ ಕಥಾನಕಗಳನ್ನು ಸೃಷ್ಟಿಸುತ್ತಾ ಹೇಳಿರುವುದರ ಹಿಂದೆಯೂ ಸೂಕ್ಷ್ಮವಾದ ಪ್ರತಿಭಟನೆಯ ನೆಲೆ ಇದೆ. ಪರಿಸ್ಥಿತಿಯ ಅರಿವಿದ್ದೂ ಅದರಿಂದ ಆಚೆ ಬರಲಾರದ ಅಸಹಾಯಕತೆ ಇದೆ. ಎಷ್ಟೇ ಘನವಾದ ವಸ್ತುವನ್ನು ಕೃತಿಯ ರಚನೆಗೆ ಆಯ್ದು ಕೊಂಡಿದ್ದರೂ, ಅವುಗಳಿಗೆ ಪರಿಹಾರ ಸೂಚಿಸುವುದರಲ್ಲಿ ಕಾಣುವ ಸೋಲಿನ ಹಿನ್ನೆಲೆಯಲ್ಲಿ ಮಹಿಳಾ ಬದುಕಿನ ಸ್ವರೂಪವಿದೆ. ತನ್ನ ಕಟು ವಾಸ್ತವ ತನ್ನನ್ನು ಶೂನ್ಯವಾಗಿಸಿದ್ದನ್ನು ಅರಿತೂ ಏನೂಮಾಡಲಾರದ ಕಟು ವಾಸ್ತವತೆ ಇದೆ.

ಮಹಿಳಾ ಸೃಜನತೆಯ ಈ ತೊಡಕುಗಳಿಗೆ ಕಾರಣ ಅವರು ತಮ್ಮ ಅಭಿವ್ಯಕ್ತಿಯನ್ನು ಪ್ರಕಟಿಸುವಾಗ ಆಯ್ದು ಕೊಳ್ಳುವ ಪರಿಕರಗಳಲ್ಲಿಯೂ ಇರುವುದನ್ನು ಈಗಾಗಲೇ ಗಮನಿಸಲಾಗಿದೆ. ಪುರುಷ ನಿರ್ದೇಶಿತವಾದ ಬದುಕಿನಲ್ಲಿ ವಸ್ತು, ತಂತ್ರ, ವಿನ್ಯಾಸ,

ಭಾಷೆಯ ಪರಿಕಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕಾದ ಬಹು ದೊಡ್ಡ ತೊಡಕು ಅವಳ ಅಭಿವ್ಯಕ್ತಿಗಿದೆ.

## ೫.೪ ಸಮೀಕ್ಷೆ

ಅಧೀನ ಬದುಕನ್ನು ಬದುಕುತ್ತಿರುವ ಈ ಸ್ಥಿತಿ ಕೇವಲ ಕಾದಂಬರಿಗಳಲ್ಲಿ ಮಾತ್ರ ಚಿತ್ರಿತವಾಗಿರುವುದೇ, ಸಬಲಳಲ್ಲದ ಮಹಿಳೆಯರನ್ನು ಸೃಷ್ಟಿಸಲಾಗದ್ದು ಬರಹಗಾರ್ತಿಯರ ವೈಯಕ್ತಿಕ ನೆಲೆಯ ಸೃಜನತೆಯ ಕೊರತೆಯೇ ಇಂಥಹ ಒಂದು ಭ್ರಮಾಲೋಕದ ನಿರ್ಮಾಣ ಅಗತ್ಯ ಮತ್ತು ಅನಿವಾರ್ಯವೆ, ಈಗಲೂ ಇಪ್ಪತ್ತೊಂದನೆಯ ಶತಮಾನದಲ್ಲಿಯೂ ಹೆಣ್ಣು ಇಂಥ ಪರಾಧೀನತೆಯ ಬದುಕನ್ನು ಬದುಕುವ ಅನಿವಾರ್ಯತೆಯಲ್ಲಿ ಇದ್ದಾಳೆಯೇ ಎಂಬೆಲ್ಲಾ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳಲು ಈ ಅಧ್ಯಯನದಲ್ಲಿ ಓದುಗರಿಗೆ, ಬರಹಗಾರ್ತಿಯರಿಗೆ, ಪ್ರಕಾಶಕರಿಗೆ, ಸಮೂಹ ಮಾಧ್ಯಮದಲ್ಲಿರುವವರಿಗೆ, ಪತ್ರಿಕಾ ಸಂಪಾದಕರಿಗೆ ಪ್ರಶ್ನಾವಳಿಗಳನ್ನು ತಯಾರಿಸಿ, ಸಂದರ್ಶನ ಮಾಡಲಾಗಿದೆ. ಈ ಸಂದರ್ಶನಗಳ ಉದ್ದೇಶ ಇಂದೂ ಜನಪ್ರಿಯ ಕಾದಂಬರಿಗಳನ್ನು ಬರೆಯುತ್ತಿರುವವರು ಯಾರು, ಅವು ಇಂದು ವಿಸ್ಮೃತಿಯ ಹಂತದಿಂದ ಆಚೆ ಬಂದು, ಅನುಕರಣೆಯ ಹಂತವನ್ನು ದಾಟಿ, ಅಸ್ಮಿತೆಯ ಶೋಧಕ್ಕೆ ತೊಡಗಿವೆಯಾ, ಮಹಿಳೆಯ ಬದುಕಿನ ಚಿತ್ರಣ ಮತ್ತು ವಾಸ್ತವ ಜಾಗೃತಿಯ ನೆಲೆಗೆ ತಲುಪಿವೆಯೇ, ಹಾಗೆ ದಾಟಿದ ಪ್ರಯತ್ನಗಳನ್ನೂ ಜನಪ್ರಿಯ ಅಂಥ ಗುರುತಿಸುತ್ತಾರೆಯೇ....... ಇತ್ಯಾದಿ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಪ್ರಯತ್ನವಾಗಿಯೇ ಪ್ರಶ್ನಾವಳಿಗಳನ್ನು ತಯಾರಿಸಲಾಗಿದೆ. ಪ್ರಶ್ನಾವಳಿಯಲ್ಲಿ ರಚಿತ ಮತ್ತು ಅರಚಿತ ಮಾದರಿಗಳನ್ನು ಅನುಸರಿಸಲಾಗಿದೆ. ರಚಿತ ಪ್ರಶ್ನಾವಳಿಯ ಮಾದರಿ ಮಹಿಳಾ ಸಾಹಿತ್ಯವನ್ನು, ಸಂಗತಿಗಳನ್ನು ಗಮನಿಸುವಾಗ ಹೆಚ್ಚು ಪ್ರಯೋಜನಕ್ಕೆ ಒದಗಿ ಬರುವುದಿಲ್ಲ. ಆದ್ದರಿಂದ ಅರಚಿತ ಪ್ರಶ್ನೆಗಳ ಮುಖಾಂತರ ಅನೇಕ ಸೂಕ್ಷ್ಮ ವಿವರಗಳನ್ನು ಗ್ರಹಿಸಿಕೊಳ್ಳಲಾಗಿದೆ.

ಬರಹಗಾರ್ತಿಯರನ್ನು ಪ್ರಶ್ನಾವಳಿಗಳ ಮೂಲಕ ಮಾತನಾಡಿಸಲು ತೊಡಗಿದಾಗ ಅವರು ತಮ್ಮನ್ನು ನಿಧಾನವಾಗಿಯೇ ಮಾತುಕತೆಯೊಳಕ್ಕೆ ತೊಡಗಿಸಿಕೊಂಡಿದ್ದು. ಸಂದರ್ಶನದ ಸಂದರ್ಭದಲ್ಲಿ ನಿಮ್ಮ ಓದು ಬರಹದ ಹಿನ್ನೆಲೆ ಏನು ಎಂಬುದಕ್ಕೆ ಉತ್ತರವಾಗಿ ತಮ್ಮ ಕುಟುಂಬದ ಪ್ರೋತ್ಸಾಹವನ್ನು ಕುರಿತು ಹೇಳಿದರು. ಕಾದಂಬರಿಗಳ ಜಗತ್ತು

ಕೌಟುಂಬಿಕ ಚೌಕಟ್ಟುಗಳಿಗೆ ಮೀಸಲಾಗಿದೆ. ಅದರಿಂದಾಚೆ ಹೋಗುವ ಪ್ರಯತ್ನ ಸಾಧ್ಯವಾಗಲಿಲ್ಲವೇ ಎಂಬುದಕ್ಕೆ ಉತ್ತರವಾಗಿ, ಅವರುಗಳು ಹೇಳಿದ್ದರ ಮಾತುಗಳ ಸಾರಾಂಶ ಇಲ್ಲಿದೆ.

ಹೆಣ್ಣುಮಕ್ಕಳಿಗೆ ಇಂದಿಗೂ ಒಂದಲ್ಲ ಒಂದು ತರಹದ ಅಡೆತಡೆಯ ನಿರ್ಬಂದದ ಬದುಕೇ ಇದೆ. ತಮ್ಮ ಕಾಲದಲ್ಲಿ ಅದು ಇನ್ನೂ ಹೆಚ್ಚಾಗಿತ್ತು ಎನ್ನುವುದನ್ನು ಹೇಳಿದರು. ಮನೆಗೆಲಸಗಳ ಒತ್ತಡದ ನಡುವೆ ಬರವಣಿಗೆ ಸಹಜವಾಗಿಯೇ ಕುಂಠಿತವಾಗುತ್ತದೆ ಎಂಬುದು ಇವರ ಅಭಿಪ್ರಾಯವೂ ಹೌದು. ಲೇಖ-ಲೋಕದಲ್ಲಿಯೂ ಎಷ್ಟೋ ಜನ ಲೇಖಕಿಯರು ಈ ಮಾತುಗಳನ್ನು ಹೇಳಿರುವುದನ್ನು ಗಮನಿಸಿದರೆ ಒಟ್ಟಾರೆ ಮಹಿಳಾ ಬರಹಗಾರ್ತಿಯರನ್ನು ಕಾಡಿದ ಸಮಸ್ಯೆಗಳೇ ಆಗಿರುವುದನ್ನು ಸೂಚಿಸುತ್ತವೆ. ಇಂದಿನ ಬರಹಗಾರ್ತಿಯರಾದ ಆರತಿ, ಸಿ.ಎನ್. ಮುಕ್ತಾ......... ಮುಂತಾದವರು ತಮ್ಮ ಮುನ್ನುಡಿಯ ಮಾತುಗಳಲ್ಲಿ ವ್ಯಕ್ತಪಡಿಸಿರುವದು ಪರಂಪರಾಗತ ಮೌಲ್ಯಗಳನ್ನೇ ಹಾಗಾಗಿಯೇ ಕಾಲದಿಂದ ಮಾತ್ರ ಆಧುನಿಕರಾದರೆ ನಿಜವಾದ ಅರ್ಥದಲ್ಲಿ ಮಹಿಳಾ ನೆಲೆಗಳನ್ನು ಹುಡುಕಿಕೊಳ್ಳಲು ಸಾಧ್ಯವಾಗುವುದಿಲ್ಲ. ಇಂದು ಸ್ತ್ರೀವಾದಿ ಅಧ್ಯಯನ ಮಹಿಳಾ ಬದುಕಿನಲ್ಲಿ ಬಹುದೊಡ್ಡ ಪ್ರಭಾವವನ್ನು ಬೀರುತ್ತಿರುವುದು ಹೌದಾದರೂ ಸಂದರ್ಶಿಸಿದ ಐದು ಜನ ಬರಹಗಾರ್ತಿಯರ ಮಾತುಗಳಲ್ಲಿ ಪಾರಂಪರಿಕ ಚಿಂತನೆಗಳೇ ನೆಲೆಸಿರುವುದನ್ನು ಗಮನಿಸಲಾಯಿತು. ಕಾದಂಬರಿಗಳ ಮುನ್ನುಡಿಯಲ್ಲಿ ಲೇಖಕಿಯರು ಹೇಳಿರುವ ಮಾತುಗಳು ಕೂಡಾ ಇಂಥ ಧೋರಣೆಗಳನ್ನು ಹೇಳುವುದರ ಜೊತೆಜೊತೆಗೆ ಅವರ ಸಾಮಾಜಿಕ ಸತ್ಯಗಳನ್ನು ಹೇಳುತ್ತವೆ. ಪದ್ಮ-ಶ್ರೀಧರರವರು ಬ್ರಾಹ್ಮಣ ಕುಟುಂಬದ ಪರಿಸರದಿಂದ ಬಂದವರು. ಇಂದು ಐವತ್ತು-ಅರ್ವತ್ತು ವರ್ಷಗಳಾದರೂ ನನ್ನಲ್ಲಿರುವ ಅನಿಸಿಕೆಗಳನ್ನು ಮುಕ್ತವಾಗಿ ಹೇಳಿಕೊಳ್ಳುವುದಕ್ಕೆ ಸಂಕೋಚಗಳು ಇರುವಾಗ ಹರೆಯದ ವಯಸ್ಸಿನಲ್ಲಿ ನಮ್ಮ ವಾತಾವರಣದಲ್ಲಿ ಅದೆಲ್ಲಾ ಸಾಧ್ಯವೇ ಇರಲಿಲ್ಲ ಎಂದರು. ಮುಂದುವರೆದು ಬಿಡುವು ಇದೆಯಾ ಎಂಬ ಪ್ರಶ್ನೆಗೆ ಉತ್ತರವಾಗಿ ಅಯ್ಯೋ ಹೆಂಗಸರಿಗೆ ಬಿಡುವು ಇರಲ್ಲ, ಮಾಡಿಕೋಬೇಕು ಎನ್ನುವ ಮಾತುಗಳನ್ನು ಆಡಿದರು. ಮೂವತ್ತೈದು ವರ್ಷದ 'ಇಂದಿರಾ' (ಆರು ಕಾದಂಬರಿ, ಅನೇಕ ಆಧ್ಯಾತ್ಮಿಕ ಪುಸ್ತಕಗಳನ್ನು ರಚಿಸಿದ್ದಾರೆ). ಅವರನ್ನು ಸಂದರ್ಶಿಸಿದಾಗ ಅವರು ವಿರಾಮ ಎಲ್ಲಿ? ಮಕ್ಕಳು ಚಿಕ್ಕವರು. ಬೆಳಗ್ಗೆ ಎದ್ದರೆ ಧಾವಂತ, ರಾತ್ರಿ ಲೇಟಾಗಿ ಮಲಗಿದರೆ ಬೆಳಗ್ಗೆ ಬೇಗ ಏಳಲಿಕ್ಕೆ ಆಗುವುದಿಲ್ಲ. ಮನೆಯಲ್ಲಿ

ಅತ್ತೆ-ಮಾವರ ಸೇವೆ, ಟೈಂ ಎಲ್ಲಿ ಇರುತ್ತೆ ಎನ್ನುವ ಪ್ರಶ್ನೆಯನ್ನೇ ಉತ್ತರವಾಗಿ ಕೊಟ್ಟರು. ನಿಮ್ಮ ಕೃತಿಗಳಿಗೆ ವಿಮರ್ಶಕರು ಯಾವ ರೀತಿ ಪ್ರತಿಕ್ರಿಯಿಸುತ್ತಾರೆ ಎಂದಾಗ, ಅವರುಗಳು ನಾವು ವಿಮರ್ಶೆಯನ್ನು ಗಮನಿಸುವುದೇ ಇಲ್ಲ. ಗಮನಿಸಿದರೂ ನಮ್ಮ ಬರವಣಿಗೆ ಅವರಿಗೆ ಅರ್ಥವಾಗಿಲ್ಲ ಎಂದುಕೊಂಡು ಬಿಡುತ್ತೇವೆ ಎಂದರು.

ಇದೇ ಸಂದರ್ಭದಲ್ಲಿ ತಮ್ಮ ಆತ್ಮಕತೆಗಳಲ್ಲಿ ಅನುಪಮಾ, ನೀಳಾದೇವಿ, ಪ್ರೇಮಾಭಟ್ ಮುಂತಾದ ಲೇಖಕಿಯರು ತಮ್ಮ ಬರಹಗಳಿಗೆ ವಿಮರ್ಶೆ ಪ್ರತಿಕ್ರಿಯಿಸಿದ ರೀತಿಯನ್ನು ಹೇಳುತ್ತಾರೆ. ನೀಳಾದೇವಿಯವರು ಲೇಖ-ಲೋಕದಲ್ಲಿ ಈ ಕುರಿತು ಹೇಳುತ್ತಾರೆ. "ನಾನು ಚಂಬಲ್ ಕಣಿವೆಯಲ್ಲಿದ್ದಾಗ ಬರೆದ ಕತೆಗಳು ಇಲ್ಲಿನ ಓದುಗರಿಗೆ ಕೃತಕವಾಗಿ; ಸಿನಿಮೀಯವಾಗಿ ಕಂಡಿರಬಹುದು. ಅದಕ್ಕೆ ಕಾರಣ ಬಹುಶಃ ಅವರು ಕಾಣದೇ ಇದ್ದ, ಆದರೆ ನಾನು ಅನುಭವಿಸಿ, ಕೇಳಿದ್ದ ಮೈ ನವಿರೇಳುಸುವ ಸನ್ನಿವೇಶಗಳಿಂದಿರ ಬಹುದು..... 'ಚಂಬಲ ಕಣಿವೆಯಲ್ಲಿ' ಕಸ್ತೂರಿಯಲ್ಲಿ ಕಥಾನಕ ಪ್ರಕಟವಾದಾಗ ಕೆಲವು ಜನರಿಗೆ ಅದು ಸಿನೆಮಾ ಅನುಕರಣೆ ಎನ್ನಿಸಿದ್ದರೆ ಅದು ಅವರ ಸೀಮಿತ ದೃಷ್ಟಿಯಷ್ಟೇ"[೨೮] ಎಂದು ಪ್ರತಿಕ್ರಿಯಿಸುತ್ತಾರೆ. ಅನುಪಮಾರವರು ಕೂಡಾ ತಮ್ಮ ಕೃತಿ 'ಕೊಳಚೆ ಕೊಂಪೆಯ ದಾನಿಗಳು, 'ಆಳ', 'ಮಾಧವಿ'ಗಳ ಬಗ್ಗೆ ಗಂಭೀರವಾಗಿ ಚರ್ಚೆ ನಡೆಯದಿರುವುದನ್ನು ಗಮನಿಸುತ್ತಾರೆ. ಪ್ರೇಮಾಭಟ್‌ರವರು 'ಲೇಖ-ಲೋಕ'ದಲ್ಲಿ ತಮ್ಮ 'ಕೃತಿ'ಯೊಂದು ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟಗೊಳ್ಳಬೇಕೆಂಬ ಆಶಯದಿಂದ ಕಳಿಸಿದಾಗ ಜಿ.ಬಿ. ಜೋಶಿಯವರ ಪ್ರತಿಕ್ರಿಯೆ ಅದಕ್ಕೆ ಹೀಗಿತ್ತೆಂದು ಬರೆಯುತ್ತಾರೆ. "............ ನಿಮ್ಮ ಪ್ರಸಿದ್ಧಿ - ಅಥವಾ ಪ್ರಕಟವಾದ ಕಾದಂಬರಿಗಳ ಸಾಹಿತ್ಯ ಗುಣ ಪರಿಚಯ ವಿಮರ್ಶಕ ವರ್ಗದಲ್ಲೂ ಆಗಬೇಕೆಂಬ ಇಚ್ಛೆಯಿಂದ ವಿಮರ್ಶಕರಲ್ಲಿರುವ ಪ್ರಚಲಿತ ಅಭಿಪ್ರಾಯವನ್ನು ತಿದ್ದಿಸುವ ಸವಾಲು ಕೊಡುವುದಕ್ಕಾಗಿಯೇ ಗುಪ್ತನಾಮದಲ್ಲಿ ಬರಲಿ ಎಂದು ಹೇಳಿದ್ದು ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟವಾಗುತ್ತದೆ ಎನ್ನುವುದರ ಶ್ರೇಯಸ್ಸನ್ನು ನೀವು ಅಪೇಕ್ಷಿಸುವಾಗ ಅದರ ಸಾಹಿತ್ಯದ ಗುಣದ ಬಗ್ಗೆ ಮುಕ್ಕಾಗದಂತೆ ವಿಮರ್ಶಕ ಲೋಕದಲ್ಲಿ ಬೆಲೆ ಕಟ್ಟಬೇಕೆಂಬ ಆಕಾಂಕ್ಷೆಯಿಂದ ನಿಮಗೆ ಗುಪ್ತನಾಮ ಇಟ್ಟುಕೊಳ್ಳಿ ಎಂದು ಹೇಳಿದ್ದು. ಇದರಲ್ಲಿ sentimental ಆಗುವ ಅವಶ್ಯಕತೆ ಏನೂ ಇಲ್ಲ"[೨೯] ಎಂದು ಪ್ರತಿಕ್ರಿಯಿಸಿದ ಜಿ.ಬಿ. ಜೋಶಿಯವರ ಮಾತುಗಳು ಮಹಿಳಾ ಸಾಹಿತ್ಯ ವಿಮರ್ಶಾ ಪ್ರಪಂಚದಲ್ಲಿ ತನ್ನನ್ನು ಗುರುತಿಸಿಕೊಳ್ಳಲು ಪಡಬೇಕಾದ ಪಾಡನ್ನು ಬಿಚ್ಚಿಡುತ್ತವೆ.

ಕಾದಂಬರಿಕಾರ್ತಿ ಹೆಚ್.ಜಿ. ರಾಧಾದೇವಿ ತಮ್ಮ 'ಬಂಗಾರದ ಕಿಡಿ' ಕಾದಂಬರಿಯ ಪಾತ್ರ ಚಂದ್ರಲೇಖಳ ಮುಖಾಂತರ ಜನಪ್ರಿಯ ಸಾಹಿತ್ಯವೆಂದರೆ 'ಅಡುಗೆ ಮನೆ ಸಾಹಿತ್ಯ' ರಂಜನೆಯ ಸಾಹಿತ್ಯ ಎಂದು ಹೀಗಳೆಯುವವರಿಗೆ ಉತ್ತರವೇನೋ ಎಂಬಂತೆ ಜನಪ್ರಿಯ ಮಾದರಿಯ ಕಾದಂಬರಿಗಳು ಓದುಗ ವರ್ಗಕ್ಕೆ ಕೊಡುವ ಸಮಾಧಾನ, ಪತ್ರಿಕೆಗಳಿಗೆ ಅದರಿಂದಾಗುವ ಲಾಭ ಈ ಕುರಿತಂತೆ ಮಾತನ್ನಾಡುತ್ತಾರೆ. ಅವುಗಳು ಆ ಮಾತುಗಳು ಅವರು ತಮ್ಮ ಕೃತಿಗಳಿಗೆ ವಿಮರ್ಶಕ ತೋರಿಸುತ್ತಿದ್ದ ಪ್ರತಿಕ್ರಿಯೆಗೆ ಉತ್ತರವಾಗಿ ಪಾತ್ರದ ಮೂಲಕ ಬಂದಿರುವುದನ್ನು ಗಮನಿಸಬೇಕು.

ಓದುಗರನ್ನು ಮಾತನಾಡಿಸಲು ತೊಡಗಿದಾಗ ಕಾದಂಬರಿಗಳನ್ನು ಯಾಕೆ ಓದ್ತೀರಾ ಅಂತ ಕೇಳಿದರೆ (೩೦ ಜನರನ್ನು ಸಂದರ್ಶಿಸಲಾಗಿದೆ) ಶೇಕಡಾ ೮೦ರಷ್ಟು ಜನ ಹೇಳಿದ್ದು 'ಟೈಂಪಾಸ್ ಮಾಡಕ್ಕೆ' ಅಂತ ಹೇಳಿದರು ಇಂಥ ಕಾದಂಬರಿಗಳನ್ನು ಓದೋದರಿಂದ ಮಜಾ ಸಿಕ್ಕುತ್ತೆ, ಮೈಂಡ್ ರಿಲೀಫ್ ಆಗುತ್ತೆ, ಆದ್ದರಿಂದ ಓದ್ತೀವಿ ಎಂದರು ಇನ್ನು ೨೦% ರಷ್ಟು ಜನ ತಿಳುವಳಿಕೆಗೆ ಓದ್ತೀವಿ. ಕೆಲವು ಕಾದಂಬರಿಗಳು ತುಂಬಾ ಮಾಹಿತಿಗಳನ್ನು ಒದಗಿಸುತ್ತವೆ. ಅದರಿಂದ ಜ್ಞಾನ ಸಿಕ್ಕುತ್ತೆ ಎಂದರು. ಅದರಲ್ಲಿ ಕೆಲವರು ನಮಗೆ ಭೈರಪ್ಪ, ತ್ರಿವೇಣಿ, ಇಂದಿರಾ.......... ಇಷ್ಟ. ಸಾಯಿಸುತೆ, ರಾಧಾದೇವಿ ಏನು ಅಷ್ಟು ಇಷ್ಟ ಇಲ್ಲ ಅಂದರು. ಹೆಚ್ಚಿನ ಜನರು ಜನಪ್ರಿಯತೆ ಕ್ರಮದಲ್ಲಿ ಕಾದಂಬರಿಕಾರ್ತಿಯರನ್ನು ಗುರುತಿಸಿ ಎಂದಾಗ ದೊರಕಿದ ಮಾಹಿತಿ ಸುಮಾರು ಹತ್ತು ಹದಿನೈದು ವರ್ಷಗಳ ಕಾಲ ಉಷಾ....... ಸಾಯಿಸುತೆ, 'ಎಚ್.ಜಿ. ರಾಧಾದೇವಿ ಒಂದು, ಎರಡು, ಮೂರನೆಯ ಸ್ಥಾನಗಳಲ್ಲಿರುವುದನ್ನು ಧೃಡಪಡಿಸಿದರು. ಈ ಪ್ರಶ್ನೆಯನ್ನು ಸರ್ಕ್ಯುಲೇಟಿಂಗ್ ಲೈಬ್ರರಿಯಲ್ಲಿ ಕೇಳಿ ತೆಗೆದುಕೊಂಡ ಅವರೂ ಇದೇ ಮಾಹಿತಿಯನ್ನು ನೀಡಿದರು. ಕಾದಂಬರಿಯಿಂದ ಅದರ ಓದಿನಿಂದ ನಿಮಗೆ ದಕ್ಕುವುದೇನು, ಯಾವ ರೀತಿಯಲ್ಲಿ ಅವುಗಳು ನಿಮ್ಮನ್ನು ತಲುಪುತ್ತವೆ ಎಂಬ ಪ್ರಶ್ನೆಗಳನ್ನು ಹಾಕಿದಾಗ ಅವರು ಹೇಳಿದ್ದು 'ಒಂಥರಾ ಸಮಾಧಾನ ಆಗುತ್ತೆ', ನಮ್ಮ ಮನೇಲೆ ಎಷ್ಟೋ ಕಷ್ಟಗಳಿರುತ್ತೆ ಅವುಗಳನ್ನು ಕೆಲವು ಸಾರಿ ಯಾರ ಹತ್ತಿರವೂ ಹೇಳಿಕೊಳ್ಳಲಿಕ್ಕೆ ಆಗಲ್ಲ. ನಮ್ಮ ಅಂಥದ್ದೆ ಕಷ್ಟ ಇರೋರಿಗೆ ಕಾದಂಬರಿಗಳಲ್ಲಿ ಸಿಕ್ಕ ಪರಿಹಾರಗಳಿಂದ ನಾವೂ ಸಮಾಧಾನ ಕಂಡಕೋತಿವಿ ಅಂದರು. ಸಂದರ್ಶಕರಲ್ಲಿ ಉದ್ಯೋಗಸ್ಥ ಮಹಿಳೆಯರು ಬಸ್ಸಲ್ಲಿ, ಆಫೀಸನಲ್ಲಿ ಬಿಡುವು ಇದ್ದಾಗ ಓದ್ತಿವಿ ಎಂದರು. ಒಬ್ಬ ಓದುಗರು........ 'ಕಾದಂಬರಿಗಳ ಓದಿನಿಂದ ನಂಗೆ ಮಾನಸಿಕ ತೃಪ್ತಿ ಸಿಕ್ಕುತ್ತೆ. ಸಮಸ್ಯೆಗಳನ್ನು ಎದುರಿಸುವ ಶಕ್ತಿ ಬರುತ್ತೆ ಅಂದರು.

ಕಾಲೇಜಿಗೆ ಹೋಗುವ ಹುಡುಗಿಯರನ್ನು ಮಾತನಾಡಿಸಿದಾಗ, ಒಬ್ಬ ಹುಡುಗಿ ಮಾಹಿತಿಯನ್ನು ಒದಗಿಸುವ ಕೃತಿಗಳು ಇಷ್ಟ, ಯಂಡಮೂರಿ ಕಾದಂಬರಿಗಳು ತುಂಬಾ ಡಿಫರೆಂಟಾಗಿ ಇರ್ತವೆ. ಅದಕ್ಕೆ ನಾನು ಓದನ್ನು ಎಂಜಾಯ್ ಮಾಡ್ತೀನಿ ಎಂದಳು. ರೋಮ್ಯಾಂಟಿಕ್, ಥ್ರಿಲ್ಲರ್, ಡಿಟೆಕ್ಟೀವ್ ಕತೆಗಳನ್ನು ಓದ್ತೀನಿ, ಫ್ಯಾಮಿಲಿ ಸ್ಟೋರಿಗಳು ಇಷ್ಟ ಆಗಲ್ಲ ಎಂಬ ಅಭಿಪ್ರಾಯ ಬಂತು. ಈಗ ಬೆಂಗಳೂರಿನಂಥ ಊರಲ್ಲಿ ಶಾಪಿಂಗ್ ತುಂಬಾ ಮಹತ್ವದ ಪಾತ್ರವಹಿಸಿದೆ. ನೀವು ಶಾಪಿಂಗ್, ಓದು ಯಾವುದನ್ನು ಆಯ್ಕೆ ಮಾಡಿಕೊಳ್ತೀರಿ ಅಂತ ಪ್ರಶ್ನೆ ಕೇಳಿದಾಗ ಎರಡೂ ಮಾಡ್ತೀನಿ. ಎರಡರಿಂದಲೂ ನಂಗೆ ಒತ್ತಡಗಳು ಕಡಿಮೆಯಾಗುತ್ತೆ ಎಂದು ಪ್ರತಿಕ್ರಿಯಿಸಿದಳು.

ಪ್ರಶ್ನಾವಳಿಗಳ ಮುಖಾಂತರ ಓದುಗರ ಪ್ರತಿಕ್ರಿಯೆ, ಪತ್ರಿಕೆಗಳಲ್ಲಿ ಕಾದಂಬರಿಗಳನ್ನು ಕುರಿತು ಬಂದಿರುವ ಪ್ರತಿಕ್ರಿಯೆ – ಎರಡನ್ನು ಗಮನಿಸಿದಾಗ ಜನಪ್ರಿಯ ಕಾದಂಬರಿಗಳ ರಚನೆ, ಓದುಗರ ಓದಿನ ಪ್ರಕ್ರಿಯೆಯ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದನ್ನು ಗಮನಿಸಬೇಕು. ತ್ರಿವೇಣಿ, ಉಷಾ, ಸಾಯಿಸುತೆ, ರಾಧಾದೇವಿ, ಆರತಿ– ಎಲ್ಲರೂ ಈ ರಚನೆ–ಓದಿನ ಪ್ರಕ್ರಿಯೆಯಲ್ಲಿ ತಮ್ಮನ್ನು ಗುರುತಿಸಿಕೊಂಡವರೇ. ಅಭಿವ್ಯಕ್ತಿ ಯಾವಾಗಲೂ ಸಹೃದಯನ ಪ್ರತಿಕ್ರಿಯೆಗಾಗಿ ಕಾಯುತ್ತಿರುತ್ತದೆ. ಅಂಥದ್ದೊಂದು ದೊಡ್ಡ ಬೆಂಬಲ ತಮಗಿದೆಯೆಂದು ಎಲ್ಲ ಲೇಖಕಿಯರು ಹೇಳಿದ್ದಾರೆ. ಪ್ರಶ್ನಾವಳಿಗಳ ಮೂಲಕ ನಡೆಸಿದ ಸಮೀಕ್ಷೆ ಕೂಡಾ ಇವರುಗಳು ಇಂದೂ ಮಧ್ಯಮವರ್ಗದ ಗೃಹಿಣಿಯರಿಗೆ, ಮಧ್ಯವಯಸ್ಸಿನ ಮಹಿಳೆಯರಿಗೆ ಪ್ರಿಯವಾಗಿಯೇ ಇದ್ದಾರೆ. ಆದರೆ ಇಂದು ಹರೆಯದ ಮಕ್ಕಳು ತಮ್ಮನ್ನು ಓದಿಗೆ ತೆರೆದುಕೊಳ್ಳುತ್ತಿರುವಾಗ ಅವರನ್ನು ಈ ಕಾದಂಬರಿಗಳು ಹೆಚ್ಚು ತಲುಪುತ್ತಿವೆಯೇ ಎಂಬ ಪ್ರಶ್ನೆ ಎದುರಾದಾಗ, ಕಂಡ ಅಂಶಗಳಿವು. ಶಾಪಿಂಗ್, ಟಿ.ವಿ., ಕಾಲೇಜು, ಮೊಬೈಲ್, ಸಿನೆಮಾ, ಕಂಪ್ಯೂಟರ್ ಎಂದೆಲ್ಲಾ ತಮ್ಮನ್ನು ಅನೇಕ ಅನುಭವಗಳಿಗೆ ವಿಸ್ತರಿಸಿಕೊಂಡ ಹೆಣ್ಣುಮಕ್ಕಳು ಇಂದೂ ಮನದಾಳದಲ್ಲಿ ಮೆಚ್ಚುವುದು, ಕೌಟುಂಬಿಕ ಚಿತ್ರಣವುಳ್ಳ ಧಾರಾವಾಹಿ, ಸಿನೆಮಾಗಳನ್ನೇ. ಮಾಧ್ಯಮ ಬದಲಾಗಿದೆ ಅಷ್ಟೇ. ಆಗ ಕಾದಂಬರಿಗಳು – ಈಗ ಧಾರಾವಾಹಿಗಳು. ಒಂದು ಓದುವ, ಇನ್ನೊಂದು ನೋಡುವ ಮಾಧ್ಯಮ ಅಷ್ಟೇ ಇಂದು ಈ ಧಾರಾವಾಹಿಗಳಲ್ಲಿ ಮಧ್ಯಮ ವಯಸ್ಸಿನವರೂ ತಲ್ಲೀನಗೊಳ್ಳುತ್ತಿರುವುದನ್ನು ಗಮನಿಸಿದಾಗ, ಅವುಗಳಲ್ಲೇ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿರುವುದನ್ನು ಗಮನಿಸಿದಾಗ ಮಹಿಳೆಯ ಅಧೀನ ಬದುಕಿನ ಪರ್ಯಾಯಗಳು ಇಂದು ತಮ್ಮ ಮಾಧ್ಯಮವನ್ನು

ಬದಲಾಯಿಸಿವೆ ಅಷ್ಟೇ, ಎಂಬ ಸತ್ಯ ಅರಿವಾಗುತ್ತದೆ. ಈ ಕುರಿತೇ ಸಮೂಹ ಮಾಧ್ಯಮಗಳಾದ ಸಿನೆಮಾ, ದೂರದರ್ಶನದಲ್ಲಿ ಕೆಲಸ ಮಾಡುತ್ತಿರುವ ಡಾ. ವಿಜಯಮ್ಮ ಮತ್ತು ಪಿ. ಚಂದ್ರಿಕಾ ಅವರನ್ನು ಸಂದರ್ಶಿಸಿದಾಗ ಅವರು ಅಭಿಪ್ರಾಯ ಸೂಚಿಸಿದ್ದು ಹೀಗೆ. ಜನಪ್ರಿಯ ಕಾದಂಬರಿಗಳು, ಸಿನೆಮಾಗಳು, ಧಾರಾವಾಹಿಗಳು ಬಹು ಸಮುದಾಯವನ್ನು ತಲುಪುತ್ತವೆ. ಈ ಎಲ್ಲ ಮಾಧ್ಯಮಗಳೂ ಪುರುಷನವೇ ಆಗಿರುವುದರಿಂದ ನಮಗೆ ತಕ್ಷಣವೇ ಯಾವ ಬದಲಾವಣೆಯನ್ನು ಮಾಡುವುದಕ್ಕಾಗುವುದಿಲ್ಲ. ಆದರೆ ಬದಲಾವಣೆ ಆಗೇ ಇಲ್ಲ ಅಂತಲೂ ಅಲ್ಲ. ಬದಲಾವಣೆಯ ಎಳೆಗಳನ್ನು ಖಂಡಿತಾ ಗುರುತಿಸಬಹುದು. ಚಂದ್ರಿಕಾರವರು ಇವತ್ತಿನ ಸಂದರ್ಭದ ಮಹಿಳಾ ಸೃಜನತೆಯ ನೆಲೆಗಳು ವಿಸ್ತರಿಸಿವೆ. ನಾವು ಸೃಜನತೆಯ ಬಗ್ಗೆ ಇರುವ ಪಾರಂಪರಿಕ ನಂಬಿಕೆಗಳನ್ನೇ ಪ್ರಶ್ನಿಸಬೇಕಾಗುತ್ತೆ. ಇಂದಿನ ಮಹಿಳಾ ಸೃಜನತೆ ಗದ್ದಲಗಳ ನಡುವೆಯೂ ಉಳಿಯುವ, ಬೆಳೆಯುವ ಹಟವನ್ನು ಬೆಳೆಸಿಕೊಳ್ಳಬೇಕಾಗಿದೆ ಎಂದು ತಮ್ಮ ಅಭಿಪ್ರಾಯಗಳನ್ನು ಹೇಳಿದರು. ವಿಜಯಮ್ಮ ಅವರು ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಗೆ ತನ್ನ ಅಸ್ತಿತ್ವ ಉಳಿಸಿಕೊಳ್ಳುವ ಅನಿವಾರ್ಯತೆ ಇದೆ. ಹಿಂದೆ ಸೀಮಿತ ವಲಯಗಳಲ್ಲಿ ತನ್ನನ್ನು ತೊಡಗಿಸಿಕೊಂಡ ಮಹಿಳೆ ಇಂದು ಎಲ್ಲ ಕ್ಷೇತ್ರಗಳಲ್ಲೂ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಆಕೆಗೆ ತನ್ನನ್ನು ಅಲ್ಲಿ ಗುರುತಿಸಿಕೊಳ್ಳಲು ಸಮಯಬೇಕು__... ಎಂದು ತಮ್ಮ ಅಭಿಪ್ರಾಯಗಳನ್ನು ಹೇಳಿದರು.

ಈ ಅಭಿಪ್ರಾಯಗಳು ಇಂದು ಮಹಿಳೆ ತನ್ನ ವೈಯಕ್ತಿಕ 'ಹೋರಾಟ, ಸ್ವಪ್ರಜ್ಞೆ' ಇವುಗಳ ಮೂಲಕ ತನ್ನ ಅಸ್ತಿತ್ವದ ಶೋಧವನ್ನು ಮಾಡಿಕೊಳ್ಳಲು ಸಾಧ್ಯ. ಆದರೆ ಬಹು ಸಮುದಾಯ ಇನ್ನೂ ಆ ಹಂತಗಳಿಗೆ ತನ್ನನ್ನು ತೆರೆದುಕೊಂಡಿಲ್ಲ. ಜನಪ್ರಿಯ ಕಲೆಗಳು, ಕಾದಂಬರಿಗಳು ಯಾರೊಬ್ಬರೂ ಫಲಾನುಭವಿಗಳಲ್ಲದೆ ಅದು ಉಳಿಯುವುದಕ್ಕೆ ಸಾಧ್ಯವೇ ಇಲ್ಲ. ಈಗಲೂ ಅಂಥದ್ದೊಂದು ರಚನೆ – ಓದಿನ ಪ್ರಕ್ರಿಯೆ ಇದೆ ಎಂದರೆ ಅದರರ್ಥ ಅಧೀನ ಬದುಕಿನಿಂದ ಹೊರಬರಲಾರದ ಅಸಹಾಯಕತೆ ಇಂದೂ ಇದೆ ಎನ್ನುವ ಅರ್ಥವೇ. ಮೇಲ್ನೋಟಕ್ಕೆ ಇದೊಂದು ಮನರಂಜಿಸುವ ಸಂಗತಿ ಎಂಬಂತೆ ಕಂಡರೂ ಆಳದಲ್ಲಿದು ಮಹಿಳಾ ಸಮುದಾಯದ ಮನಸ್ಥಿತಿಯ ಮೇಲೆ ಬೆಳಕು ಚಲ್ಲುತ್ತದೆ.

ರಚನೆ-ಓದಿನ ಪ್ರಕ್ರಿಯೆಯ ಕೊಂಡಿಯಾಗಿರುವ ಪ್ರಕಾಶಕರನ್ನು ಪ್ರಶ್ನಾವಳಿಗಳ ಮೂಲಕ ಮಾತನಾಡಿಸಲಾಯಿತು. ಸಪ್ತಗಿರಿ ಪ್ರಕಾಶನದ ಶ್ರೀನಿವಾಸ, ಗೀತಾ ಏಜನ್ಸೀಸ್‌ನ ಕೆ.ಆರ್. ಸುಂದರರಾಜು, ಹೇಮಂತ ಪ್ರಕಾಶನ ಮುಖ್ಯಸ್ಥರು, ಪ್ರಿಸಂ ಪುಸ್ತಕಾಲಯದ

ಮುಖ್ಯಸ್ಥರುಗಳನ್ನು ಮಾತಿಗೆಳೆದು ಜನಪ್ರಿಯ ಸಾಹಿತ್ಯದ ಪ್ರಕಟನೆ, ಪ್ರಸಾರ ಹೇಗೆ ಆಗುತ್ತವೆ, ನೀವು ಇವುಗಳನ್ನು ಜನಪ್ರಿಯ ಅಂತ ಹೇಗೆ ಗುರುತಿಸುತ್ತೀರಿ, ಎಂದೆಲ್ಲಾ ಪ್ರಶ್ನೆಗಳನ್ನು ಹಾಕಲಾಯಿತು. ಉತ್ತರವಾಗಿ ಅವರು ಹೇಳಿದ್ದು ಹೀಗೆ, "ಜನ ಯಾವುದನ್ನು ಹೆಚ್ಚು ಮೆಚ್ಚಿ ಓದ್ತಾರೋ ಅದೇ ಜನಪ್ರಿಯ. ಮಹಿಳಾ ಕಾದಂಬರಿಗಳನ್ನು ಜನ ಹೆಚ್ಚು ಕೊಂಡು ಓದ್ತಾ ಇದ್ದಿದ್ದರಿಂದ, ಸರ್ಕ್ಯುಲೇಟಿಂಗ್ ಲೈಬ್ರರಿಯವರು ಅವುಗಳನ್ನೇ ಬೇಡುತ್ತಿದ್ದುದ್ದರಿಂದ ತಾವು ಅವುಗಳನ್ನು ಪ್ರಕಟಿಸಿದೆವು ಎಂದರು. ಸಾಹಿತ್ಯ ಸೇವೆ ಮತ್ತು ಬಿಜನೆಸ್ ಎರಡೂ ಮುಖ್ಯವಾದ ನಮಗೆ ಪ್ರಸಾರವಾಗಬೇಕಾದ್ದು ಮುಖ್ಯವಾಗಿತ್ತು ಎಂದರು. ಮರುಮುದ್ರಣಗಳು ಕೃತಿಯ ಜನಪ್ರಿಯತೆಯನ್ನು ಹೇಳುತ್ತವೆ ಎಂದು ಸುಂದರರಾಜುರವರು ಸಾಯಿಸುತೆಯವರ ಕಾದಂಬರಿಗಳು ಸಾವಿರ ಪ್ರತಿಗಳ ಬದಲು ಐದು ಸಾವಿರ ಪ್ರತಿ ಹಾಕಿದರೂ ಹೋಗ್ತಾ ಇದ್ವು ಎಂದರು. ಕಾದಂಬರಿಗಳ ಸೈಜ್, ಮುಖಪುಟಗಳು ಜನಪ್ರಿಯತೆಯನ್ನು ಹೆಚ್ಚಿಸುತ್ತಿದ್ದ ಅಂಶಗಳು ಎಂದು ಗುರುತಿಸಿದರು. ಜನಪ್ರಿಯ ಕಾದಂಬರಿಗಳ ಬಗ್ಗೆ ಮಾತಾಡುತ್ತಾ ಸುಂದರರಾಜು ಅವರು ಹೆಣ್ಣುಮಕ್ಕಳದು ಏನಿದ್ರೂ ಲೈಟ್ ರಿಡಿಂಗ್. ಒಂದು ಒಳ್ಳೆ ಪಿಚ್ಚರ್ ಹೋಗಿ ಬಂದರೆ ಹೆಂಗೆ ಆರಾಮಾಗಿರುತ್ತೋ ಹಂಗೆ ಮನಸ್ಸಿಗೆ ಆರಾಮಾಗಿರೋದು, ತಲೆ ಬಿಸಿ ಆಗಲ್ಲ ಎಂದರು. ಸಪ್ತಗಿರಿ ಪ್ರಕಾಶನದ ಶ್ರೀನಿವಾಸರವರು "ಓದುಗರು ಸಾಮಾಜಿಕ ಕಾದಂಬರಿಗಳನ್ನು ಇಷ್ಟ ಪಡ್ತಾ ಇದ್ರು. ಹೆಣ್ಣುಮಕ್ಕಳು ಜಾಸ್ತಿ ಇನ್‌ವಾಲ್ವ್ ಆಗ್ತಾ ಇದ್ರು. ಹಿಂದೆ ಸಿಂಪಲ್ ರಿಡಿಂಗ್ ಕೇಳ್ತಾ ಇದ್ರು. ಇಂದು ಥ್ರಿಲ್ ಇರುವ ಕಾದಂಬರಿಗಳನ್ನು ಕೇಳ್ತಾರೆ. ಓದುಗರಿಗೆ ತಮ್ಮ ಸಮಸ್ಯೆಗಳಿಂದ ಒಂದಿಷ್ಟು ಬ್ರೇಕ್ ಬೇಕು ಅದನ್ನೆ ಇವು ಕೊಡ್ತವೆ. ಅದಕ್ಕೆ ಇವುಗಳಿಗೆ ಬೇಡಿಕೆ ಜಾಸ್ತಿ" ಎಂದು ತಮ್ಮ ಅಭಿಪ್ರಾಯ ಹೇಳಿದರು. ಪ್ರಿಸಂ ಪುಸ್ತಕಾಲಯದಲ್ಲಿ ಇಂದು ಜನ ಅದರಲ್ಲೂ ಯುವಜನತೆ ವೈಜ್ಞಾನಿಕ ಪುಸ್ತಕಗಳು, ಸೈಕಾಲಾಜಿ ಪುಸ್ತಕಗಳು, ಐತಿಹಾಸಿಕ ಘಟನೆಗಳನ್ನು ಹೇಳುವ ಪುಸ್ತಕ (ದಂಗೆಯ ದಿನಗಳು – ರವಿ ಬೆಳಗೆರೆ).......... ಇತ್ಯಾದಿ ಪುಸ್ತಕಗಳು ಬೇಡಿಕೆಯಲ್ಲಿವೆ ಎಂದರು. ಲೇಖಕಿಯರ ಪುಸ್ತಕಗಳ ಪ್ರಕಟನೆ, ಮಾರಾಟದ ಬಗ್ಗೆ ಕೇಳಿದಾಗ ನಾವು ಹೆಚ್ಚು ಕಾದಂಬರಿಗಳನ್ನು ಪ್ರಿಂಟ್ ಮಾಡಲ್ಲ. ಅಡುಗೆ ಸಾಹಿತ್ಯ. ವೈದ್ಯಕೀಯ ಸಾಹಿತ್ಯ ಇವುಗಳಿಗೆ ಸಂಬಂಧಿಸಿದ್ದನ್ನೇ ಪ್ರಿಂಟ್ ಮಾಡ್ತೀವಿ ಅಂದ್ರು. ಸಾಹಿತ್ಯ ಭಂಡಾರಕ್ಕೆ ಹೋದಾಗ ನಾವು ಪ್ರಕಟಿಸುವಾಗ ಆಯ್ಕೆ ಮಾಡಿ ಪ್ರಕಟಿಸುತ್ತೇವೆ ಎಂದು ಹೇಳಿ ಸುಮ್ಮನಾಗಿಬಿಟ್ಟರು.

ಮಂಗಳಾ ವಾರಪತ್ರಿಕೆಯ ಸಂಪಾದಕರು, ಮಲ್ಲಿಗೆ ಮಾಸಪತ್ರಿಕೆಯ ಶ್ರೀಧರಮೂರ್ತಿ, ಹಿಂದೆ ಸುಧಾ ಪತ್ರಿಕೆಯಲ್ಲಿ ಕೆಲಸ ಮಾಡಿದ ಎಂ.ಬಿ. ಸಿಂಗ್ ಇವರುಗಳನ್ನು ಸಂದರ್ಶಿಸಿದಾಗ ಎಲ್ಲರೂ ಜನಪ್ರಿಯ ಕಾದಂಬರಿಗಳ ಬಗ್ಗೆ, ಬರಹಗಾರ್ತಿಯರ ಬಗ್ಗೆ ಮಾತನಾಡಿದರು. ಎಂ.ಬಿ. ಸಿಂಗ್ ಅವರು, ದೊಡ್ಡ ಮೀನನ್ನು ಹಿಡಿಯೋಕೆ ಬೀಳಸಿದ ಸಣ್ಣ ಮೀನುಗಳು ಬರಹಗಾರ್ತಿಯರು ಎಂದರು. ಪತ್ರಿಕೆಯ ಪ್ರಸಾರಕ್ಕೆ, ಮನೆಯಲ್ಲಿದ್ದ ಮಹಿಳಯರನ್ನೇ ಗುರಿಯಾಗಿಟ್ಟುಕೊಂಡ ಪತ್ರಿಕೆಗಳು, ಧಾರಾವಾಹಿಗಳನ್ನು ಪ್ರಕಟಿಸಲು ಶುರು ಮಾಡಿದವು. ನಾವೂನೂ ಸುಧಾದಲ್ಲಿ ಉಷಾ, ವಿದ್ಯುಲತಾ, ಟಿ.ಕೆ. ರಾಮರಾವ್, ಇಂದಿರಾ........ ಮುಂತಾದವರ ಕಾದಂಬರಿಗಳನ್ನು ಪ್ರಕಟಿಸಿದೆವು ಅಂದರು. ಮಂಗಳಾ ಪತ್ರಿಕೆಯ ಸಂಪಾದಕರು ಬಹಳ ಉತ್ಸಾಹದಿಂದ ಈ ಧಾರಾವಾಹಿಗಳ ಪ್ರಸಾರ ಅದರಲ್ಲಿ ಮಹಿಳಾ ಲೇಖಕಿಯರ ಪಾತ್ರವನ್ನು ಕುರಿತು ಹೇಳಿದರು. ತಾವು, ಲೇಖಕಿಯರು ತಮ್ಮ ಬರಹದ ಮಟ್ಟವನ್ನು ಸುಧಾರಿಸಿಕೊಳ್ಳಲು ನಡೆಸುವ ಸಂವಾದ ಕಾರ್ಯಕ್ರಮಗಳನ್ನು ನಡೆಸುವ ಕುರಿತು ಹೇಳಿದರು. ಶ್ರೀಲತಾ, ಆರತಿ ವೆಂಕಟೇಶ್, ಸಿ.ಎನ್. ಮುಕ್ತಾ, ಮಲೆಯಾಳಂನ ಅನುವಾದಿತ ಕಾದಂಬರಿಗಳನ್ನು ಪ್ರಕಟಿಸಿದ್ದೇವೆ ಎಂದರು. ಶ್ರೀಧರ್‌ಮೂರ್ತಿ ಅವರು ಮಾತನಾಡ್ತಾ ಹಿಂದೆ 'ಕನಸುಗಾರಿಕೆ' ಎನ್ನುವುದು ಕೇವಲ ಮಧ್ಯಮವರ್ಗಕ್ಕೆ ಇತ್ತು. ಇಂದು ಮಧ್ಯಮವರ್ಗ ಅನ್ನುವುದು ಬರಿಯ ಆರ್ಥಿಕ ಸ್ಥಿತಿಗೆ ಸಂಬಂಧಿಸಿದ ಒಂದು ಮನಸ್ಥಿತಿ. ಆರ್ಥಿಕವಾಗಿ ಬದಲಾದರೂ ಮನಸ್ಥಿತಿ ಅದೇ ಉಳಿದು ಅವರ ಅಪೇಕ್ಷೆಯ ಲೋಕದ ಬಗ್ಗೆ ಅವರಿಗೇ ಗೊಂದಲ ಇದೆ ಎಂದರು. ಪದೇ ಪದೇ ಬರೆಯುವ ಓದುವ ಪ್ರಕ್ರಿಯೆಯ ಹಿಂದೆ ಸಾಂಸ್ಕೃತಿಕ ಕಾರಣ ಮತ್ತು ಕನಸುಗಾರಿಕೆಯ ಹೊರತಾಗಿ ಏನಾದರೂ ಇದೆ ಅಂತ ನಿಮಗೆ ಅನ್ನಿಸುತ್ತಾ ಎಂದು ಕೇಳಿದ ಪ್ರಶ್ನೆಗೆ ಹೀಗೆ ಉತ್ತರಿಸಿದರು. ಇವುಗಳನ್ನು ಹೆಚ್ಚಾಗಿ ಬರಿತಾ, ಓದ್ತಾ ಇದ್ದವರು ಹೆಂಗಸರು ಅನ್ನೋದೊಂದು ಸತ್ಯ. ಪುರುಷರು ಒಂದು ಬೌದ್ಧಿಕ ಅಹಂಕಾರದಲ್ಲೇ ಒಂದು ಪುಸ್ತಕಾನಾ ಓದೋರು. ಅವರು ಸಾಯಿಸುತೆನ ಓದ್ತಾ ಇದ್ರು. ಆದರೆ ಓದಲ್ಲ ಅಂತಲೇನೇ ಹೇಳೋರು. ಓದ್ತೀನಿ, ಅದು ನಂಗಿಷ್ಟ ಅಂತ ಹೇಳೋದು ಹೆಂಗಸರು ಮಾತ್ರ. ಮಹಿಳೆಯ ಓದಿನಲ್ಲಿ ಇಂಥ ಅಹಂಕಾರ ಇಲ್ಲ. ಈ ವ್ಯತ್ಯಾಸವನ್ನು ಗಮನಿಸಬೇಕು ಎಂದರು. ಮುಂದುವರೆದು ೮೦-೮೫ ನಂತರದ ದಶಕಗಳಲ್ಲಿ ಮಹಿಳಾ ಬರವಣಿಗೆ ಜನಪ್ರಿಯತೆಯ ಹೆಸರಿನಲ್ಲಿ ಅಸಂಯಮದ ಬರವಣಿಗೆಯಲ್ಲಿ ತೊಡಗಿದೆ. ವಿಜಯಾ ಚಂದ್ರಮೌಳೇಶ್ವರ, ವೇದಾ

ಮಂಜುನಾಥನ್, ಪ್ರೇಮಲತಾ ಸುಂದರೇಶ್ ಮುಂತಾದವರಲ್ಲಿ ಲೈಂಗಿಕ ವಿವರಗಳು ಢಾಳಾಗಿ ಬರ್‍ತಾ ಇವೆ ಎಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

### ೫.೫ ಉಪ ಸಂಹಾರ

ಮಹಿಳಾ ಸೃಜನತೆ, ಅಭಿವ್ಯಕ್ತಿ 'ಪುನರಾವರ್ತಿತ' ನೆಲೆಯದಾಗಿರುವುದಕ್ಕೆ ಮೂಲ ಕಾರಣ ಅವಳ ಅಧೀನ ಬದುಕು ಎಂಬುದನ್ನು ಇದುವರೆಗೂ ಸೃಜನಶೀಲ ಕೃತಿಗಳ ಮುಖಾಂತರ ಮತ್ತು ಪ್ರಶ್ನಾವಳಿಗಳಿಂದ ದೊರೆತ ನೇರ ಉತ್ತರಗಳಿಂದ ಅರಿತುಕೊಳ್ಳಲಾಗಿದೆ. ಮಹಿಳೆಯ ದುಡಿಮೆ, ವಿರಾಮ, ವಿರಾಮದಲ್ಲಿನ ಓದು, ಹಗಲುಗನಸು ಎಲ್ಲವೂ ಮಹಿಳಾ ಬದುಕಿನ ಸತ್ಯಗಳೇ, ಅವು ಅವಳ ಸಾಮಾಜಿಕ ಸತ್ಯಗಳು. ಅಭಿವ್ಯಕ್ತಿ ಮತ್ತು ಓದಿನಲ್ಲಿ ತಮ್ಮನ್ನು ತೊಡಗಿಸಿಕೊಂಡು ಭ್ರಮಾಲೋಕದಲ್ಲಿ ಇರುವ ಮನಸ್ಥಿತಿ ಹೆಣ್ಣಿನ ಸಹಜ ಸ್ಥಿತಿಯಲ್ಲ. 'ಇಲ್ಲಿಯ ಬಿಟ್ಟು ಅಲ್ಲಿಗೆ ಹೋದರೆ ಅಲ್ಲೆನುಂಡಿ' ಎಂಬ ತರಹದ್ದು. ಏಕೆಂದರೆ ಭ್ರಮಾಲೋಕದಲ್ಲೇ ವಿವರಿಸುವುದು ಬದುಕಲ್ಲ, ಅಂತಹವು ತಾತ್ಕಾಲಿಕ ತಾಣಗಳಷ್ಟೇ. ಅವು ಯಾರಿಗೂ ಅನಿವಾರ್ಯದ ಸ್ಥಿತಿಗಳಾಗಬಾರದು. ಹಾಗಾದರೆ ಅವೇ ಮುಂದೆ ಮಾನಸಿಕ ಏರುಪೇರುಗಳನ್ನು ಉಂಟು ಮಾಡುವ ಮನೋವೈಕಲ್ಯಕ್ಕೂ ಹಾದಿಯಾಗಬಹುದು. ಮಹಿಳೆಯರ ಮೌನ, ಹುಚ್ಚುಚ್ಚಾಗಿ ಆಡುವ ಮಾತುಗಳು, ಅತಿಯಾಗಿ ಕೆಲಸ ಮಾಡುವುದರ ಮುಖಾಂತರ ದೇಹ ದಂಡಿಸುವುದು, ಅಳುವುದು ಅವರ ಅಧೀನ ಬದುಕಿನಿಂದ ಹೊರಬರಲಾರದ ಅಸಹಾಯಕತೆಯಲ್ಲಿಯೇ ಮೂಡುತ್ತವೆ. ಹಾಗಾದರೆ ಇವುಗಳಲ್ಲಿ ಬದುಕುವುದೇ ನನ್ನ ಹಣೆಬರಹವೆಂತಲೋ, ಹೊಂದಿಕೊಂಡೋ, ಒಪ್ಪಿಕೊಂಡೋ ಮಹಿಳೆ ಬದುಕಬೇಕಿಲ್ಲ ಅಥವಾ ಇಂತಹ ಪರಿಸ್ಥಿತಿಯ ಕಾರಣದಿಂದಲೇ ಮಹಿಳಾ ಸಾಹಿತ್ಯ ಹೀಗಿದೆ, ಅದಕ್ಕೆ ರಿಯಾಯಿತಿ ತೋರಿಸಿ ಎನ್ನುವ ದೈನಾವಸ್ಥೆಯು ಇಲ್ಲಿಲ್ಲ. ಬದಲಿಗೆ ಮಹಿಳೆಯ ಸಾಮರ್ಥ್ಯ ಪುರುಷ ವಿಮರ್ಶೆ ಹೇಳಿದ್ದನ್ನೇ ಒಪ್ಪಿ ತನ್ನ ಸಾಹಿತ್ಯ ಕೀಳುದರ್ಜೆಯದು, ನನಗೆ ಅವರ ಹಾಗೇ ಬರೆಯುವ ಸಾಮರ್ಥ್ಯವಿಲ್ಲ ಅಂಥ ಕೈಚೆಲ್ಲಿ ಕೂಡುವ ಸಾಧ್ಯತೆಗಳಿಗೆ ಪರ್ಯಾಯವಾಗಿ ಇಂಥದ್ದೊಂದು ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹಿಳಾ ಸಮುದಾಯ ತಮ್ಮ ಕಷ್ಟ, ಸುಖ, ಸಾಧನೆ, ಸಾಮರ್ಥ್ಯಗಳನ್ನು ಆವರಿಸಿರುವ ಕಾರಣಗಳನ್ನು ಸ್ಪಷ್ಟಪಡಿಸಿಕೊಳ್ಳುವ ಮೂಲಕವೇ ನಮ್ಮ ಪ್ರಯತ್ನಗಳನ್ನು ಇನ್ನಷ್ಟು ಕ್ರೀಯಾಶೀಲವಾಗಿ ಅರ್ಥಪೂರ್ಣವಾಗಿಸಿಕೊಳ್ಳುವ ಚಿಂತನೆಗಳನ್ನು ನಾವೀಗ ಬೆಳಸಬೇಕಿದೆ ಎನ್ನುವ ಎಚ್.ಎಸ್. ಶ್ರೀಮತಿಯವರ ಮಾತುಗಳು ಸರಿಯಾಗಿವೆ.

ಸ್ತ್ರೀವಾದಿ ಚಿಂತನೆಯ ಅರಿವಿನೊಂದಿಗೆ ನಮ್ಮ ಸಮಸ್ಯೆಗಳ ಮೂಲ ನಮ್ಮ ಸಾಮಾಜಿಕ ಬದುಕಿನಲ್ಲಿವೆ ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಇಂತಹ ಅರಿವು ಮಹಿಳಾ ಬದುಕನ್ನು ಮುಂದಿನ ಹಂತಗಳಲ್ಲಿ ಕ್ರಿಯಾಶೀಲರಾಗಿ ತೊಡಗಿಸಿಕೊಳ್ಳಲು ಸಹಾಯಕವಾಗುತ್ತದೆ.

ಹೀಗೆ ನಮ್ಮ ಇಂದಿನ ಪರಿಸ್ಥಿತಿಗಳು ನಮಗೆ ನಿರಾಶಾಭಾವವನ್ನೇ ತಂದರೂ, ಅದರ ಮುಂದಿನ ಕ್ರಮವಾಗಿ ಮಹಿಳಾ ವಿಮೋಚನೆಯ ಸಾಧ್ಯತೆಗಳನ್ನು ನಾವು ಕಲ್ಪಿಸಬಹುದು. "ನಿಮ್ಮ ಸಾಮಾಜಿಕತೆಯೇ ನಿಮ್ಮ ದಿಗ್ಬಂಧನದ ಮೂಲ ಎಂಬುದು ಹೌದಾದರೆ, ಈ ಸಾಮಾಜಿಕತೆಯನ್ನು ಬದಲಿಸುವುದೇ ನಿಮ್ಮ ವಿಮೋಚನೆಯ ಮೊದಲ ಮತ್ತು ಅತ್ಯಂತಿಕ ಅಗತ್ಯ. ನಿಮ್ಮ ಸಮಯ ಮತ್ತು ಅವಕಾಶಗಳನ್ನು ಇಲ್ಲವಾಗಿಸುವ ಕುಟುಂಬದ ನಿಯಮಗಳೇ ನಿಮ್ಮ ಸೃಜನಶೀಲತೆಯ ಮುಖ್ಯ ಸವಾಲುಗಳಾದ್ದರಿಂದ ಈ ನಿಯಮಗಳನ್ನು ಬದಲಿಸಲು ಒತ್ತಾಯಿಸುವುದೇ ನಿಮ್ಮ ಮೊದಲ ಆದ್ಯತೆಯಾಗಬೇಕು. ಗೃಹಿಣಿಯ ದುಡಿಮೆಗೆ ಒಂದು ಚೌಕಟ್ಟು ಬೇಕು. ಈಗಿರುವಂತೆ ಅದು ಅನಿಯತವಾಗಿದ್ದಷ್ಟು ಕಾಲವೂ ಮಹಿಳೆಯರನ್ನು ಈ ಗೃಹಣಿತ್ವದ ಬಾಧೆ ಕಾಡುತ್ತಲೇ ಇರುತ್ತದೆ. ಮಹಿಳೆಯು ತನ್ನ ಖಾಸಗಿ ಸಮಯವನ್ನು ಸರಿಯಾಗಿ ನಿರ್ವಹಿಸಿಕೊಂಡು ಅದನ್ನು ಕುಟುಂಬದಲ್ಲಿ ಜಾರಿಗೊಳಿಸಬೇಕು ತನಗಾಗಿ ಒಂದಿಷ್ಟು ಖಾಸಗಿ ಅವಕಾಶಗಳನ್ನು ಕಲ್ಪಿಸಿಕೊಳ್ಳಬೇಕು. ಸಂಬಂಧಗಳನ್ನು ನಿರ್ವಹಿಸುವ ಪ್ರೀತಿ ಎಂಬುದು ಭೋಳೆತನದ ತ್ಯಾಗ, ಬಲಿದಾನಗಳಲ್ಲಿ ಪರ್ಯವಸಾನಗೊಳ್ಳಬೇಕಾದ ಅಗತ್ಯವಿಲ್ಲ ಎಂಬುದನ್ನು ಅರ್ಥಮಾಡಿಕೊಳ್ಳಬೇಕು".[೨೦] ಎನ್ನುವ ಸಿಮೋನ್ ದ ಬೋವಾಳ ಚಿಂತನೆಗಳು ಗಮನಾರ್ಹವಾದವು. ಇದೊಂದು ಆದರ್ಶದ ಸ್ಥಿತಿ ನಿಜ. ಇದು ನಿಜವಾಗುವುದಕ್ಕೆ ಮಹಿಳೆ ತನ್ನ ಸ್ವಪ್ರಯತ್ನದಿಂದ, ಇಂಥದ್ದೊಂದು ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳಬೇಕು. ನಮ್ಮ ಬುದ್ಧಿ ಭಾವಗಳನ್ನು ಶೂನ್ಯದ ನೆಲೆಯಿಂದ ಪ್ರಜ್ಞೆಯ ನೆಲೆಗೆ ತರುವ ಪ್ರಯತ್ನಮಾಡಬೇಕು. ನಮ್ಮ ಭಾವಗಳು ವ್ಯಕ್ತಗೊಳ್ಳುವಂಥ ಭಾಷೆಯೊಂದನ್ನು ಕಲ್ಪಿಸಿಕೊಳ್ಳಬೇಕು. ಈ ಹಾದಿಯಲ್ಲಿ ಅನೇಕ ಸ್ತ್ರೀವಾದಿ ಚಿಂತಕರ ಚಿಂತನೆಗಳು, ವಿಶ್ಲೇಷಣೆಗಳು ದಾರಿದೀಪಗಳಾಗುತ್ತವೆ. ಅದಕ್ಕೂ ಮುಂಚೆ ಸಿಮೋನ್ ದ ಬೋವಾ ತನ್ನ ಸೆಕೆಂಡ್ ಸೆಕ್ಸ್‌ನಲ್ಲಿ ರಿಂಬಾ ಹೇಳಿದ ಮಾತುಗಳನ್ನು ಉಲ್ಲೇಖಿಸುತ್ತಾಳೆ. ಈ ಸಂದರ್ಭದಲ್ಲಿ ಬಹಳ ಮುಖ್ಯವಾದ ಮಾತುಗಳು ಹೆಂಗಸಿನ ಅಪರಿಮಿತ ಕಟ್ಟುಪಾಡುಗಳು ಹರಿದು ಹೋಗಬೇಕು. ಆಕೆ ತನಗಾಗಿ, ತಾನಾಗಿ ಬದುಕಬೇಕು. ಗಂಡಸು ಈವರೆಗೆ ಈ

ಬಿಡುಗಡೆಯನ್ನೆ ವಿರೋಧಿಸಿದ್ದಾನೆ. ಆತ ಬಿಟ್ಟುಕೊಟ್ಟಾಗ ಆಕೆ ಕೂಡಾ ಕವಿಯಾಗುತ್ತಾಳೆ............... ಆಕೆಯ 'ವೈಚಾರಿಕ ಜಗತ್ತುಗಳು ಗಂಡಸಿನ ವೈಚಾರಿಕ ಜಗತ್ತಿಗಿಂತಾ ಭಿನ್ನವಾಗಿರುತ್ತದೋ, ಇಲ್ಲವೊ ತಿಳಿಯದು. ಏಕೆಂದರೆ, ಈಗ ಅವರಿರುವ ಸನ್ನಿವೇಶವನ್ನು ತಾನು ಪಡೆದಾಗ ಮಾತ್ರ ಅವಳು ಸಬಲಳಾಗುತ್ತಾಳೆ. ಬಿಡುಗಡೆ ಪಡೆಯುತ್ತಾಳೆ!![೨೧] ಹೀಗೆ ಬಿಡುಗಡೆಯ ಹಾದಿ ಇಂದಿಗೂ ಮಹಿಳೆಗೆ ಸುಲಭವಾಗಿ ದಕ್ಕುವಂಥದಲ್ಲ. ಇವೆಲ್ಲಕ್ಕೂ ಮುಂಚೆ ಆಕೆ ಅಧಿಕಾರಹೀನ ಸ್ಥಿತಿಯಿಂದ ಅಧಿಕಾರದ ಹಂತಕ್ಕೆ ಬರಬೇಕಾಗುತ್ತದೆ. ಆ ನಂತರವೇ ಸಮಾನತೆಯ ಹೊಸ ಸಾಧ್ಯತೆಗಳ ಹುಡುಕಾಟ ಸಾಧ್ಯ. ಅಂಥ ಒಂದು ಪ್ರಯತ್ನದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಹಂತಗಳಲ್ಲಿ ಕ್ರಿಯಾಶೀಲರಾಗುವ ಅಗತ್ಯವಿದೆ.

ಸ್ತ್ರೀವಾದಿ ಚಿಂತನೆ ಮಹಿಳಾ ಚಳುವಳಿಗಳ ಮೂಲಕ ಮತ್ತು ಸೈದ್ಧಾಂತಿಕ ಚಿಂತನೆಗಳ ರೂಪಿಸುವಿಕೆಯ ಮುಖಾಂತರ ಇಂದು ಕ್ರಿಯಾಶೀಲವಾಗಿದೆ. ಈ ಅಧ್ಯಯನದ ಉದ್ದೇಶ ಕೂಡಾ ಮಹಿಳಾ ಚಿಂತನೆಯ ಬಲಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ವೈಯಕ್ತಿಕ ನೆಲೆಯಲ್ಲಿ ಅಂಥ ಚಿಂತನೆಗಳನ್ನು ಬಲಗೊಳಿಸುವ ಪ್ರಯತ್ನವಾಗಿದೆ.



**ಅಡಿಟಿಪ್ಪಣಿಗಳು**

೧. ನಾಡು-ನುಡಿಯ ರೂಪಕ, ಆಧುನಿಕತೆ ಮತ್ತು ಕನ್ನಡ ಮೊದಲ ಕಾದಂಬರಿಗಳು, ಶಿವರಾಮ ಪಡಿಕ್ಕಲ್, ಪುಟ ೨೫

೨. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಎಂ.ಉಷಾ, ಪುಟ ೨೧

೩. ತ್ರಿವೇಣಿಯವರ ಕಾದಂಬರಿಗಳ ಮರು ಓದು, ಎಚ್.ಎಸ್. ಶ್ರೀಮತಿ, ಪುಟ ೩

೪. ತ್ರಿವೇಣಿಯವರ ಕಾದಂಬರಿಗಳ ಮರು ಓದು, ಎಚ್.ಎಸ್. ಶ್ರೀಮತಿ, ಪುಟ ೮

೫. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ) ಎಚ್.ಎಸ್. ಶ್ರೀಮತಿ, ಪುಟ ೨೮೭

೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ) ಎಚ್.ಎಸ್. ಶ್ರೀಮತಿ, ಪುಟ ೩೦೧

೭. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ) ಎಚ್.ಎಸ್. ಶ್ರೀಮತಿ, ಪುಟ ೩೯೪

೮. ಲೇಖ-ಲೋಕ, (ಸಂ) ವಿಜಯಾ ದಬ್ಬೆ, ಪುಟ ೧೦೭

೯. ತ್ರಿವೇಣಿಯವರ ಕಾದಂಬರಿಗಳ ಮರು ಓದು ಎಚ್.ಎಸ್. ಶ್ರೀಮತಿ, ಪುಟ ೧೪-೧೫

೧೦. ತ್ರಿವೇಣಿಯವರ ಕಾದಂಬರಿಗಳ ಮರು ಓದು ಎಚ್.ಎಎಸ್. ಶ್ರೀಮತಿ, ಪುಟ ೨೫–೨೬

೧೧. ತ್ರಿವೇಣಿಯವರ ಕಾದಂಬರಿಗಳ ಮರು ಓದು ಎಚ್.ಎಎಸ್. ಶ್ರೀಮತಿ, ಪುಟ ೨೭

೧೨. ತ್ರಿವೇಣಿ, (ಸಂ) ಎನ್. ಗಾಯತ್ರಿ, ಪುಟ ೫೭

೧೩. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೬೩–೬೪

14. A Literature of their own – Elaine showalter, page no 7

೧೫. ಪ್ರಭಾಮಣಿ – ಉಷಾನವರತ್ನರಾಮ್, ಪುಟ ೩೬

೧೬. ಜನಪ್ರಿಯ ಲೇಖಕಿ, ಹೆಚ್.ಜಿ. ರಾಧಾದೇವಿ (ಸಂ) ಶ್ರೀಲಕ್ಷ್ಮಿ, ಇಂದಿರಾ ಶಿವಣ್ಣ, ಪುಟ ೧೪೨–೧೪೩.

೧೭. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಲೇ, ಆಧುನಿಕ ಕನ್ನಡ ಮಹಿಳಾ ಕಥಾ ಸಾಹಿತ್ಯ, ಎಸ್.ವಿ. ಪ್ರಭಾವತಿ, ಪುಟ ೮೫–೮೬

೧೮. ಸಿಮೋನ್ ದ ಬೋವಾ, ದ ಸೆಕೆಂಡ್ ಸೆಕ್ಸ್ ಒಂದು ಕನ್ನಡ ಓದು, ಎಚ್.ಎಸ್. ಶ್ರೀಮತಿ, ಪುಟ ೯೪

೧೯. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರೀತಿ ಶುಭಚಂದ್ರ, ಪುಟ ೬೩–೬೪

೨೦. ಲೇಖ–ಲೋಕ – ೪, (ಸಂ) ಕೆ. ಉಷಾ ರೈ, ಕೆ.ಎಂ. ವಿಜಯಲಕ್ಷ್ಮಿ, ಪುಟ ೮೫

೨೧. ಲೇಖ–ಲೋಕ – ೪, (ಸಂ) ಕೆ. ಉಷಾ ರೈ, ಕೆ.ಎಂ. ವಿಜಯಲಕ್ಷ್ಮಿ, ಪುಟ ೮೪–೮೫

೨೨. ಲೇಖ–ಲೋಕ – ೪, (ಸಂ) ಕೆ. ಉಷಾ ರೈ, ಕೆ.ಎಂ. ವಿಜಯಲಕ್ಷ್ಮಿ, ಪುಟ ೪೪

೨೩. ಉಷಾ ನವರತ್ನರಾಮ್, ಪ್ರಭಾಮೂರ್ತಿ ಪುಟ – ೩೮

೨೪. ಜನಪ್ರಿಯ ಲೇಖಕಿ ಹೆಚ್.ಜಿ. ರಾಧಾದೇವಿ : (ಸಂ) ಶ್ರೀಲಕ್ಷ್ಮಿ, ಇಂದಿರಾ ಶಿವಣ್ಣ ಪುಟ ೧೦೨

೨೫. ಜನಪ್ರಿಯ ಲೇಖಕಿ ಹೆಚ್.ಜಿ. ರಾಧಾದೇವಿ : (ಸಂ) ಶ್ರೀಲಕ್ಷ್ಮಿ, ಇಂದಿರಾ ಶಿವಣ್ಣ ಪುಟ ೧೦೨–೧೦೩

೨೬. ಸಿಮೋನ್ ದ ಬೋವಾ, ದ ಸೆಕೆಂಡ್ ಸೆಕ್ಸ್, ಒಂದು ಕನ್ನಡ ಓದು, ಎಚ್.ಎಸ್. ಶ್ರೀಮತಿ, ಪುಟ ೩೭೬

೨೭. ಸಿಮೋನ್ ದ ಬೋವಾ, ದ ಸೆಕೆಂಡ್ ಸೆಕ್ಸ್, ಒಂದು ಕನ್ನಡ ಓದು, ಎಚ್.ಎಸ್. ಶ್ರೀಮತಿ, ಪುಟ ೫೬೨

೨೮. ಲೇಖ–ಲೋಕ –೨, (ಸಂ) ನಾಗಮಣಿ, ಎಸ್.ರಾವ್, ಪುಟ ೫೧

೨೯. ಲೇಖ–ಲೋಕ –೨, (ಸಂ) ನಾಗಮಣಿ, ಎಸ್.ರಾವ್, ಪುಟ ೭೩

೩೦. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂ) ಎಚ್.ಎಸ್. ಶ್ರೀಮತಿ, ಪುಟ –೩೩

೩೧. ಸಿಮೋನ್ ದ ಬೋವಾ, ದ ಸೆಕೆಂಡ್ ಸೆಕ್ಸ್, ಅನು: ಎಸ್.ಎಸ್. ಶ್ರೀಮತಿ ಪುಟ ೭೮೩

## ಅಧ್ಯಾಯ–ಆರು

## ಸಮಾರೋಪ

# ಅಧ್ಯಾಯ-ಆರು

## ಸಮಾರೋಪ

ಮಹಿಳಾ ಸಾಮರ್ಥ್ಯದ ಸಾಧ್ಯತೆಗಳು ಹಲವಾರು ನೆಲೆಗಳಲ್ಲಿ ಪ್ರಕಟಗೊಳ್ಳುತ್ತವೆ. ಅವಳ ಸಾಧ್ಯತೆಗಳು ಸ್ವಯಂಭೂ ವ್ಯಕ್ತಿತ್ವವನ್ನು ಅರಳಿಸಿಕೊಳ್ಳುವ ಸಾಧನವಾಗಿಲ್ಲ. ಮಹಿಳೆಯ ಸಾಮರ್ಥ್ಯ ಪ್ರಕಟಗೊಳ್ಳುವ ಸಂದರ್ಭದಲ್ಲೇ ಕೆಲವು ಸವಾಲುಗಳನ್ನು ಮತ್ತು ನಿರ್ಬಂಧಗಳನ್ನು ಎದುರಿಸಬೇಕಾಗುತ್ತದೆ. ಮಹಿಳಾ ಸಾಮರ್ಥ್ಯಕ್ಕೆ ಇರುವ ಈ ತೊಡಕುಗಳ ಮೂಲ ಅವಳಿಗೊದಗಿರುವ ಸಾಮಾಜೀಕರಣ ಪ್ರಕ್ರಿಯೆಯಲ್ಲಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮಹಿಳಾ ಸಾಹಿತ್ಯ 'ಕಾಣೆ'ಯಾಗುವ ಮತ್ತು 'ಅಪಮೌಲ್ಯ'ಕ್ಕೆ ಒಳಗಾಗುವ ಪ್ರಕ್ರಿಯೆಗಳೆರಡೂ ಸಮಾನವಾಗಿಯೇ ನಡೆದಿವೆ. ಪ್ರಸ್ತುತ ಅಧ್ಯಯನ ಅಪಮೌಲ್ಯಕ್ಕೊಳ-ಗಾದ ಮಹಿಳಾ ಕಾದಂಬರಿಗಳನ್ನು ಪರಿಕರವನ್ನಾಗಿ ಆಯ್ದುಕೊಂಡು ಮಹಿಳಾ ಸಾಮರ್ಥ್ಯದ ಸಾಧ್ಯತೆ ಮತ್ತು ಸವಾಲು ಎರಡನ್ನೂ ಹುಡುಕುವ ಪ್ರಯತ್ನವಾಗಿದೆ. ಕಾದಂಬರಿಗಳು ಏಕಕಾಲದಲ್ಲಿ ಕಲಾಕೃತಿಗಳಾಗಿ, ವೈಚಾರಿಕ ಆಕರಗಳಾಗಿ, ಅನುಭವ ಮತ್ತು ಭಾವನಾತ್ಮಕ ಲೋಕದ ಪ್ರತಿನಿಧಿಗಳಾಗಿ, ಸಾಮಾಜಿಕ ಅಧ್ಯಯನದ ಬಹು ಮುಖ್ಯ ಆಕರಗಳಾಗಿ ಬಹುಕೇಂದ್ರಿತ ನೆಲೆಯನ್ನು ಹೊಂದಿರುತ್ತವೆ. ಕಥನ ಕೌಶಲ್ಯವಿರುವ ಮಹಿಳೆ ಬಳಸಿಕೊಳ್ಳುವ ಸಾಹಿತ್ಯಿಕ ಸಾಧನವಾಗಿಯೂ ಕಾದಂಬರಿಯನ್ನು ಗ್ರಹಿಸಬಹುದಾದ ಕಾರಣ ಮಹಿಳಾ ಕಾದಂಬರಿಗಳನ್ನು ಅಧ್ಯಯನದ ಪರಿಕರಗಳನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ ಮತ್ತು ಪಾರಂಪರಿಕ ಚಿಂತನ ವಿಧಾನಕ್ಕಿಂತ ಭಿನ್ನವಾದ ಗ್ರಹಿಕೆಗಾಗಿ ಸ್ತ್ರೀವಾದಿ ಮರುಓದಿನ ಪರಿಕಲ್ಪನೆಯನ್ನು ಬಳಸಿಕೊಳ್ಳಲಾಗಿದೆ.

ಮಹಿಳೆಯ ಸಮಸ್ಯೆಗಳ ಕೇಂದ್ರ ಬಿಂದು ಅವಳಿಗೆ ಒದಗಿರುವ ಗೃಹಿಣಿತ್ವದ ಮೂಲದಲ್ಲಿದೆ. ಅವಳ ಬುದ್ಧಿ-ಭಾವಗಳನ್ನು ಇನ್ನಿಲ್ಲದಂತೆ ಆಕ್ರಮಿಸಿರುವ ಸಂಗತಿಯೇ ಅವಳ ಅಭಿವ್ಯಕ್ತಿ ಸಾಮರ್ಥ್ಯ ಮತ್ತು ಸೃಜನತೆಗಿರುವ ಬಹು ದೊಡ್ಡ ತೊಡಕು ಎಂಬ ಕಲ್ಪನೆಯನ್ನು ಅಧ್ಯಯನ ಹೊಂದಿತ್ತು. ಈ ಹುಡುಕಾಟದ ಹಾದಿಯಲ್ಲಿ ಮುಂದುವರೆದಾಗ 'ಗಂಭೀರ' ಸಾಹಿತ್ಯವನ್ನು ರಚಿಸುವ ಎಲ್ಲ ಸಾಧ್ಯತೆಗಳು ಮಹಿಳೆಗೆ ಸಾಧ್ಯವಿರುವಾಗಲೂ, ಹಾಗೆ ತನ್ನನ್ನು ತೊಡಗಿಸಿಕೊಳ್ಳಲು ಆಗದಿರುವ ಸಂಗತಿ ಅರಿವಾಯಿತು. ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಅಭಿವ್ಯಕ್ತಗೊಂಡ ಅವಳ ಸಾಹಿತ್ಯ ಪುನರಾವರ್ತಿತ ನೆಲೆಯದಾಗಿರುತ್ತದೆ. ಅಂಥ ಲೋಕದ

ಕಟ್ಟುವಿಕೆಯನ್ನು ಪಿತೃಪ್ರಧಾನ ವಿಮರ್ಶೆ 'ಜನಪ್ರಿಯ ಕಾದಂಬರಿ'ಗಳು ಎಂದು ಹೆಸರಿಸಿತು. ಅಂಥ ಜನಪ್ರಿಯ ಕಾದಂಬರಿಗಳ ರಚನೆ-ಓದುಗಳ ಪ್ರಕ್ರೀಯೆಯಲ್ಲಿ ನಿರಂತರವಾಗಿ ಮಹಿಳೆ ತೊಡಗಿಕೊಂಡಿರುವ ಸಂಗತಿ ಅವಳ ಮಾನಸಿಕ ಅಗತ್ಯದ ಸಂಗತಿಯೊಂದರ ಸೂಚಕವಾಗಿ ಬಳಕೆಯಾಗುತ್ತಿರುವುದನ್ನು ಅಧ್ಯಯನ ಗುರುತಿಸಿದೆ.

### ೩.೧ ಅಧ್ಯಯನದಲ್ಲಿನ ಮುಖ್ಯ ಪ್ರಶ್ನೆಗಳು

ಮಹಿಳಾ ಸಾಮರ್ಥ್ಯ ಪ್ರಕಟಗೊಂಡಾಗ 'ದ್ವಿತೀಯ ದರ್ಜೆ'ಯ ಸಾಹಿತ್ಯವೆಂದು ಏಕೆ ಪರಿಗಣಿತವಾಗುತ್ತದೆ. ಅಂಥ ರಚನೆಗಳನ್ನು ಮಾಡುವ ಮಹಿಳಾ ಸೃಜನತೆ ಮೂಲದಲ್ಲಿ ದ್ವಿತೀಯ ನೆಲೆಯದೇ, ಮಹಿಳಾ ಅಭಿವ್ಯಕ್ತಿಯನ್ನು ಜನಪ್ರಿಯ ಎಂದು ಕರೆದವರು ಯಾರು, ಯಾಕೆ, ಮಹಿಳೆಯ ಸಾಹಿತ್ಯಕ್ಕೆ ಭಿನ್ನ ಆಯಾಮಗಳೇ ಇಲ್ಲವೇ, ಮಹಿಳಾ ಅಭಿವ್ಯಕ್ತಿ ಪುನರಾವರ್ತಿತ ಲೋಕವನ್ನು ಪದೇ ಪದೇ ಕಟ್ಟುವುದ್ಯಾಕೆ, ಬಹುಸಂಖ್ಯಾತ ಮಹಿಳೆಯರು ಅದರಲ್ಲಿ ತನ್ಮಯತೆಯಿಂದ ತೊಡಗಿಸಿಕೊಳ್ಳುವ ಸಂಗತಿ ಏನು ಹೇಳುತ್ತದೆ........ ಹೀಗೆ ಪ್ರಶ್ನೆಗಳನ್ನು ಹಾಕಿಕೊಂಡು ಹೊರಟ ಅಧ್ಯಯನ ಸಂಶೋಧನೆಯುದ್ದಕ್ಕೂ ಅನೇಕ ಪ್ರಶ್ನೆಗಳಿಗೆ ಉತ್ತರಗಳನ್ನು ದೊರಕಿಸಿಕೊಂಡಿದೆ. 'ಜನಪ್ರಿಯ ಸಾಹಿತ್ಯ' ವಿಮರ್ಶೆಯ 'ಚಿಂತನಾ ನೆಲೆ' ರಾಜಕಾರಣದಲ್ಲಿ ಮೂಡಿ ಬಂದ ಇದು ಮಹಿಳೆಯರ ಸಾಹಿತ್ಯವನ್ನು ಗಂಭೀರವಾಗಿ ಗ್ರಹಿಸದೆ, ಒತ್ತಟ್ಟೆಗಿಟ್ಟ ತಂತ್ರ ಎನ್ನುವುದನ್ನು ಗಮನಿಸಿದೆ. ಈ ಸವಾಲನ್ನು ಮೀರಿ ಮಹಿಳೆಯ ಅಭಿವ್ಯಕ್ತಿ ಇಂದು ನಾನಾ ಸ್ತರಗಳಲ್ಲಿ ತನ್ನನ್ನು ಪ್ರಕಟಿಸಿಕೊಂಡಿರುವುದನ್ನು ಅಧ್ಯಯನ ಗಮನಿಸಿದೆ.

### ೩.೨ ಅಧ್ಯಯನದಲ್ಲಿ ಎದುರಿಸಿದ ತೊಡಕುಗಳು

'ಜನಪ್ರಿಯ' ಈ ಪದದ ವ್ಯಾಖ್ಯಾನ, ಆಧುನಿಕೋತ್ತರ ಸಂದರ್ಭದಲ್ಲಿ ಸಮೂಹಮಾಧ್ಯಮಗಳ ಒಡನಾಟದಲ್ಲಿ ಬಹಳ ವಿಸ್ತೃತವಾದ ನೆಲೆಯನ್ನು ಪಡೆದುಕೊಂಡ ಕಾರಣ, ಅದನ್ನು ಅಧ್ಯಯನದ ಮಿತಿಯಲ್ಲಿ ಗುರುತಿಸಿಕೊಳ್ಳುವುದು ತೊಡಕಿನದಾಗಿತ್ತು. ಸ್ತ್ರೀ-ಪುರುಷರಿಬ್ಬರು ಜನಪ್ರಿಯ ಕಾದಂಬರಿಗಳ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಅಧ್ಯಯನದ ಮಿತಿಯೊಳಗೆ ಈ ಚರ್ಚೆಯನ್ನು ತರುವುದು ತೊಡಕಿನದಾಗಿ ಬಂತು. ಪುರುಷರಿಂದ ರಚಿತವಾಗಿರುವ ಕಾದಂಬರಿಗಳಿಗೂ ಮಹಿಳೆ ಬರೆದಿರುವ ಸಾಹಿತ್ಯಗಳಿಗೂ ಇರುವ ವ್ಯತ್ಯಾಸಗಳನ್ನು ಗುರುತಿಸುವ ಸಂದರ್ಭದಲ್ಲೂ ಮತ್ತೇ ಈ ವಿಸ್ತಾರದ ಸಮಸ್ಯೆಯೇ ಎದುರಾಯಿತು.

## ೬.೩ ತೊಡಕುಗಳನ್ನು ನಿವಾರಿಸಿಕೊಂಡ ಬಗೆ

ಅಧ್ಯಯನದ ಚೌಕಟ್ಟಿನೊಳಗೆ ಪ್ರಾತಿನಿಧಿಕ ಕಾದಂಬರಿಕಾರ್ತಿಯರನ್ನು ಆಯ್ದುಕೊಳ್ಳುವುದರ ಮೂಲಕ ಅಧ್ಯಯನಕ್ಕೆ ಒದಗಿದ ವಿಸ್ತಾರದ ನೆಲೆಯನ್ನು ನಿವಾರಿಸಿಕೊಳ್ಳಲಾಯಿತು. ಕಾದಂಬರಿಗಳನ್ನು ವಸ್ತು, ತಂತ್ರ, ವಿನ್ಯಾಸ, ಭಾಷೆಗಳೆಂಬ ಪರಿಕರಗಳ ಮೂಲಕ ವಿಶ್ಲೇಷಿಸಿ ಜನಪ್ರಿಯ ಕಾದಂಬರಿಗಳು ಕೇವಲ ಸಾಹಿತ್ಯ ಕೃತಿಗಳಾಗಿ ಗ್ರಹಿಸದೆ, ಮಹಿಳಾ ಲೋಕವೊಂದನ್ನು ಅನಾವರಣಗೊಳಿಸುವ ಬಹು ಮುಖ್ಯ ಆಕರಗಳೆಂದು ಪರಿಗಣಿಸಲಾಯಿತು.

## ೬.೪ ಅಧ್ಯಯನದ ಫಲಿತಗಳು

ಗೃಹಿಣಿತ್ವ ಮಹಿಳೆಯ ಬದುಕನ್ನು ಹೊರೆ ಮಾಡಿದಾಗ ಅದರಿಂದ ಹೊರಬರುವ ತಾತ್ಕಾಲಿಕ ತಂಗುದಾಣಗಳಾಗುತ್ತವೆ, ಈ ಜನಪ್ರಿಯ ಕಾದಂಬರಿಗಳು. ಬಂಧನದ ಬದುಕು ಮಾನಸಿಕ ವೈಪರೀತ್ಯಕ್ಕೆ ಈಡಾಗದಂತೆ ಬಳಕೆಯಾಗುವ ಒಂದು ಸಣ್ಣ ತಾತ್ಕಾಲಿಕ ಪರಿಹಾರ ಇದು. ಇದು ಒಂದಿಷ್ಟು ಬಲ ಪಡೆದು ಮತ್ತೇ ವಾಸ್ತವ ಲೋಕಕ್ಕೆ ಬರಲು ಶಕ್ತಿ ನೀಡುವ ಸಂಗತಿಯೆಂದು ಕಂಡುಕೊಂಡಿದೆ.

ಮಹಿಳಾ ಸಾಮರ್ಥ್ಯದ ಸಾಧ್ಯತೆಗಳು ಹಲವು ನೆಲೆಗಳಲ್ಲಿ ಪ್ರಕಟಗೊಂಡಿರುವುದನ್ನು ಅಧ್ಯಯನ ಗುರುತಿಸಿದೆ ೧) ಗೃಹಿಣಿತ್ವದ ಬಂಧನದ ನಿರಾಕರಣೆ. (ವಿಧವೆ, ಕೌಟುಂಬಿಕ ನೆಲೆಯಿಂದಾಚೆ ಬಂದು ಸಾಮಾಜಿಕ ಲೋಕದಲ್ಲಿ ತಮ್ಮನ್ನು ಗುರುತಿಸಿಕೊಂಡರು) ೨) ಗೃಹಿಣಿತ್ವ, ಬರಹ ಎರಡನ್ನೂ ಆಯ್ಕೆ ಮಾಡಿಕೊಂಡ ನೆಲೆಯನ್ನು ತಮ್ಮದನ್ನಾಗಿಸಿಕೊಂಡವರು ಜನಪ್ರಿಯ ಕಾದಂಬರಿಗಳನ್ನು ರಚಿಸಿದರೆಂಬ ಸಂಗತಿಯನ್ನು ತಿಳಿದುಕೊಳ್ಳಲಾಗಿದೆ. ೩) ಗೃಹಿಣಿತ್ವದ ಹೊರೆಗಳ ಭಾರ ಕಡಿಮೆಯಾಗಿ ಮಧ್ಯವಯಸ್ಸಿಗೆ ಬರಹವನ್ನು ಪ್ರಾರಂಭಿಸಿ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಸಂದರ್ಭವನ್ನು ಗುರುತಿಸಿಕೊಳ್ಳಲಾಗಿದೆ.

ಜನಪ್ರಿಯ ಕಾದಂಬರಿಗಳು ಯಾಕೆ ಹಾಗಿವೆ ಎಂಬುದನ್ನು ಅರ್ಥ ಮಾಡಿಕೊಳ್ಳುವಲ್ಲಿ ಅಧ್ಯಯನ ಸಫಲವಾಗಿದೆ. ಗೃಹಿಣಿತ್ವದ ಹೊರೆಯಿಂದಾಚೆ ಬರಲಾರದ ಬಹು ಮಹಿಳಾ ಸಮುದಾಯದ ಸೃಜನಶೀಲ ಪ್ರಯತ್ನವಾಗಿ ಅದು ಅಸ್ತಿತ್ವದಲ್ಲಿದೆ ಎಂಬುದನ್ನು ಗುರುತಿಸಿಕೊಳ್ಳಲಾಗಿದೆ. ಜೊತೆಗೆ ವೈಯಕ್ತಿಕವಾದ ಪ್ರಯತ್ನ ಮತ್ತು ಬದಲಾದ ಸಾಮಾಜಿಕ ಪರಿಸರದಲ್ಲಿ ಮಹಿಳಾ ಸಾಮರ್ಥ್ಯದ ವಿವಿಧ ಆಯಾಮಗಳು ದೊರಕಲು ಸಾಧ್ಯ

ಎಂಬುದನ್ನು ಗುರುತಿಸಿದೆ. ಮಹಿಳಾ ಸಾಮರ್ಥ್ಯ ಇತ್ಯಾತ್ಮಕವಾದಾಗ ಅವಳ ವ್ಯಕ್ತಿತ್ವದ ಶೋಧಕ್ಕೆ ತೊಡಗುವುದು ಸಾಧ್ಯವಾಗುತ್ತದೆ. ಸಾಧ್ಯ ಆಗದೆ ಇರುವಾಗ ಅವಳ ಬದುಕು ಬಂಧನಕ್ಕೆ ಒಳಪಟ್ಟು ತನ್ನದಲ್ಲದ ಲೋಕವೊಂದರ ನಿರ್ಮಾಣದಲ್ಲಿ ಮತ್ತು ವಿಹರಿಸುವಿಕೆಯಲ್ಲಿ ತೊಡಗಿರುತ್ತದೆ. ಈ ಕಾರಣಗಳಿಂದಲೇ ಜನಪ್ರಿಯ ಕಾದಂಬರಿಗಳು ಮಹಿಳೆಯ ಬರಹದ ಹಂತವನ್ನು ಗುರುತಿಸಿಕೊಳ್ಳುವಲ್ಲಿ ಮುಖ್ಯವಾಗುತ್ತವೆ. ಇದರ ಜೊತೆಗೆ ಪಿತೃಪ್ರಧಾನ ಸಾಹಿತ್ಯ ವಿಮರ್ಶೆ ಜನಪ್ರಿಯ ಸಾಹಿತ್ಯ ಅದರಲ್ಲಿ ಚಿಂಬಿತವಾಗಿರುವ ಲೋಕವನ್ನು ದ್ವಿತೀಯ ದರ್ಜೆಯದು ಎಂದು ಗುರುತಿಸಿರುವುದರ ಹಿನ್ನೆಲೆಯ ಶ್ರೇಷ್ಠತೆಯ ರಾಜಕಾರಣವನ್ನು ಅರ್ಥೈಸಿಕೊಳ್ಳಲಾಗಿದೆ.

**೬.೫ ಮುಂದಿನ ಸಾಧ್ಯತೆಗಳು**

ಇಂದು ಸ್ತ್ರೀವಾದಿ ಚಿಂತನೆಗಳು ಕ್ರಿಯಾಶೀಲ ಹೋರಾಟ ಮತ್ತು ಸೈದ್ಧಾಂತಿಕ ಚಿಂತನೆಗಳ ಮೂಲಕ ತನ್ನನ್ನು ಗಟ್ಟಿಗೊಳಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನ ಮಹಿಳಾ ಸಾಹಿತ್ಯದ ಅಲಕ್ಷಿತ ಪಠ್ಯಗಳನ್ನು ಪರಿಕರವನ್ನಾಗಿ ಆಯ್ಕೆಮಾಡಿ ಕೊಂಡು ಅಧ್ಯಯನ ಮಾಡುವ ಸಾಧ್ಯತೆಗಳತ್ತ ಕೈತೋರಿಸುತ್ತದೆ. ಬಹು ಮಹಿಳಾ ಸಮುದಾಯದಲ್ಲಾಗುವ ಸಣ್ಣ ಸಂಚಲನೆ ಕೂಡ ಭವಿಷ್ಯದ ಬದಲಾವಣೆಗೆ ಕಾರಣವಾಗುವ ಸಾಧ್ಯತೆಗಳಿವೆ. 'ಜನಪ್ರಿಯ ಸಾಹಿತ್ಯ' ಎಂದು ಅಲಕ್ಷಿಸಿದ ಸಾಹಿತ್ಯ ಮಹಿಳಾ ಲೋಕವನ್ನು ದರ್ಶಿಸುವ ಸಾಧನವಾದ ಹಾಗೇ, ಮಹಿಳೆಯ ಬದುಕಿನ ಇನ್ನಿತರ ಸಂಗತಿಗಳು ಅಧ್ಯಯನಕ್ಕೆ ಆಕರಗಳಾಗಬಹುದು. ಅಲ್ಲದೆ ಆ ಮೂಲಕ ಮಹಿಳಾ ಸಾಹಿತ್ಯ ತನ್ನದೇ, ಆದ ಹೊಸ ವಿಧಿ ವಿಧಾನಗಳನ್ನು ರೂಪಿಸಿಕೊಳ್ಳುವ ಸಾಧ್ಯತೆಯ ಸೂಚನೆ ಕೂಡಾ ಈ ಅಧ್ಯಯನದಲ್ಲಿದೆ. ಹೀಗೆ ಈ ಅಧ್ಯಯನ ಮಹಿಳಾ ಸಾಹಿತ್ಯ ತನ್ನ ಸೃಜನತೆಯ ಸಂದರ್ಭದಲ್ಲಿ ಎದುರಿಸುವ ತೊಡಕು, ನಿರ್ಬಂಧಗಳನ್ನು ಗುರುತಿಸುವುದರ ಮೂಲಕ ಮಹಿಳಾ ಸಾಹಿತ್ಯ ತನಗೆ ಬಹುದೊಡ್ಡ ತೊಡಕಾಗಿರುವ ಗೃಹಿಣಿತ್ವವನ್ನು ನಿವಾರಿಸಿಕೊಳ್ಳುವ ಪ್ರಯತ್ನ ಅವಳನ್ನು ಅಧಿಕಾರಹೀನ ಸ್ಥಿತಿಯಿಂದ ಅಧಿಕಾರದ ನೆಲೆಯಲ್ಲಿ ತಂದು ನಿಲ್ಲಿಸುತ್ತದೆ. ಆ ಹಾದಿಯಲ್ಲಿ ಪ್ರಸ್ತುತ ಅಧ್ಯಯನ ಮಹಿಳಾ ಬದುಕಿನ ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳುವ ಮುಖ್ಯ ಪರಿಕರವಾಗಿ ಕೆಲಸ ಮಾಡಿದೆ ಎಂಬ ನಂಬಿಕೆ ಈ ಅಧ್ಯಯನಕ್ಕಿದೆ.



## ಅನುಬಂಧಗಳು

## ಅನುಬಂಧ – ೧

## ಅಧ್ಯಯನದಲ್ಲಿ ಬಳಕೆಗೊಂಡ ಕಾದಂಬರಿಕಾರ್ತಿಯರ ಕಾದಂಬರಿಗಳು

**ತ್ರಿವೇಣಿ**

- ಹೂವು–ಹಣ್ಣು
- ಅಪಸ್ವರ
- ಸೋತು ಗೆದ್ದವಳು
- ಬೆಕ್ಕಿನ ಕಣ್ಣು
- ದೂರದ ಬೆಟ್ಟ
- ಕೀಲುಗೊಂಬೆ
- ಮೊದಲ ಹೆಜ್ಜೆ
- ಅಪಜಯ
- ಹೃದಯ ಗೀತೆ
- ಮುಚ್ಚಿದ ಬಾಗಿಲು
- ಕಂಕಣ
- ಬೆಳ್ಳಿಮೋಡ
- ಮುಕ್ತಿ
- ಬಾನು ಬೆಳಗಿತು
- ಅವಳ ಮನೆ
- ತಾವರೆ ಕೊಳ
- ವಸಂತ ಗಾನ
- ಕಾಶೀಯಾತ್ರೆ
- ಶರಪಂಜರ
- ಹಣ್ಣೆಲೆ ಚಿಗುರಿದಾಗ
- ಅವಳ ಮಗಳು

## ಉಷಾ ನವರತ್ನರಾಮ್

ನನ್ನ ಮರಿ। ಮುದ್ದು ಮರಿ॥
ಪ್ರಗತಿಯ ಪಥದಲ್ಲಿ
ನಿನ್ನೆ ನಿನ್ನೆಗೆ ನಾಳೆ ನಾಳೆಗೆ
ಇರುಳು ಕಂಡು ಭಾವಿ+ಬಲಿಪೀಠ
ತವ ಸುಪ್ರಭಾತ
ಸ್ಫೋಟ
ಕ್ಷಮೆಯಿರಲಿ ತಂದೆ
ಮಕ್ಕಳಿರಲವ್ವ ಮನೆ ತುಂಬಾ
ಗುಪ್ತಗಾಮಿನಿ
ಮೊದಲು ಮಾನವನಾಗು
ಅಭಿನಯ (ಸಣ್ಣ ಕತೆಗಳ ಸಂಕಲನ)
ನೀನೇ ಅನಾಥ ಬಂಧು
ಮನವೆಂಬ ಮರ್ಕಟ
ಇರುಳು ಹಗಲು
ಮದನಿಕಾ
ಮಾಮರ ಕೋಗಿಲೆ
ಕಂಡು ಕಂಡು ನೀ ಎನ್ನ
ಕಿಚ್ಚು
ವಿಭಜನೆ
ಕರೆದರೆ ಬರಬಾರದೆ
ಕತೆ ಹೇಳುವೆ
ಪ್ರಗತಿಯ ಪಥದಲ್ಲಿ
ನಿಕ್ಷೇಪ
ಬದುಕು
ಬಂಧನ

ಕರೆಗಂಟೆ
ವಾರ್ಡ್ ನಂ.೫
ಪ್ರತೀಕಾರ
ಮರೆವು
ದಾರಿ ಯಾವುದಯ್ಯಾ
ಹಕ್ಕಿ ಹಾರುತಿದೆ.
ಕೃಷ್ಣಾ ನೀ ಬೇಗನೆ ಬಾರೋ
ನಮ್ಮ ಮನೆ ಬೆಳಕು
ದೋಣಿಸಾಗಲಿ ಮುಂದೆ ಹೋಗಲಿ
ಬದುಕು-ಬಂಗಾರ+ಎದುರು ಅಲೆಗಳು
ಬಾಳೊಂದು ಬಂಧನ
ಒಲವಿನ ಬದುಕು
ಆಸೆಗಳು ನೂರಾರು
ಗೂಡು ಬಿಟ್ಟ ಹಕ್ಕಿ
ಇಲ್ಲೇ ಸ್ವರ್ಗ
ಹರಿದ ಹೊನಲು
ಭಲೆ ಹುಡುಗಿ
ಅತಿಕ್ರಮಣ
ಆಂದೋಲನ
ಆಶ್ವಾಸನ
ಹೊಸರಾಗ
ಎಲ್ಲಾದರೂ ಸುಖವಾಗಿರು
ಹ್ಯಾಪಿ ಬರ್ತಡೆ
ಆಶೆಗಳು ನೂರಾರು
ಬೆಳ್ಳತೆರೆ

ನಿನ್ನೊಲುಮೆ ನನಗಿರಲಿ

ನೀ ಮುಡಿದಾ ಮಲ್ಲಿಗೆ

ಕರುಣಾಳು ಬಾ ಬೆಳಕೆ

ಬಯಕೆಯ ಬಲೆಯಲ್ಲಿ

ಹೊಟ್ಟೆಗಾಗಿ ಗೇಣುಬಟ್ಟೆಗಾಗಿ

ಇದು ಗೊಂಬೆ ಆಟವಯ್ಯಾ

ನಾಳೆಯು ಬರಲಿ

ಹೃದಯ ಮಿಲನ

ಹಂಸಧ್ವನಿ

ಎಂದೆಂದೂ

ಆಸರೆ

ಭಿನ್ನಹಕೆ

ಮತ್ತೆ ಮಡಿಲಗೆ

ಕೇಳು ನನ್ನ ಕಥೆ

ಒಳಗೆ ಬಾ, ಅತಿಥಿ

ಕೊನೆಯ ರಾತ್ರಿ

ಯೌವ್ವನದ ಹೊನಲಲ್ಲಿ

ಒಂದು ದಿನ ರಾತ್ರಿಯಲಿ

ಉಯಿಲು

ಹೊಂಬಿಸಿಲು

ಹೃದಯ ಮಿಲನ

ಅವಲಂಬನ

ಪ್ರೀತಿಸಿ ನೋಡು

ಮೂರು ಹೆಜ್ಜೆ

ಬೆಳಕಿನೆಡೆಗೆ

ಶುಭ ಹಾರೈಕೆ

ಕೈ ಹಿಡಿದು ನಡೆಸೆನ್ನನು

ಹರಸು ಬಾ ನನ್ನನು

ಬಾಳೊಂದು ಬಂಧನ

ಸಮರ್ಪಣೆ

ಹೊಸ ಬಾಳಿಗೆ ನೀ ಜೊತೆಯಾದೆ

ಮೂಡಿ ಬಂದ ಬೆಳಕು

ನಾನಾರಿಗಾದೆಯೋ

ಒಂದು ಸೂರು ಬಾಳು ನೂರು

ಆಲಾಪನಾ

ಕೇಳುನನ್ನ ಕಥೆಯ

ತನುವು ನಿನ್ನದು ಮನವು ನಿನ್ನದು

**ಸಾಯಿಸುತೆ**

ಮಿಂಚು
ಹೊಂಬೆಳಕು
ವಿವಾಹ ಬಂಧನ
ವಿಧಿವಂಚಿತೆ
ವಸುಂಧರ
ಕರಗಿದ ಕಾರ್ಮೋಡ
ಬಾಡದ ಹೂ
ಶುಭಮಿಲನ
ಗಿರಿಧರ
ಮಧುರ ಗಾನ
ಡಾ. ವಸುಧಾ
ಮಮತೆಯ ಸಂಕೋಲೆ
ಹೃದಯರಾಗ
ಸಪ್ತಪದಿ
ಜೀವನಸಂಧ್ಯಾ
ನಾಟ್ಯ ಸುಧಾ
ಮಾನಸ ವೀಣಾ
ಆರಾಧಿತೆ
ಗಂಧರ್ವಗಿರಿ
ನಿಶೆಯಿಂದ ಉಷೆಗೆ
ಸುಮಧುರ ಭಾರತಿ
ಮಂಗಳ ದೀಪ
ಸ್ವರ್ಣ ಮಂದರಿ
ಶ್ವೇತ ಗುಲಾಬಿ
ಚೈತ್ರದ ಕೋಗಿಲೆ
ಮಂದಾರ ಕುಸುಮ
ಪ್ರೇಮ ಸಾಫಲ್ಯ
ವಸಂತದ ಚಿಗುರು
ಅನುಬಂಧ
ಇಬ್ಬನಿ ಕರಗಿತು
ಅಮೃತ ಸಿಂಧು
ಬಿರಿದ ನೈದಿಲೆ
ಬಿಳಿ ಮೋಡಗಳು
ಬೆಳ್ಳಿ ದೋಣಿ
ಮುಗಿಲು ತಾರೆ
ಕಲ್ಯಾಣ ರೇಖೆ
ರಾಗ ಬೃಂದಾವನ
ಆಶಾ ಸೌರಭ
ಧರೆಗಿಳಿದ ಹಕ್ಕಿ
ಮೂಡಿ ಬಂದ ಶಶಿ
ಮಂಜಿನಲ್ಲಿ ಮಿಂದ ಪುಷ್ಪ
ಸಮ್ಮಿಲನ
ಬಿರಿದ ಮೊಗ್ಗು
ಮುಂಜಾನೆಯ ಮುಂಬೆಳಕು
ಶರದೃತುವಿನ ಚಂದ್ರ
ಸ್ನೇಹ ಮಾಧುರಿ
ಭಾವ ಸರೋವರ
ಭಾನು ಮಿನುಗಿತು
ಬೆಳದಿಂಗಳ ಚೆಲುವೆ
ಚಿರ ಬಾಂಧವ್ಯ
ಮೇಘವರ್ಷಿಣಿ
ಪಸರಿಸಿದ ಶ್ರೀಗಂಧ
ಶ್ರೀರಸ್ತು ಶುಭಮಸ್ತು
ಬಾಂದಳದ ನಕ್ಷತ್ರ

ಸೊಬಗಿನ ಪ್ರಿಯದರ್ಶಿನಿ
ಮಿಡಿದ ಶೃತಿ
ಕಾರ್ತೀಕದ ಸಂಜೆ
ಅಭಿಲಾಷೆ
ಸುಮಧುರ ಸಂಗಮ
ಸ್ವಪ್ನ ಸಂಭ್ರಮ
ನವ ಚೈತ್ರ
ಮೌನ ಆಲಾಪನ
ಅಪೂರ್ವ ಮೈತ್ರಿ
ರಜತಾದ್ರಿಯ ಕನಸು
ಪ್ರೀತಿಯ ಹೂಬನ
ನಲಿದ ಸಿಂಧೂರ
ಶ್ರಾವಣ ಪೂರ್ಣಿಮ
ಧವಳ ನಕ್ಷತ್ರ
ನಿಶಾಂತ್
ಬಣ್ಣದ ಚುಂಬಕ
ರಾಧ ಮೋಹನ
ಸಂಧ್ಯಾ ಗಗನ
ಅರುಣ ಕಿರಣ
ಮತ್ತೊಂದು ಬಾಡದ ಹೂ
ನೂರು ನೆನಪು
ನಮ್ರತಾ
ಸಂಕೋಲೆ
ಹೇಮಂತದ ಸೊಗಸು
ಹಿಮಗಿರಿ ನವಿಲು
ಇಂದ್ರ ಧನಸ್ಸು
ಪಂಚವಟಿ
ಅನುಬಂಧದ ಕಾರಂಜಿ

ಮಧುರ ಆರಾಧನ
ಕೋಗಿಲೆ ಹಾಡಿತು
ಸಪ್ತ ರಂಜನಿ
ಪೂರ್ಣೋದಯ
ಶಿಲ್ಪ ತರಂಗಿಣಿ
ಶ್ಯಾನುಭೋಗರ ಮಗಳು
ಪುಷ್ಕರಿಣಿ
ನನ್ನ ರಾಗ ನನ್ನ ಭಾವ
ಪಾಂಚಜನ್ಯ
ಸುಭಾಷಿಣಿ
ಪ್ರಿಯ ಸಖಿ
ನೀಲಾ ಆಕಾಶ
ಸುಪ್ರಭಾತದ ಹೊಂಗನಸು
ವರ್ಷ ಬಿಂದು
ಜನನಿ ಜನ್ಮಭೂಮಿ
ಆಡಿಸಿದಳು ಜಗದೋದ್ಧಾರನ
ನನ್ನೆದೆಯ ಹಾಡು
ಹಂಸ ಪಲ್ಲಕಿ
ಸ್ವರ್ಗದ ಹೂ
ಪಲ್ಲವಿ
ದಂತದ ಗೊಂಬೆ
ದೀಪಾಂಕುರ
ಹೇಮ ವಿಹಾರಿ
ಮಾಗಿಯ ಮಂಜು
ಸಾಗರ ತರಂಗಿಣಿ
ರಜತ ನಂದನ
ಅಭಿನಂದನೆ
ಕಡಲ ಮತ್ತು ನೀಲಾಂಜನ

ಬನದ ಮಲ್ಲಿಗೆ

ಕಲ್ಯಾಣ ವಸ್ತು

ಮಂತ್ರಕ್ಷತೆ

ಮಧುರಿಮ

ಮುಂಗಾರಿನ ಹುಡುಗಿ

ಶಿಶಿರದ ಇಂಚರ

ಬೆಳಕಿನ ಹಣತೆ

ಹೇಮಾದ್ರಿ

ಶರಧಿ ಹೋಗಿ ಬಾ

ಗ್ರೀಷ್ಮ ಋತು

ಗ್ರೀಷ್ಮದ ಸೊಬಗು

ಮೋಹನ ಮುರಲಿ ಕರೆಯಿತು

ಸಾಮಗಾನ

**ರಾಧಾದೇವಿ**

ಸುವರ್ಣ ಸೇತುವೆ
ಶುಭ ವಸಂತ
ಚಂದನ ಕಸ್ತೂರಿ
ದುಂಬಿ ಮುಟ್ಟದ ಹೂ
ಬೇರು ಕಡಿದ ಮರ
ಒಲಿದು ಬಂದ ಅಪ್ಸರೆ
ಸಪ್ತವರ್ಣ ಮಿನುಗಿತು
ಮರಳ ತುಂಬಿದ ಮಡಿಲು
ಮಧು ತುಂಬಿದ ಮಲ್ಲಿಗೆ
ಸೌಭಾಗ್ಯ ಸಂಪದ
ಬಂಗಾರದ ಮೆಟ್ಟಿಲು
ಹಾಲು ಕೊಳದ ಹಂಸ
ಚೆಲ್ಲಿದ ಪನ್ನೀರು
ಹೃದಯ ಹಾಡಿದ ರಾಗ
ಸ್ವಾತಿ ಹನಿ ಸಿಡಿದಾಗ
ಒಲವಿನ ಸುಧೆ
ಹೊಂಗಿರಣ ಹರಡಿತು
ಜೇನು ಬೆರೆತ ಹಾಲು
ಗೆಲುವಿನ ಹಾದಿ
ವಜ್ರ ಪಂಜರ
ಕತ್ತಲಲ್ಲಿ ಕಂಡ ಮಿಂಚು
ಅಮೃತ ಗಳಿಗೆ
ಸೊಬಗಿನ ಸೆರೆಮನೆ
ಆಕಾಶ ಚುಂಬನ
ಸಿರಿದೇವಿ ನಕ್ಕಾಗ
ಶ್ರೀಮಂತ ಸಂಬಂಧ
ಭೂಮಿಯ ನಕ್ಷತ್ರ

ಹೂಬಾಣದ ಜ್ವಾಲೆ
ಕೈಜಾರಿದ ಮುತ್ತು
ಪ್ರೀತಿಯ ಹೂಮಾಲೆ
ಐಶ್ವರ್ಯ ದೀಪ
ಅನುರಾಗದ ಅಂತಃಪುರ
ಅದೃಷ್ಟದ ಅಂಚಿನಲ್ಲಿ
ಬೆಳದಿಂಗಳ ಬೇಗೆ
ಬಾಗಿಲಿಗೆ ಬಂದ ಭಾಗ್ಯ
ಚೈತ್ರ ಚಂಚಲ
ಸಂತೋಷ ಗಂಗ
ಸುಖದ ಕನಸು
ಪ್ರಿಯ ಸೂರ್ಯೋದಯ
ಮಧುರ ಮಂದಹಾಸ
ಅಂಗಳದ ತಂಗಾಳಿ
ಒಲ್ಲದ ಔತಣ
ಪ್ರೇಮ ಸಾಮ್ರಾಜ್ಯ
ಬದುಕಿನ ದಾರಿಯಲ್ಲಿ
ಚಂದ್ರ ನಲಿದಾಡಿದ
ನಿನ್ನ ಸಿಹಿ ನೆನಪು
ಅಂಬರ ಚುಂಬಿತೆ
ರಥ ಕದಲಿತು
ನೀರೊಳಗಿನ ಕಮಲ
ನಿಶ್ಚಿತ ವಧು
ಹೊಸ ಉಡುಗೊರೆ
ಕಾಂಚನ ಧಾರೆ
ಸುರಪುಷ್ಪ ಅರಳಿತು
ನೈದಿಲೆ ನಕ್ಕಿತು

ಬಿಸಿಲಿಗೆ ಬಿದ್ದ ಚಿಗುರು
ಮನೆ ಬೆಳಕಾಯ್ತು
ಹಾಲಿನಲ್ಲಿ ಚಂದ್ರಬಿಂಬ
ಮೋಹನ ರಾಗ
ವಿಜಯಧ್ವನಿ
ಆಸೆಯ ಅರಮನೆ
ಬಾನಲ್ಲಿ ಬಂಗಾರ
ಸೌಂದರ್ಯ ಜ್ಯೋತಿ
ಬಾಳಿನ ಭಾಗ್ಯನಿಧಿ
ಬಯಸಿದ ಸಿರಿ ಸಿಕ್ಕಿತು
ಹತ್ತರಲ್ಲೊಂದು ಮುತ್ತು
ಕನಸಿನ ಕಿರೀಟ
ಬೆಳಕಾಗಿ ಬಂದವಳು
ಮಂಜುಳ ಗಾನ
ಬೆಳ್ಳಿ ತೋರಣ/ ಹೂವೆಲ್ಲಾ
ಚೆಲುವಾಯ್ತು
ಕಲ್ಲರಳಿ ಹೂವಾಯ್ತು
ರಾಗಜ್ವಾಲೆ
ಜೋಡಿಹಕ್ಕಿ ಹಾರಿತು
ಆಡಿದನೋ ರಂಗ
ಪಡೆದಷ್ಟೂ ಭಾಗ್ಯ
ಸುಂದರ ಸುಮಧುರ
ನಿನ್ನ ಗೆಜ್ಜೆ ನನ್ನ ಹೆಜ್ಜೆ
ನೂರು ದೀಪ ಬೆಳಗಿತು
ಮನ ನಿನ್ನ ಬಯಸಿತ್ತು
ಆಕಾಶದಿಂದ ಹೂಮಳೆ
ಒಲವಿನ ಪೂಜೆ
ಪ್ರೇಮ ನಕ್ಷತ್ರ

ಗಂಧರ್ವ ಲೋಕದಲ್ಲಿ
ಬಣ್ಣದ ರಂಗೋಲಿ
ಸ್ವಪ್ನಸಿರಿ ಕೈಗೆ ಬಂತು
ಹೇಮಂತದ ಮಧುಪಾನ
ಲಾವಣ್ಯ ಲಹರಿ
ಪವಿತ್ರ ನಿರ್ಮಾಲ್ಯ
ಧರೆಗಿಳಿದ ಸೂರ್ಯ
ನೀಲನಭ ಕೆಂಪಾಯ್ತು
ಚೈತ್ರ ರಾಗ ಹಾಡಿತು
ಜೀವನ ಚೇನಾಯ್ತು
ನವ ವಸಂತ ನಕ್ಕಾಗ
ಸಂಜೆ ಅರಳಿದ ಹೂ
ಎಂದೋ ಕಟ್ಟಿದ ಪುಷ್ಪಮಾಲೆ
ಬೀಸಿ ಬಂದ ತಂಗಾಳಿ
ಬಂಗಾರದ ಕಿಡಿ
ಮನ ಹಿಗ್ಗಿ ಹೂವಾಯ್ತು
ಮಧುರ ವೀಣಾ ಲೋಲ
ಭಾಗ್ಯತಾರೆ ಬೆಳಗಿತು
ಬಾರೆ ಭಾಷ್ಯದ ಸಿರಿಯೇ
ಬೆಳಕು
ಆನಂದ ಶರಧಿ
ಒಲಿದೆ ನಿನ್ನ ಪ್ರೀತಿಗೆ
ಆಕಾಶದಲ್ಲರಳಿದ ಹೂವು
ಶ್ರಾವಣ ಸಿರಿಸಂಜೆ
ಪುಷ್ಪ ಪರಾಗ
ಹೃದಯ ಸಾಕ್ಷಿ
ವಸಂತ ಚಂದ್ರಿಕಾ
ಆಕಾಶಕಿಟ್ಟ ಏಣಿ

ಪ್ರೀತಿಯ ಪಲ್ಲಕ್ಕಿ
ಬೆಳ್ಳಿಮೂಡಿತು ಪ್ರೀತಿಯ
ಮುತ್ತಿನುಂಗುರ
ಪ್ರೇಮ ಸರೋವರ ಮತ್ತು ಗೆಲುವಿನ
ದೀಪ
ಒಲಿದು ಬಂದ ಸಿರಿ ಮತ್ತು ಚೈತ್ರ
ನಂದನ
ನೀನೇಕೆ ನನ್ನ ಮರೆತೆ ಮತ್ತು
ಹುಣ್ಣಿಮೆಯ ಬೆಳಕಿನಲ್ಲಿ
ಚಂದ್ರೋದಯ ಮತ್ತು ಮುದ್ದಿನ
ಮನದನ್ನೆ
ಗೆಲುವಿನ ಗೋಪುರ
ಅಮರ ಪ್ರೇಮದ ಮಧು
ಮನ ಒಲಿದ ಆಯ್ಕೆ
ನಕ್ಷತ್ರ ಮಲ್ಲಿಗೆ ಮತ್ತು ಸುಖದ
ಸೋಪಾನ
ಒಲುಮೆಯ ಹೂವು ಮತ್ತು ಪುಷ್ಪ
ತಲ್ಪದ ಮಧ್ಯೆ
ಬೆಳ್ಳಿ ಚಂದ್ರಮ ಮತ್ತು ಅನುರಾಗದ
ಆಣಿಮುತ್ತು
ಹೂವಿಗಂಟಿದ ಜೇನು
ಬೆಳದಿಂಗಳ ಗುಲಾಬಿ ಮತ್ತು ಪುಷ್ಪ
ಮಂಟಪ
ಒಲಿದು ಒಂದಾದವರು
ಶುಭ ಸಂಕಲ್ಪ ಮತ್ತು ಮುತ್ತು ಚೆಲ್ಲಿದ
ಹಾದಿ
ಬಣ್ಣದ ಹಸೆಮಣೆ ಮತ್ತು ಹೃದಯದ
ಸರಿಗಮ

ಸುವರ್ಣ ಸಂಪಿಗೆ ಮತ್ತು ಸುಖದ
ಹೊಂಗಿರಣ
ಮುತ್ತಿನ ಅಕ್ಷತೆ ಮತ್ತು ಎಲ್ಲೋ
ಬೆಳಗಿದ ದೀಪ
ಕನಸಿನ ಚಪ್ಪರ
ಅದೃಷ್ಟ ತಾರೆ ಮತ್ತು ಬಾನಲ್ಲಿ ಬಂದ
ಭಾಸ್ಕರ
ನೆರೆಮನೆಯ ಸಿರಿ ಮತ್ತು ಕ್ಷಿತಿಜದೆಡೆಗೆ
ಅಪೂರ್ವ ಬಳುವಳಿ ಮತ್ತು ಕನಸಿನ
ಕಣ್ಮಣಿ
ಮೋಡ ಸರಿದ ಸೂರ್ಯ ಮತ್ತು
ಕನಸಿನ ಮಧುಚಂದ್ರ ಮತ್ತು ಸಪ್ನ
ಸಂದೇಶ
ಹೃದಯ ರಥದಲ್ಲಿ
ಅಂಗಳದ ಮಲ್ಲಿಗೆ
ಬಣ್ಣ ಬಣ್ಣದ ಬೆಳಕು
ಬದುಕಿನ ಸಿಹಿ ಜೇನು
ವಿಜಯದ ಮೆಟ್ಟಿಲು
ಬಂಗಾರದ ನಕ್ಷತ್ರ
ಹೂವಿನಲ್ಲಿಟ್ಟ ಹೆಜ್ಜೆ
ಪಾರಿಜಾತ ಕಿರಣ
ಶುಭಗೀತೆ ಮತ್ತು ಜಯಪತ್ರಿಕೆ
ಮೋಹನ ಮಾಲೆ ಮತ್ತು ಚಾರು
ಚಂದ್ರಿಕೆ
ಬಣ್ಣದ ಭ್ರಮರ ಮತ್ತು ಅದೃಷ್ಟದ ಆಟ
ವಸಂತದ ಬಿಸಿಲು ಮತ್ತು ಬಲಕ್ಕೆ ಬಿದ್ದ
ಹೂವು

ಮುತ್ತಿನ ಹನಿಗಳು ಮತ್ತು ಅಮೃತ

ಚಂದಿರ

ಮೋಹತಪ್ತೆ ಮತ್ತು ಸವಿಜೇನು

ಸುರಿದಿತ್ತು

ಸವಿಗಾನ ಮತ್ತು ಶ್ರೀರಾಗ ವೈಭೋಗ

ಮಾತಾಡದ ಮಲ್ಲಿಗೆ / ಪುಣ್ಯ

ಫಲಿಸಿತು

ಬೆಳಕಿನ ಹೊನಲು / ನಂದಾದೀಪ

ನಗುತ್ತಿತ್ತು

ಮಂದಾನಿಲ / ಹಾಲಿಗೆ ಬಿದ್ದ

ಸಕ್ಕರೆ

ಕನಸಿನ ಬದುಕು

ಜೀವನಗಾನ

ವಿಜಯ ರಥೋತ್ಸವ

ಗೆಲುವಿನ ಚಿತ್ರ

ರಂಗು ಚೆಲ್ಲದ ರಂಗೋಲಿ

**ಆರತಿ ವೆಂಕಟೇಶ್**

ಅಗೋಚರ
ಮನೋತರಂಗ
ಬಡಕು ದೋಣಿ
ಜೀವನ ಸಂಧ್ಯಾ
ತಮಸೋಮ
ಜ್ಯೋತಿರ್ಗಮಯ
ಮಂಥನ
ನೆನಪಿನ ನೆರಳು
ಆರದಿರಲಿ ಬೆಳಕು
ಅಂಗಳದ ದೀಪ
ಮಾಫಲೇಶು ಕದಾಚಲ
ಮಂಜಿನಹಾದಿ
ನೆನದವರ ಮನದಲ್ಲಿ
ನೀನಾದೇ ಬಾಳಿಗೆ ಜ್ಯೋತಿ
ಅಲೆಗಳು
ಅಂತರ್ಗತ
ಧರಿತ್ರಿ
ತಲ್ಲಣಿಸದಿರು ಮನವೆ
ನಿನ್ನೊಲುಮೆ ನನಗಿರಲಿ
ವಿದಾಯ
ಕರುಣಾಳು ಬಾ ಬೆಳಕೇ

## ಅನುಬಂಧ – ೨

# ಪ್ರಶ್ನಾವಳಿಗಳು

### ೧. ಲೇಖಕಿಯರಿಗೆ

ಜನರಿಗೆ ಪ್ರಿಯವಾದದ್ದು ಜನಪ್ರಿಯ ಎನ್ನುವ ವ್ಯಾಖ್ಯಾನದೊಂದಿಗೆ ಅಭಿಮತಿಸಿ ಜನಪ್ರಿಯ ಕಾದಂಬರಿಗಳ ಸಮಾಜೋ-ಸಾಂಸ್ಕೃತಿಕ ಅಧ್ಯಯನವನ್ನು ಸ್ತ್ರೀವಾದಿ ಚಿಂತನೆಯಲ್ಲಿ ಗಮನಿಸುವ ಪ್ರಯತ್ನ ಈ ಅಧ್ಯಯನದ್ದು. ತಮ್ಮ ಕೃತಿಗಳನ್ನು ಜನಪ್ರಿಯ ಕಾದಂಬರಿಗಳ ರೂಪದಲ್ಲಿ ಅಭಿವ್ಯಕ್ತಿಸಿಕೊಂಡ ಮಹಿಳಾ ಕಾದಂಬರಿಕಾರ್ತಿಯರ ಸಂಖ್ಯೆ ಹೆಚ್ಚಿದೆ. ಒಂದು ಕಾಲದಲ್ಲಿ ಮಹಿಳೆಯರೇ ಮುಂಚೂಣಿಯಲ್ಲಿದ್ದ ಸಂದರ್ಭ ದಾಖಲಾರ್ಹ. ಹಾಗೇ ರಚನೆಯಲ್ಲಿ ತೊಡಗಿದ್ದ ಮಹಿಳೆಯರ ಬಿಡುವು, ಆಸಕ್ತಿ, ಅನಿವಾರ್ಯತೆ, ವೃತ್ತಿಪರತೆ, ಪ್ರಚಾರಪ್ರಿಯತೆ ಈ ಅಂಶಗಳನ್ನು ಅರಿಯುವ ಉದ್ದೇಶ ಇಲ್ಲಿದೆ.

೧. ವೈಯಕ್ತಿಕ ವಿವರ

- ೧. ಹೆಸರು / ಕಾವ್ಯನಾಮ
- ೨. ವಯಸ್ಸು
- ೩. ಜಾತಿ
- ೪. ವರ್ಗ
- ೫. ವೃತ್ತಿ
- ೬. ವಿದ್ಯಾಭ್ಯಾಸ

೨. ಅರಚಿತ ಪ್ರಶ್ನೆಗಳು

- ೧. ಬಿಡುವಿನ ವ್ಯಾಖ್ಯಾನ
- ೨. ದಿನಚರಿಯ ವಿವರಣೆ
- ೩. ಬರವಣಿಗೆಯ ಹಿನ್ನೆಲೆ
- ೪. ದೊರಕಿದ ಪ್ರೋತ್ಸಾಹದ ಕುರಿತು
- ೫. ಪುನರಾವರ್ತಿತ ಲೋಕವೊಂದರ ಚಿತ್ರವೊಂದಕ್ಕೆ ಕಾರಣ
- ೬. ಬರವಣಿಗೆಗಾಗಿ ನಡೆಸುವ ಸಿದ್ಧತೆ / ತಯಾರಿ / ಕ್ರಮ
- ೭. ಪ್ರಕಾಶಕರೊಂದಿಗಿನ ಸಂಬಂಧ
  - ಅ) ನೀವೆ ಸಂಪರ್ಕಿಸುತ್ತೀರಾ?
  - ಆ) ಸಂಭಾವನೆ

ಇ) ಮಾರಾಟ

೮. ವಿಮರ್ಶೆ ಹೇಗೆ ಬಂದಿದೆ?

೯. ಓದುಗರ ಜೊತೆಗಿನ ನಿಮ್ಮ ಸಂಬಂಧ

೧೦. ವಿಮರ್ಶೆಯ ಬಗೆಗೆ ನಿಮ್ಮ ಅಭಿಪ್ರಾಯ

೧೧. ಸಾಧನೆಯ ಬಗ್ಗೆ ಇರುವ ಅಭಿಪ್ರಾಯ

೧೨. ವಯೋಮಾನ ನಿಮ್ಮ ಬರವಣಿಗೆಯ ಮೇಲೆ ಬೀರಿದ ಪ್ರಭಾವ

೧೩. ಪ್ರಶಸ್ತಿ / ಸನ್ಮಾನ

೧೪. ಬರವಣಿಗೆಯು ನಿಮಗೆ ಕೊಟ್ಟದ್ದು / ಪಡೆದದ್ದು ಏನು?

*****

೨. ಓದುಗರಿಗೆ

ಮಹಿಳೆಯ ಬದುಕು, ಸಮಯ, ಅವಳಿಗೆ ದೊರಕುವ ಬಿಡುವು ಅವಳದೇ ಆಗಿರುವದಿಲ್ಲ. ಅವಳ ಇಚ್ಛೆ, ಅವಳ ಸ್ವಂತದ ಅಗತ್ಯ ಮತ್ತು ಅನಿಸಿಕೆಗಳನ್ನು ಯಾವತ್ತು ಮುಖ್ಯ ಎಂದು ಯಾರೂ ಗಮನಿಸಿಯೇ ಇಲ್ಲ ಎಂಬುದು ಇಂದಿನ ತಿಳುವಳಿಕೆ. ಈ ತಿಳುವಳಿಕೆಯ ಹಿನ್ನೆಲೆಯಲ್ಲಿ ಅವಳ ಸಮಯವನ್ನು ಹೇಗೆ ಉಪಯೋಗಿಸುತ್ತಾಳೆಂಬುದನ್ನು ಅರಿಯುವ ಉದ್ದೇಶದ ಹಿನ್ನೆಲೆಯಲ್ಲಿ ಈ ಪ್ರಶ್ನಾವಳಿಯನ್ನು ಬಳಸಿಕೊಳ್ಳಲಾಗಿದೆ.

೧ ವೈಯಕ್ತಿಕ ವಿವರ

೧. ಹೆಸರು

೨. ವಯಸ್ಸು

೩. ಜಾತಿ

೪. ವಿದ್ಯಾಭ್ಯಾಸ

೫. ವೃತ್ತಿ

೬. ಪ್ರದೇಶ (ನಗರ / ಗ್ರಾಮ)

೨. ದಿನಚರಿಯ ವಿವರ. ಬಿಡುವಿನ ವ್ಯಾಖ್ಯಾನ – ಬಿಡುವೆಂದರೆ ಏನು? ಅದು ಸಿಗುತ್ತಾ?

ಅ) ಎಷ್ಟು ಗಂಟೆಗೆ ಏಳುತ್ತೀರಿ?

ಆ) ಆಮೇಲೇನು ಮಾಡುತ್ತೀರಿ?

ಇ) ಮಧ್ಯಾಹ್ನದ ಸಮಯ ಹೇಗೆ ಕಳೆಯುತ್ತೀರಿ?

ಈ) ಸಂಜೆ ಏನು ಮಾಡುತ್ತೀರಿ?

ಉ) ಯಾವ ಯಾವ ಸಮಯವನ್ನು ಗಂಡ–ಮಕ್ಕಳಿಗೋಸ್ಕರ ಮೀಸಲಾಗಿ ಇಡುತ್ತೀರಿ?

ಊ) ಕೈಗಾರಿಕೋದ್ಯಮಿ / ವ್ಯಾಪಾರಸ್ಥರ ಹೆಂಡತಿರು ಗಂಡಂದಿರಿಗೋಸ್ಕರ ಕಾಯ್ತಾ ಇರುತ್ತೀರಾ?

೩. ಬಿಡುವಿನ ಸಮಯದಲ್ಲಿ ಏನಾದರೂ ಓದುವ ಹವ್ಯಾಸವಿದೆಯಾ?

ಅ) ಏನು ಓದುತ್ತೀರಿ?

ಆ) ಯಾಕೆ ಓದುತ್ತೀರಿ?

ಇ) ಹೇಗೆ ಓದುತ್ತೀರಿ?

ಈ) ಕಾದಂಬರಿಗಳನ್ನು ಓದುತ್ತೀರಿ?

ಉ) ಪೂರ್ಣ ಕಾದಂಬರಿಗಳನ್ನು ಎಷ್ಟು ಓದಿದ್ದೀರಿ?

ಊ) ಆಗಾಗ ಓದುತ್ತೀರಿ?

ಋ) ಓದೋದು ಚಟಾನಾ?

ೠ) ಓದೋಕೆ ಅಂತಲೇ ಒಂದು ನಿಗದಿತ ಸಮಯವನ್ನು ಮಾಡಿಕೊಳ್ಳುವಿರಾ?

ಎ) ಓದಿದ್ದನ್ನು ಚರ್ಚೆ ಮಾಡುತ್ತೀರಾ? ಯಾರೊಂದಿಗೆ?

೪. ಕಾದಂಬರಿಗಳನ್ನು ದೊರಕಿಸಿಕೊಳ್ಳುವ ಕ್ರಮ ಯಾವುದು?

ಅ) ಕಾದಂಬರಿಗಳನ್ನು ಎಲ್ಲಿಂದ ತಗೊಂಡು ಓದುತ್ತೀರಿ?

ಆ) ಯಾರು ತಂದು ಕೊಡುತ್ತಾರೆ?

ಇ) ತಂದು ಓದುತ್ತೀರಿ? ಇಲ್ಲ, ಕೊಂಡು ಓದುತ್ತೀರಿ?

ಈ) ಸರ್ಕ್ಯೂಲೇಟಿಂಗ್ ಲೈಬ್ರರಿಯಿಂದ ತರುತ್ತೀರಾ?

ಉ) ಯಾವ ಸಮಯದಲ್ಲಿ ಲೈಬ್ರರಿಗೆ ಹೋಗುತ್ತೀರಿ?

ಊ) ಅಲ್ಲಿ ಕಾದಂಬರಿಗಳನ್ನು ಆರಿಸುವ ಕ್ರಮ ಯಾವುದು?

೫. ಕಾದಂಬರಿಗಳಲ್ಲಿ ಗಮನಿಸುವ ಅಂಶಗಳು ಯಾವುವು?

ಅ) ಕಥೆಗಳನ್ನು ಗಮನಿಸುತ್ತೀರಾ? ಭಾಷೆಯನ್ನು ಗಮನಿಸುತ್ತೀರಾ?

ಆ) ಸಂಭಾಷಣೆಯನ್ನು ಗಮನಿಸುತ್ತೀರಾ?

ಇ) ಭಾವವನ್ನು ಗಮನಿಸುತ್ತೀರಾ?

ಈ) ಯಾವ ಮಾದರಿಯ ಕಾದಂಬರಿಗಳ ಓದು ತೃಪ್ತಿಯನ್ನು ಕೊಡುತ್ತದೆ?

೧) ಪತ್ತೇದಾರಿ

೨) ಪ್ರೀತಿ–ಪ್ರೇಮ

೩) ಸಾಮಾಜಿಕ ಸಮಸ್ಯೆಗಳ ಪರಿಹಾರ ಇರುವ ಕಾದಂಬರಿಗಳು

ಉ) ಕಾದಂಬರಿಗಳಲ್ಲಿ ಗಮನಿಸುವ ಮುಖ್ಯ ಅಂಶಗಳು ಏನು? (ಡ್ರೆಸ್, ಒಡವೆ ...)

ಈ ವಿವರಗಳ ಕಡೆಗೆ ಯಾಕೆ ಗಮನ ಹರಿಯುತ್ತದೆ?

ಊ) ಕಾದಂಬರಿಗಳಂದ, ಅದರ ಓದಿನಿಂದ ದೊರಕುವ ಅಂಶ ಏನು?

ಋ) ಧಾರಾವಾಹಿಗಳ ರೂಪ ಇದ್ದರೆ ಚೆನ್ನಾಗಿರುತ್ತೊ, ಪೂರ್ಣ

ಕಾದಂಬರಿಯಾಗಬೇಕೋ?

ೠ) ಬೇರೆ ಹೆಂಗಸರ ಜೊತೆಗಿದನ್ನು ಚರ್ಚಿಸುತ್ತೀರಾ? ಅಥವಾ ಅದರಿಂದ ಸಿಗುವ

ಅನುಭೂತಿ ನಿಮ್ಮ ಆಪ್ತಲೋಕಕ್ಕೆ ಸಂಬಂಧಿಸಿದ್ದು ಅಂದುಕೊಳ್ಳೀರಾ?

೫. ಧಾರಾವಾಹಿಗಳನ್ನು, ಸಿನೆಮಾಗಳನ್ನು ಇಷ್ಟಪಡುತ್ತೀರಾ? ಯಾಕೆ? ಧಾರಾವಾಹಿ / ಸಿನೆಮಾ / ಓದು / ಶಾಪಿಂಗ್ ಇವುಗಳಲ್ಲಿ ಯಾವುದಕ್ಕೆ ಮುಖ್ಯ ಸ್ಥಾನವನ್ನು ಕೊಡುತ್ತೀರಿ? ವಯಸ್ಸಿಗನುಣವಾಗಿ ನಿಮ್ಮ ನೋಡುವ, ಓದುವ ಅಭಿರುಚಿ ಬದಲಾಗಿದೆಯಾ?

೬. ಕಾದಂಬರಿಗಳಲ್ಲಿ ಯಾರ ಕಾದಂಬರಿಗಳು ಹೆಚ್ಚು ಇಷ್ಟ? ಕಾರಣ?

ಅ) ಗಂಡಸರು ಬರೆದ ಕಾದಂಬರಿಗಳನ್ನು ಓದುತ್ತೀರಾ?

ಆ) ಹೆಂಗಸರು ಬರೆದ ಕಾದಂಬರಿಗಳನ್ನು ಓದುತ್ತೀರಾ?

ಇ) ಮೆಚ್ಚಿನ ಕಾದಂಬರಿ ರಚನೆಕಾರರ ಪಟ್ಟಿ ನೀಡಿ.

೭. ನೀವು ಕಾದಂಬರಿಗಳನ್ನು ಓದುವ ಸಮಯವನ್ನು ಇಂದು ಬೇರೆ ಸಂಗತಿಗಳು ಪಡೆದುಕೊಂಡಿವೆಯೇ? ಅವುಗಳನ್ನು ಗುರುತಿಸಿ.

ಅ) ಸಿನೆಮಾ

ಆ) ಶಾಪಿಂಗ್

ಇ) ಅಧ್ಯಾತ್ಮಿಕ ಪುಸ್ತಕಗಳು ಮತ್ತು ಇತರ ಪುಸ್ತಕಗಳು

*****

### ೩. ಪ್ರಕಾಶಕರಿಗೆ

ಜನರಿಗೆ (ಶ್ರೀ ಸಾಮಾನ್ಯರಿಗೆ) ಬೇಕಾದದ್ದನ್ನು ಮಾರುಕಟ್ಟೆ ಒದಗಿಸುವ ಕ್ರಮ. ಸಾಹಿತ್ಯ ಅಕ್ಷರ ರೂಪದಲ್ಲಿ ಜನರನ್ನು ತಲುಪುವ ಒಂದು ಸಾಧನ. ಯಾವ ತರಹದ ಸಾಹಿತ್ಯ ಜನರಿಗೆ ಬೇಕು, ಅವರು ಏನನ್ನು ಬಯಸುತ್ತಾರೆ, ಯಾಕೆ ಬಯಸುತ್ತಾರೆ ಎಂಬುದರ ತಿಳುವಳಿಕೆ ಪ್ರಕಾಶಕರಿಗೆ ಇರುತ್ತದೆ. ಅಂದಿನ ಸಮುದಾಯಗಳ ಅಭಿರುಚಿಗೆ ಅನುಗುಣವಾದ ಸ್ವರೂಪದಲ್ಲಿ ಅವುಗಳನ್ನು ಉತ್ಪಾದಿಸಲು ಅವರು ಪ್ರಯತ್ನಿಸುತ್ತಾರೆ. ಜನಪ್ರಿಯ ಕಾದಂಬರಿಗಳ ಓದು-ಅರ್ಥೈಸುವಿಕೆಗಳ ಹಿನ್ನೆಲೆಯಲ್ಲಿ ಅದರ ಮಾರುಕಟ್ಟೆಯ ಸ್ವರೂಪವನ್ನು ಅರ್ಥೈಸಿಕೊಳ್ಳುವದು ತುಂಬಾ ಮುಖ್ಯವಾದ ವಿಷಯ. ಈ ಕುರಿತ ತಿಳುವಳಿಕೆಗಾಗಿಯೆ ಈ ಅನಿರ್ಭಂಧಿತ ಸಂದರ್ಶನ.

೧. ಪ್ರಕಾಶಕರ ಹೆಸರು

೨. ಪ್ರಾರಂಭವಾದದ್ದು (ಕಾಲ)

೩. ಉದ್ದೇಶ

೪. ಜನಪ್ರಿಯ ಕಾದಂಬರಿಗೆ ಸ್ವರೂಪದ ಕಲ್ಪನೆ

೫. 'ಜನಪ್ರಿಯ' ಈ ವ್ಯಾಖ್ಯಾನದಡಿ ಮತ್ತಾವ ರೀತಿಯ ಸಾಹಿತ್ಯವನ್ನು / ಸಾಹಿತ್ಯೇತರ ಕೃತಿಗಳನ್ನು ಗುರುತಿಸುವಿರಿ?

೬. ಇಂಥ ಕಾದಂಬರಿಗಳ ಮುದ್ರಣ, ಸಂಭಾವಣೆಗಳ ವ್ಯವಹಾರ ಹೇಗೆ ನಡೆಯುತ್ತದೆ?

೭. ಕಾದಂಬರಿಕಾರರನ್ನು ಸಂಪರ್ಕಿಸುವ ವಿಧಾನಗಳ ವಿವರ

೮. ಮಹಿಳಾ ಕಾದಂಬರಿಕಾರ್ತಿ / ಕಾದಂಬರಿಕಾರ ಇವರಲ್ಲಿ ಯಾವ ಕೃತಿಗಳಿಗೆ ಹೆಚ್ಚು ಬೇಡಿಕೆಯಿದೆ? ಯಾಕೆ? (ವಿಶೇಷ ಸಂಗತಿಗಳಿದ್ದರೆ ವಿವರಣೆ - ಪುರುಷರು ಬರೆದ ಕಾದಂಬರಿಗಳಿಗೆ ಹೆಣ್ಣು ಮಕ್ಕಳ ಹೆಸರನ್ನು ಇಟ್ಟು ಪ್ರಕಟಿಸುವದು ಇತ್ಯಾದಿ).

೯. ಕಾದಂಬರಿಗಳ ರಚನೆಯ ಹಿನ್ನೆಲೆಯಲ್ಲಿ ನಿರ್ದೇಶಿತ ಸೂಚನೆಗಳಿರುತ್ತವೆಯೇ?

ಅ) ಕಥೆಯ ಸ್ವರೂಪ

ಆ) ಪತ್ತೇದಾರಿ, ಪ್ರಣಯ, ಭಕ್ತಿ, ಕುಟುಂಬ, ಇತ್ಯಾದಿ

೧೦. ಸಾಮಾಜಿಕ ಕಾದಂಬರಿಗಳ ಸ್ವರೂಪದ ಲಕ್ಷಣಗಳ ಬಗ್ಗೆ

೧೧. ಇತರ ರೀತಿಯ ಪುಸ್ತಕಗಳನ್ನು ಪ್ರಕಟಿಸುವದಾದರೆ ಜನಪ್ರಿಯ ಕಾದಂಬರಿಗಳಿಗೆ ಯಾವ ಸ್ಥಾನ ಹಾಗೂ ಎಷ್ಟು ಆಸಕ್ತಿ ವಹಿಸುತ್ತೀರಿ?

೧೨. ಇತರೆ (ಕಾದಂಬರಿಗಳ ವಿನ್ಯಾಸ, ಮುಖಪುಟ, ಬಣ್ಣ, ಆಕಾರ, ಅಳತೆ)

೧೩. ಜನಪ್ರಿಯ ಕಾದಂಬರಿಗಳ ಮಾರುಕಟ್ಟೆಯ ಸ್ವರೂಪ

ಅ) ಸರ್ಕ್ಯೂಲೇಟಿಂಗ್ ಲೈಬ್ರರಿಗಳ ಸಂಖ್ಯೆ ಹಿಂದೆ ಎಷ್ಟು ಇತ್ತು? ಈಗ?

ಆ) ಅವರ ಅಯ್ಕೆಯ ವಿಧಾನಗಳೇನು?

ಇ) ಮಹಿಳಾ ಕಾದಂಬರಿಗಳ ಬೇಡಿಕೆ ಎಷ್ಟು?

ಈ) ಮರು-ಮುದ್ರಣಗೊಳ್ಳುತ್ತಿರುವ ಬೇಡಿಕೆಯ ಕಾದಂಬರಿಕಾರ್ತಿಯರ ಪಟ್ಟಿ

ಉ) ನಗರ ಕೇಂದ್ರ ಗ್ರಂಥಾಲಯಗಳಲ್ಲಿ ಎಷ್ಟು ಜಾಗವನ್ನು ಮೀಸಲಾಗಿಟ್ಟಿರುತ್ತಾರೆ?

ಊ) ಅಂಚೆಯ ಮೂಲಕ ಅತಿ ಹೆಚ್ಚು ಬೇಡಿಕೆಯಿರುವ ಕಾದಂಬರಿಕಾರರ ವಿವರಣೆ

ಋ) ಇಂದು ಚಾಲ್ತಿಯಲ್ಲಿರುವ ಕಾದಂಬರಿಕಾರ್ತಿಯರ ಪಟ್ಟಿ

ೠ) ಸಮುದಾಯಗಳ ಬೇಡಿಕೆಗೆ ಅನುಗುಣವಾಗಿ ನೀವು ಮಾಡಿಕೊಂಡ ಬದಲಾವಣೆಗಳು

ಎ) ಸಿನೆಮಾ-ಕಾದಂಬರಿಗಳ ನಂಟು

ಏ) ಜನಪ್ರಿಯ ಧಾರಾವಾಹಿಗಳನ್ನು ಗಮನಿಸಿ ಕಾದಂಬರಿಳಾಗಿ ಪ್ರಕಟಿಸುತ್ತೀರಾ?

*****

## ಅನುಬಂಧ-೩

## ಪರಾಮರ್ಶನ ಗ್ರಂಥಗಳು

### ಕನ್ನಡ


- ಅಧ್ಯಯನದ ವಿಧಿವಿಧಾನಗಳು, ಕೆ. ರವೀಂದ್ರನಾಥ (ಸಂ.), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮
- ಉಷಾ ನವರತ್ನರಾಂ, ಪ್ರಭಾಮೂರ್ತಿ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬
- ಎಪ್ಪತ್ತರ ವಯಸು ಇಪ್ಪತ್ತರ ಮನಸು, ಕೆ. ಉಷಾ ಪಿ. ರೈ (ಪ್ರ. ಸಂ.), ಇಂದಿರಾ ಶಿವಣ್ಣ (ಸಂ.), ಕೆ. ಆರ್. ಸಂಧ್ಯಾಸ ರೆಡ್ಡಿ (ಸಂ.), ಕರ್ನಾಟಕ ಲೇಖಕಿಯರ ಸಂಘ (ರಿ), ಬೆಂಗಳೂರು,
- ಓದುಗ ಮತ್ತು ಸಾಹಿತ್ಯಾಭಿರುಚಿಯನ್ನು ಕುರಿತ ಸಮೀಕ್ಷಾತ್ಮಕ ಅಧ್ಯಯನ, ಎಚ್. ಎಸ್. ಮಾಧವರಾವ್, ಪಿ. ಎಚ್. ಡಿ. ಪದವಿಗೆ ಸಲ್ಲಿಸಿದ ನಿಬಂಧ,(ಅಪ್ರಕಟಿತ) ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು, ೨೦೦೬
- ಕನ್ನಡ ಕಥನ ಸಾಹಿತ್ಯ – ಕಾದಂಬರಿ, ಜಿ. ಎಸ್. ಅಮೂರ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೬
- ಕನ್ನಡ ಸಾಹಿತ್ಯ ಚರಿತ್ರೆ, ರಂ. ಶ್ರೀ. ಮುಗಳಿ, ಗೀತಾ ಬುಕ್ ಹೌಸ್, ಮೈಸೂರು, ೧೯೯೩
- ಕನ್ನಡ ಸಾಹಿತ್ಯ ಮತ್ತು ಮಹಿಳೆ, ಸಬಿಹಾ ಭೂಮಿಗೌಡ, ಮಲ್ಲಿಕಾ ಘಂಟಿ (ಸಂ.), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬
- ಕನ್ನಡ ಸಾಹಿತ್ಯ ಸಂದರ್ಭ, ಜಿ. ಎಸ್. ಶಿವರುದ್ರಪ್ಪ (ಸಂ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦
- ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಚ್. ಎಸ್. ಶ್ರೀಮತಿ (ಸಂ.), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
- ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭
- ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

- ಕನ್ನಡದಲ್ಲಿ ಜನಪ್ರಿಯ ಸಾಹಿತ್ಯ. ವಿವಿಧ ಲೇಖಕರು. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೧೯೯೪
- ಕಾವ್ಯಾರ್ಥ ಚಿಂತನ. ಜಿ. ಎಸ್. ಶಿವರುದ್ರಪ್ಪ. ಶಾರದಾ ಪ್ರಕಾಶನ. ಬೆಂಗಳೂರು. ೧೯೮೮
- ಕುಟುಂಬ. ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ. ಫ್ರೆಡರಿಕ್ ಎಂಗೆಲ್ಸ್. ಪ್ರಗತಿ ಪ್ರಕಾಶನ. ಮಾಸ್ಕೋ. ೧೯೮೦
- ಕೈವಾರ ಸಾಹಿತ್ಯ ಸಮ್ಮೇಳನ. ಹಂ. ಪ. ನಾಗರಾಜಯ್ಯ. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು. ೧೯೮೪
- ಚಹರೆ. ಎಚ್. ಎಸ್. ಶ್ರೀಮತಿ. ಇಳಾ ಪ್ರಕಾಶನ. ಬೆಂಗಳೂರು. ೧೯೯೯
- ಜನಪ್ರಿಯ ಲೇಖಕಿ ಹೆಚ್. ಜಿ. ರಾಧಾದೇವಿ. ಶ್ರೀಲಕ್ಷ್ಮಿ. ಇಂದಿರಾ ಶಿವಣ್ಣ. ಕೀರ್ತಿ ಪ್ರಕಾಶನ. ಬೆಂಗಳೂರು. ೨೦೦೭
- ನವ್ಯತೆ. ನರಹರಿ ಬಾಲಸುಬ್ರಹ್ಮಣ್ಯ. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೧೯೯೦
- ನಾಡು-ನುಡಿಯ ರೂಪಕ: ಆಧುನಿಕತೆ ಮತ್ತು ಕನ್ನಡದ ಮೊದಲ ಕಾದಂಬರಿಗಳು. ಶಿವರಾಮ ಪಡಿಕ್ಕಲ್. ಪ್ರಸಾರಾಂಗ. ಮಂಗಳೂರು ವಿಶ್ವವಿದ್ಯಾನಿಲಯ. ಮಂಗಳೂರು. ೨೦೦೧
- ನಾರಿ: ದಾರಿ – ದಿಗಂತ. ವಿಜಯಾ ದಬ್ಬೆ. ರಚನಾ ಪ್ರಕಾಶನ. ಮೈಸೂರು. ೧೯೯೭
- ತ್ರಿವೇಣಿ. ಎನ್. ಗಾಯತ್ರಿ. ಜಾಗೃತಿ ಪ್ರಕಾಶನ. ಬೆಂಗಳೂರು. ೧೯೮೯
- ತ್ರಿವೇಣಿಯವರ ಕಾದಂಬರಿಗಳ ಮರು ಓದು. ಎಚ್. ಎಸ್. ಶ್ರೀಮತಿ. ತ್ರಿವೇಣಿ ಪಬ್ಲಿಕೇಷನ್ಸ್. ಮೈಸೂರು. ೧೯೯೯
- ದ ಸೆಕೆಂಡ್ ಸೆಕ್ಸ್ – ಒಂದು ಕನ್ನಡ ಓದು. ಎಚ್. ಎಸ್. ಶ್ರೀಮತಿ (ಅನು.). ಅಧ್ಯಯನ ಮಂಡಲ. ಬೆಂಗಳೂರು. ೨೦೦೭
- ಪ್ರಗತಿಶೀಲತೆ. ಎಚ್. ಎಸ್. ರಾಘವೇಂದ್ರರಾವ್. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೧೯೯೦
- ಫ್ಯಾಂಟಸಿ. ಆರ್. ವಿಜಯರಾಘವನ್ (ಅನು.). ಸಿ. ವಿ. ಜಿ. ಪಬ್ಲಿಕೇಷನ್ಸ್. ಬೆಂಗಳೂರು. ೨೦೦೫

- ಬರಹಗಾರ್ತಿಯ ಬದುಕು. ಅನುಪಮಾ ನಿರಂಜನ. ಡಿ. ವಿ ಕೆ. ಮೂರ್ತಿ. ಮೈಸೂರು. ೧೯೯೦
- ಬಯಲು-ರೂಪ - ಸಂಪುಟ ೨. ಸಿ. ಎನ್. ರಾಮಚಂದ್ರನ್. ಸಪ್ನ ಬುಕ್ ಹೌಸ್. ಬೆಂಗಳೂರು, ೨೦೦೩
- ಭಾರತೀಯ ಸ್ತ್ರೀವಾದ, ಎನ್. ಮನು ಚಕ್ರವರ್ತಿ (ಸಂ), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩
- ಭಾರತೀಯ ಕಾವ್ಯ ಮೀಮಾಂಸೆ, ತೀ. ನಂ. ಶ್ರೀಕಂಠಯ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೫೩
- ಬೇರು ಕಾಂಡ ಚಿಗುರು. ಕೆ. ವಿ. ನಾರಾಯಣ. ವಿವೇಕ ಪ್ರಕಾಶನ. ಬೆಂಗಳೂರು. ೧೯೯೭
- ಮಹಿಳೆ - ಸಮಾಜ ಮತ್ತು ಸಂಸ್ಕೃತಿ. ಆರ್. ಇಂದಿರಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨
- ಮಹಿಳೆ: ಅಸ್ತಿತ್ವದ ಸಂಕಥನ – ಒಂದು ಪರಿಕಲ್ಪನಾತ್ಮಕ ಅಧ್ಯಯನ, ಬಿ. ಆರ್. ಕವಿತಾ ರೈ , ಸಿ. ವಿ. ಜಿ. ಪಬ್ಲಿಕೇಷನ್ಸ್. ಬೆಂಗಳೂರು, ೨೦೦೫
- ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು. ಪ್ರೀತಿ ಶುಭಚಂದ್ರ, ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೨
- ಮಹಿಳೆ ದುಡಿಮೆ ಮತ್ತು ಬಿಡುವು . ಎಚ್. ಎಸ್. ಶ್ರೀಮತಿ. ಶಿವಾನಂದ ಎಸ್. ವಿರಕ್ತಮಠ. ಜೆ. ಕೃಷ್ಣ (ಸಂ.). ಮಹಿಳಾ ಅಧ್ಯಯನ ಕೇಂದ್ರ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೭
- ಮಾರ್ಕ್ಸವಾದಿ ಸಾಹಿತ್ಯ ವಿಮರ್ಶೆ. ಕೆ. ಕೇಶವಶರ್ಮ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೮
- ಲೇಖ-ಲೋಕ ೨ (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ). ನಾಗಮಣಿ ಎಸ್. ರಾವ್ (ಸಂ.). ಕರ್ನಾಟಕ ಲೇಖಕಿಯರ ಸಂಘ (ರಿ). ಬೆಂಗಳೂರು. ೧೯೯೯
- ಲೇಖ-ಲೋಕ ೩. (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ). ಕೆ. ಉಷಾ ಪಿ. ರೈ . ಕೆ. ಆರ್. ಸಂಧ್ಯಾ ರೆಡ್ಡಿ (ಸಂ.). ಕರ್ನಾಟಕ ಲೇಖಕಿಯರ ಸಂಘ (ರಿ). ಬೆಂಗಳೂರು. ೨೦೦೧

- ಲೇಖಕಿಯರ ಕೃತಿಗಳಲ್ಲಿ ಸ್ತ್ರೀಪಾತ್ರಗಳು, ಉಜ್ವಲಾ ಹಿರೆಮಠ (ಸಂ.), ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, , ಗುಲಬರ್ಗಾ, ೧೯೯೪
- ಲೇಖ-ಲೋಕ (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ), ವಿಜಯಾ ದಬ್ಬೆ (ಸಂ.), ಕರ್ನಾಟಕ ಲೇಖಕಿಯರ ಸಂಘ (ರಿ), ಬೆಂಗಳೂರು, ೧೯೯೮
- ಲೇಖ-ಲೋಕ ೪ (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ), ಕೆ. ಉಷಾ ಪಿ. ರೈ , ಕೆ. ಎಮ್. ವಿಜಯಲಕ್ಷ್ಮಿ (ಸಂ.), ಕರ್ನಾಟಕ ಲೇಖಕಿಯರ ಸಂಘ (ರಿ), ಬೆಂಗಳೂರು, ೨೦೦೩
- ವಿಜಯಾನ್ವೇಷಣ - ವಿಜಯಾದಬ್ಬೆ ಸಾಧನಪಥ ಮತ್ತು ಮಹಿಳಾ ಅಧ್ಯಯನದ ಆಯಾಮಗಳು, ಎಸ್. ಡಿ. ಶಶಿಕಲಾ, ಕೆ. ಎಸ್. ರತ್ನಮ್ಮ, ಮಂಜುಳಾ ಹುಲ್ಲಹಳ್ಳಿ (ಸಂ.), ಡಾ. ವಿಜಯಾದಬ್ಬೆ ಅಭಿನಂದನಗ್ರಂಥ ಸಮಿತಿ, ಮೈಸೂರು, ೨೦೦೪
- ಸಮಾಜ ಸಂಶೋದನೆ, ಎಂ. ಚಂದ್ರ ಪೂಜಾರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫
- ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಎಂ. ಉಷಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
- ಸಾಹಿತ್ಯ ಕಥನ - ವಿಮರ್ಶಾ ಲೇಖನಗಳ ಸಂಕಲನ, ಡಿ. ಆರ್. ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೬
- ಸಾಹಿತ್ಯ ವಿಮರ್ಶೆ, ಸಿ. ಎನ್. ರಾಮಚಂದ್ರನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯
- ಸಿನಿಮಾ (ಆಶಯ-ಅಭಿವ್ಯಕ್ತಿ), ವಿವಿಧ ಲೇಖಕರು, ಪ್ರತಿಭಾ ಯುವ ವೇದಿಕೆ, ಬೆಂಗಳೂರು, ೧೯೯೪
- ಸ್ತ್ರೀವಾದ ದಿಕ್ಸೂಚಿ, ಆರ್. ಇಂದಿರಾ, ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೫
- ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಎಲ್. ಜಿ. ಮೀರಾ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೪
- ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ - ಒಂದು ಪ್ರವೇಶಿಕೆ, ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

➢ ಸ್ತ್ರೀವಾದ, ಎಚ್. ಎಸ್. ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

➢ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ (ಸಂ.), ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೮

➢ ಸ್ತ್ರೀವಾದಿ ವಿಮರ್ಶೆ – ಸ್ವರೂಪ ಮತ್ತು ಪರಿಕಲ್ಪನೆಗಳು, ವಿಠಲರಾವ್ ಗಾಯಕ್ವಾಡ್ (ಅನು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

➢ ಸೇರಿಕೊಂಡ ಎಳೆಗಳು, ಎಚ್. ಎಸ್. ಶ್ರೀಮತಿ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

➢ ಹೆಣ್ಣು ಮತ್ತು ಭಾಷೆ, ಎಚ್. ಎಸ್. ಶ್ರೀಮತಿ, ಶಿವಾನಂದ ಎಸ್. ವಿರಕ್ತಮಠ, ಜೆ. ಕೃಷ್ಣ (ಸಂ.), ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

➢ ಹೆಡೆಯಂತಾಡುವ ಸೊಡರು, ಅರ್. ತಾರಿಣಿ ಸುಭದಾಯಿನಿ, ರೂಪ ಪ್ರಕಾಶನ, ಮೈಸೂರು, ೨೦೦೭

## ಇಂಗ್ಲಿಷ್


- A Literature of their Own: British Women Novelists, Bronte To Lessing, Elaine Showalter, Princeton University Press, New Jersey, 1977
- A Room of One's Own, Verginia Woolf, eBooks@Adelaide, 2004
- An Introduction to Cultural Theory & Popular Culture, John Storey, The University of Georgia Press, Athens, 1998
- Cultural Criticism: A Primer of Key Concepts, Arther Asa Berger, Sage Publications, New Delhi, 1995
- Cultural Theory and Popular Culture: A Reader, John Storey (Ed.), Harvester Wheatsheaf, New York, 1994
- Dancing in spite of Myself: Essays on Popular Culture, Lawrence Grossberg, Duke University Press, 1997
- Feminism – Postmodernism, Linda J. Nicholson (Ed.), rouledge, New York, 1990
- Feminism beside Itself, Diane Elam, Robyn Wiegman (Ed.), Routledge, New York, 1995
- Feminist Futures: Re-imagining Women, Culture and Development, Kum-Kum Bhavani, John Foran, Priya Kurian (Ed.), Zed Books, London, 2003
- Literature, Popular Culture and Society, Leo Lowenthal, Prentice Hall, New Jersey, 1961
- Packaging Freedom: Feminism and Popular Culture, Ipsita Chanda, Stree, Kolkata, 2003
- Postmodernism and Popular Culture, Angela McRobbie, Routledge, London, 1994
- Rediscovering Masculinity: Reason, Language & Sexuality, Victor J. Seidler, Routledge, London, 1989
- Sea Changes: Essays on Culture and Feminism, Cora Kalpan, Verso, London, 1986
- The Feminine Mystique, Betty Friedan, Norton, New York, 2001
- The Feminist Critique of Language: A Reader, Deborah Cameron (Ed.), Routledge, London, 1998

- The Second Sex, Semone de Beauvoir, Vintage, London, 1997
- Virtual Worlds: Culture and Politics in the Age of Cybertechnology, Pramod K. Nayar, Sage Publications, New Delhi, 2004

## ಅನುಬಂಧ ೪

## ಪಾರಿಭಾಷಿಕ ಪದಕೋಶ

| | |
|---|---|
| ಸ್ತ್ರೀತ್ವ | Femaleness |
| ಸ್ತ್ರೀಗುಣ | Womanish |
| ಸ್ತ್ರೀಯಾತ್ಮಕತೆ | Femininity |
| ಸ್ತ್ರೀವಾದ | Feminism |
| ಸ್ತ್ರೀವಾದಿ ಚರಿತ್ರೆ | Feminist History |
| ಸ್ತ್ರೀವಾದಿ ವಿಮರ್ಶೆ | Gynocriticism |
| ಮಹಿಳಾ ವಿಷಯಗಳು | Women's Issues |
| ಲಿಂಗ ಪಾತ್ರತೆ | Sex Roles |
| ಲಿಂಗಾಧಾರಿತ ವ್ಯವಸ್ಥೆ | Gender |
| ಮಹಿಳಾ ಸಬಲೀಕರಣ | Women's Empowerment |
| ಪುರುಷ ಲೈಂಗಿಕತೆ | Male sexuality |
| ಪುರುಷಾತ್ಮಕವಾದ | Masculinism |
| ಪುರುಷಾತ್ಮಕತೆ | Masculinity |
| ತೀವ್ರಗಾಮಿ ಸ್ತ್ರೀವಾದ | Radical Feminism |
| ಮಾರ್ಕ್ಸ್‌ವಾದಿ ಸ್ತ್ರೀವಾದ | Marxist Feminism |
| ಜೀವಪರಿಸರ ಸ್ತ್ರೀವಾದ | Ecological Feminism |
| ಪಿತೃಪ್ರಧಾನತೆ | Patrarchy |
| ಹೆಣ್ಣು | Female |
| ಹೆಣ್ಣುತನ | Feminine |
| ಮಹಿಳಾ ಅಧ್ಯಯನ | Women's Studies |
| ಮಹಿಳಾ ಸಂಕಥನ | Women's Discourse |
| ಲೈಂಗಿಕ ರಾಜಕಾರಣ | Sexual Politics |
| ಶಿಶ್ನ ಕೇಂದ್ರಿತ | Phallo centric |
| ಸಾಮಾಜಿಕ ಸಂಕಥನ | Social Discourses |
| ಜೈವಿಕ ಲಿಂಗತ್ವ | Sex |

